ತಲೂ ಮುಂದಿನ ನಾರ್ತಂಬ್ರಿಯನ್ ಇಂಜನನ್ನು ಜಾರ್ಜ್ ಸ್ಟೈಫೆನ್ಸನ್ನನೇ ನಡೆಯಿಸಿದನು. ಮಿಕ್ಕ ಇಂಜನುಗಳನ್ನು ಅವನ ತಮ್ಮನೂ ಮಗನೂ ಮತ್ತು ಮುಖ್ಯರಾದ ಶಿಷ್ಯರೂ ನಡೆಯಿಸಲು ಸಿದ್ಧರಾದರು. ರಸ್ತೆಯುದ್ದಕ್ಕೂ ನೆರೆದಿದ್ದ ಸಹಸ್ರಾರುಮಂದಿ ಪ್ರಜೆಗಳು ಆ ಅಪೂರ್ವನೋಟವನ್ನು ನೋಡಿ, ಕಿವಿಗಳು ಕಿವುಡಾಗುವಂತೆ ಮಾಡುತ್ತಿದ್ದ ಜಯಘೋಷಗಳಿಂದ ಆ ಪ್ರಯಾಣವು ಪ್ರಾರಂಭವಾಯಿತು. ಆ ಶುಭ ಪ್ರಯಾಣದಲ್ಲಿ ಅಪಾಯವುಂಟಾಗದಂತೆ ಎಷ್ಟುಮಟ್ಟಿನ ಜಾಗರೂಕತೆಯನ್ನು ವಹಿಸಿದ್ದರೂ ದುರ್ದೈವವಶವಾಗಿ ಒಂದು ಅಪಾಯ ನಡೆದುಹೋಯಿತು. ಲಿವರ್ಪೂಲನಿಂದ ಹದಿನೇಳು ಮೈಲು ದೂರದಲ್ಲಿ, ನೀರು ತೆಗೆದುಕೊಳ್ಳಲಿಕ್ಕಾಗಿ ಬಂಡಿ ನಿಂತಿದ್ದಾಗ ಕೆಳಕ್ಕೆ ಇಳಿದಿದ್ದ ಪಾರ್ಲಿಮೆಂಟ್ ಮೆಂಬರು ಮಿ॥ ಹಸ್ಕಿಸ್ಸನ್ ಎಂಬಾತನಮೇಲೆ ಬಂಡಿಯು ಹರಿದು ಆತನು ಬಹು ಅಪಾಯಹೊಂದಿ ಆ ದಿನ ಸಾಯಂಕಾಲವೇ ಮೃತನಾದನು. ಆ ದಿನ ಆ ಸಂಬಂಧದಲ್ಲಿ ನಡೆಯಬೇಕೆಂದು ಏರ್ಪಟ್ಟಿದ್ದ ಅನೇಕ ಸಂತೋಷಕೂಟಗಳು ಬಹು ವ್ಯಸನದಿಂದ ನಿಂತುಹೋದುವು. ಆದರೆ ಮೊದಲೇ ಏರ್ಪಟ್ಟಿದಂತೆ ಪ್ರಯಾಣವು ಮಾತ್ರ ಮ್ಯಾಂಚೆಸ್ಟರ್‌ವರೆಗೆ ಹೋಗಿ ಒಡನೆ ಹಿಂದಿರುಗತಕ್ಕದೆಂದು ಡ್ಯೂಕನು ಆಜ್ಞಾಪಿಸಿದನು.

ಸ್ಟಾಕ್‌ಟನ್ ಮತ್ತು ಡಾರ್ಲಿಂಗ್‌ಟನ್‌ಗಳಲ್ಲಿ ಪ್ರಾರಂಭಿಸಿದ್ದ ರೈಲುಮಾರ್ಗಗಳಿಗಿಂತಲೂ, ಈ ರಸ್ತೆಯು ಉತ್ಕೃಷ್ಟ ತರಗತಿಯದಾಗಿ ಪರಿಣಮಿಸಿತು. ದಿನವೊಂದಕ್ಕೆ ೫೦೦ ಮಂದಿ ಪ್ರಯಾಣಮಾಡಲು ಸಾಧ್ಯವಾದೀತೋ ಎಂದು ಸಂದೇಹಗೊಂಡಿದ್ದ ಡೈರೆಕ್ಟರಿಗೆ ಪ್ರಾರಂಭದಲ್ಲೇ ೧೨೦೦ ಜನರು ಪ್ರಯಾಣಮಾಡಿದ್ದನ್ನು ಕಂಡು ಪರಮಾಶ್ಚರ್ಯವಾಯಿತು. ರೈಲು ಮೂಲಕ ಗಂಟೆಯೊಂದಕ್ಕೆ ಹತ್ತು ಮೈಲುಗಳಂತೆ ಪ್ರಯಾಣ ಸೌಕರ್ಯವು ಏರ್ಪಡಬಹುದೆಂದು ಇಂಜನಿಯರುಗಳೇ ಲೆಕ್ಕಹಾಕಿದ್ದರು. ಆದರೆ ಗಂಟೆಯೊಂದಕ್ಕೆ ೨೪ ರಿಂದ ೩೦ ಮೈಲುಗಳವರೆಗೆ ಓಡುತ್ತಿದ್ದ ಇಂಜನುಗಳನ್ನು ನೋಡಿ ಅವರೇ ಏನು ಹೇಳಲೂ ತೋರದೆ, ಸ್ಟೈಫೆನ್ಸನ ಸಾಮರ್ಥ್ಯಕ್ಕೆ ತಲೆದೂಗಿದರು.

ರೈಲುಮಾರ್ಗದ ಪ್ರಯೋಜನವು ದಿನದಿನಕ್ಕೆ ಹೆಚ್ಚುತ್ತ ನಡೆಯಿತು.

ಪ್ರಾರಂಭಕ್ಕೆ ಅದರ ವಿಷಯದಲ್ಲಿ ದೋಷವನ್ನೂ ಅಸಹನೆಯನ್ನೂ ವ್ಯಕ್ತ ಪಡಿಸಿದ್ದ ಅನೇಕರು ಈಗ ಅದನ್ನು ಹೊಗಳತೊಡಗಿದರು. ಪ್ರಾರಂಭಕ್ಕೆ ರಸ್ತೆಯನ್ನು ಹಾಕಲು ತಮ್ಮ ಭೂಮಿಯನ್ನು ಕೊಡಲು ಒಪ್ಪದಿದ್ದವರೂ, ಹಲವು ಬಗೆಯ ಅಡಚಣೆಗಳನ್ನು ತಂದೊಡ್ಡಿದವರೂ ಈಗ ತಮಗೆ ಆ ಲಾಭವು ತಪ್ಪಿಹೋಯಿತಲ್ಲಾ ಎಂದು ಮರುಗತೊಡಗಿದರು. ರೈಲುಮಾರ್ಗದ ಉಭಯಪಾರ್ಶ್ವಗಳಲ್ಲೂ, ಮನೆಗಳೂ, ಪ್ರಾರ್ಥನಾಮಂದಿರಗಳೂ, ಅಂಗಡಿ ಮುಂಗಟ್ಟುಗಳೂ ಏರ್ಪಾಡಾದುವು.

ಲಿವರ್ಪೂಲ್ ಮ್ಯಾಂಚೆಸ್ಟರು ಮಾರ್ಗವು ಪ್ರಾರಂಭವಾಗಿ ಒಂದು ಒಂದೂವರೆವರ್ಷಕಾಲ ಕೆಲಸಮಾಡಿದಮೇಲೆ, ಸ್ಟೀವೆನ್ಸನ್ನನಮೇಲೆ ಮತ್ತಾವಬಗೆಯ ಆಕ್ಷೇಪವೂ ಉಳಿದಿರಲಿಲ್ಲ. ಆದರೆ ಆತನು ತನ್ನ ಫ್ಯಾಕ್ಟರಿಯಲ್ಲೇ ತಯಾರಾದ ಇಂಜಿನುಗಳನ್ನೇ ಉಪಯೋಗಿಸುತ್ತ ಬೇರೆಯವರ ಇಂಜಿನುಗಳಿಗೆ ಉತ್ತೇಜನ ಕೊಡುತ್ತಿಲ್ಲವೆಂದೂ, ಕೆಲಸಕಾರ್ಯಗಳಿಗೆ ತನ್ನ ಅನುಬಂಧಿಗಳನ್ನೂ ಶಿಷ್ಯರನ್ನೂ ಅಲ್ಲದೆ ಹೊರಗಿನವರನ್ನು ಸೇರಿಸಿಕೊಳ್ಳುತ್ತಿಲ್ಲವೆಂದೂ ಸ್ವಾರ್ಥಿಗಳಾದ ಕೆಲವರು ಆಕ್ಷೇಪಿಸಲಾರಂಭಿಸಿದರು. ಆದರೆ ಸ್ಟೀವೆನ್ಸನ್ನನ ಗುಣನಡತೆಗಳನ್ನು ತಿಳಿದಿದ್ದ ಕೆಲಮಂದಿ ನಿಷ್ಪಕ್ಷಪಾತಿಗಳು, ಡೈರೆಕ್ಟರುಗಳು ಏರ್ಪಡಿಸಿದ್ದ ಪೋಟಾಪೋಟಿಯಲ್ಲಿ ಕೊನೆಯವರೆಗೂ ಬೇರೆ ಯಾವ ಇಂಜಿನೂ ಆತನ ಇಂಜಿನೊಂದಿಗೆ ಜಯಶಾಲಿಯಾಗದೆ ಸೋತು ಹೋದುದರಿಂದ ಆತನ ಯಂತ್ರಗಳನ್ನೇ ಉಪಯೋಗಿಸಬೇಕಾಯಿತೆಂದೂ, ಈ ಹೊಸ ಉದ್ಯೋಗವನ್ನು ಕಲಿತು ಅನುಭವಹೊಂದಿದವರು ಸಿಕ್ಕುವುದು ದುರ್ಲಭವಾದುದರಿಂದ ಸಧ್ಯಕ್ಕೆ ಆತನ ಬಳಿಯಲ್ಲಿದ್ದು ಅನುಭವಗೊಂಡವರನ್ನೇ ಸೇರಿಸಿಕೊಂಡು ಕೆಲಸ ಸಾಗಿಸುತ್ತಿದ್ದಾನೆಂದೂ, ಪತ್ರಿಕೆಗಳಲ್ಲಿ ಸಮಾಧಾನಕರವಾದ ಲೇಖನಗಳನ್ನು ಬರೆದು ಆತನಮೇಲಿದ್ದ ಆ ಅಪವಾದವನ್ನೂ ನಿವಾರಿಸಿದರು. ಈ ಲಿವರ್ಪೂಲ್ ಮ್ಯಾಂಚೆಸ್ಟರ್ ರೈಲುಮಾರ್ಗವು ಪ್ರಾರಂಭವಾದುದರಿಂದ ಜಾರ್ಜ್ ಸ್ಟೀವೆನ್ಸನ್ನ ಕೀರ್ತಿಯು ಯೂರೋಪು ಖಂಡದಲ್ಲೇ ಹಬ್ಬಲು ಅವಕಾಶವಾಯಿತು.



## ಅಧ್ಯಾಯ ೬ "ಕೊನೆಯ ವರ್ಷಗಳು— ಮೃತಿ"

'ಅದೃಷ್ಟಪರೀಕ್ಷೆ' ಯೆಂಬ ಒಂದು ಹೇಳಿಕೆಯುಂಟಲ್ಲವೆ? ಹಾಗೆಂದರೆ ಪ್ರತಿಯೊಬ್ಬನ ಪ್ರಾಪ್ತಿಯಲ್ಲೂ ಏನಿದೆಯೆಂಬುದು ಅವನಿಗೆ ಗೋಚರಕ್ಕೆ ಬಂದು ಅವನಿಗೆ ಲಭ್ಯವಾಗುವಿಕೆಯಲ್ಲಿ ನಡೆವ ಅದೃಶ್ಯವಾದ ಪರೀಕ್ಷೆ! ಇಂತಹ ಅದೃಷ್ಟ ಪರೀಕ್ಷೆಯು ಹೆಚ್ಚುಕಡಮೆ ಪ್ರತಿಯೊಬ್ಬನ ಜೀವಮಾನದಲ್ಲೂ ಒದಗುತ್ತದೆ. ಕೆಲವರಿಗೆ ಬಡತನದ ರೂಪದಲ್ಲಿ, ಕೆಲವರಿಗೆ ಕಾಮ ಕ್ರೋಧಾದಿ ಅಂತಃಶತ್ರುಗಳ ರೂಪದಲ್ಲಿ, ಮತ್ತೆ ಕೆಲವರಿಗೆ ಬಂಧುಮಿತ್ರಾದಿಗಳ ಅಗಲುವಿಕೆ, ದೇಶಭ್ರಷ್ಟತೆ, ಅರ್ಥಹಾನಿ ಮಾನಹಾನಿ ಮುಂತಾದುವುಗಳ ರೂಪದಲ್ಲಿ ಈ ಅದೃಷ್ಟ ಪರೀಕ್ಷೆಯು ನಡೆಯುತ್ತಿದೆ. ಧೀರರಾದವರು ಸುಳಿಸೆಳೆವುಗಳಿಂದ ಕೂಡಿದ ಈ ಭೀಕರ ಪ್ರವಾಹದಲ್ಲಿ ಈಜಿಪಾರಾಗಿ ಜಯಿಸುವರು. ಇಂಥವರಿಗೆ ಜಯಲಕ್ಷ್ಮಿಯು ಒಲಿದು ಮಾಲೆಹಾಕುವಳು. ಮುಂದೆ ಅವರ ಜೀವಿತವು ಸುಖಮಯವಾಗುವುದು. ಮತ್ತೆ ಕೆಲವರು, ತಮ್ಮನ್ನು ಪ್ರತಿಭಟಿಸಿದ ಕಷ್ಟ ತಾಪತ್ರಯಗಳೆಂಬ ಪ್ರವಾಹದ ವೇಗವನ್ನು ನೋಡಿ ಬೆದರಿ ಬೆಂಡಾಗಿ ಪ್ರಯತ್ನಶೂನ್ಯರಾಗಿ ತಟಸ್ಥರಾಗಿಬಿಡುವರು. ಅವರು ಜೀವಾವಧಿ ಹತಭಾಗ್ಯರಾಗಿ ನರಳುವುದು ತಪ್ಪದು.

ಜಾರ್ಜ್ ಸ್ಟೀವನ್‌ಸನ್ನನ ಅದೃಷ್ಟ ಪರೀಕ್ಷೆಯು, ಮೇಲಿನ ಅಧ್ಯಾಯಗಳಲ್ಲಿ ಹೇಳಿದಂತೆ ಹಲವು ಬಗೆಗಳಲ್ಲಿ ನಡೆದು, ಆತನು ಜಯಶೀಲನಾಗಿದ್ದನು ರಾಕೆಟ್ ಎಂಬ ಯಂತ್ರವಿಶೇಷವನ್ನು ಕಂಡುಹಿಡಿದುದರೊಂದಿಗೆ ಆತನ ಅದೃಷ್ಟತರುವು ಫಲಿಸಿತೆಂದು|ಹೇಳಬಹುದು. ಲಿವರ್‌ಪೂಲ್ ಮ್ಯಾಂಚೆಸ್ಟರ್ ರೈಲ್‌ರಸ್ತೆಯ ಕಾರ್ಯವು ಮುಗಿದು ಜಯಪ್ರದವಾದುದರಿಂದ, ಆತನ ಶಕ್ತಿಸಾಮರ್ಥ್ಯದಲ್ಲೂ, ಆತನ ಯಂತ್ರಗಳ ಯೋಗ್ಯತೆಯ ವಿಷಯದಲ್ಲೂ ಯಾರಿಗೂ ಸಂದೇಹ ಉಳಿಯಲಿಲ್ಲ. ಇಂಗ್ಲೆಂಡಿನ ಇತರ ಭಾಗಗಳವರೂ, ತಮ್ಮ ಪ್ರಾಂತದಲ್ಲಿ ರೈಲುಮಾರ್ಗಗಳನ್ನು ಹಾಕಿಸಿಕೊಂಡು ಪ್ರಯಾಣಸೌಕರ್ಯವನ್ನೂ ವ್ಯಾಪಾರ ಉದ್ಯೋಗಗಳ ಆನುಕೂಲ್ಯವನ್ನೂ ಹೆಚ್ಚಿಸಿಕೊಳ್ಳಬಹುದೆಂದು ಯೋಚಿಸಿ ಅಲ್ಲಲ್ಲಿ ಕಂಪೆನಿಗಳನ್ನು ಏರ್ಪಡಿಸಿಕೊಂಡರು. ಜಾರ್ಜ್ ಸ್ಟೀವನ್‌ಸನ್ನನಿಗೂ, ಆತನ ಮಗ ರಾಬರ್ಟ್ ಸ್ಟೀವನ್‌ಸನ್ನನಿಗೂ, ಆತನ ಶಿಷ್ಯಪ್ರಶಿಷ್ಯರಾದ ಕೆಲಸಗಾರರಿಗೂ ಮೇಲೆಮೇಲೆ ಹಲವು

ಕಡೆಯಿಂದ ಆಹ್ವಾನಗಳು ಬರತೊಡಗಿದುವು. ಆತನು ಕೈಗೊಂಡ ಕಾರ್ಯಕ್ಕೆ ಜಯವು ಸಿದ್ಧ ಎಂಬ ಮಾತು ಎಲ್ಲರಿಗೂ ಮನದಟ್ಟಾಯಿತು.

ಲಿವರ್‌ಪೂಲ್‌ನಿಂದ ಮ್ಯಾಂಚೆಸ್ಟರಿಗೆ ಆದ ರೈಲುಮಾರ್ಗವು, ಕ್ರಮ ಕ್ರಮವಾಗಿ ಮುಂದರಿಸಿತು. ಅವುಗಳಂತೆಯೇ ವ್ಯಾಪಾರ ಉದ್ಯೋಗ ಮುಂತಾದುವುಗಳಿಗೆ ಹೆಸರಾದ ಬರ್ಮಿಂಗ್‌ಹ್ಯಾಂ, ಲೀಡ್ಸ್, ಲಂಡರ್, ನಾರ್ಥಾಂಟನ್ ಮುಂತಾದ ಹಲವು ಪಟ್ಟಣಗಳಿಗೆ ರೈಲುಮಾರ್ಗಗಳಾಗಲು ಪ್ರಯತ್ನಗಳು ನಡೆದುವು. ಲಂಡನ್ ಮತ್ತು ಬರ್ಮಿಂಗ್‌ಹ್ಯಾಂಗಳ ಮಧ್ಯದ ರಸ್ತೆಯ ತಯಾರಿಯು ಸ್ಟೀವನ್ಸನ ಮೇಲ್ವಿಚಾರಣೆಗೇ ಒಳಪಟ್ಟಿತು. ಈ ಮಾರ್ಗದಲ್ಲಿ ಕೆಲಸಮಾಡುವಾಗಲೇ, ರಸ್ತೆಯಾಗುವ ಸ್ಥಳದ ಪಕ್ಕದಲ್ಲಿ ಕಲ್ಲಿದ್ದಲು ಸಿಕ್ಕಬಹುದಾದ ಸೂಚನೆಗಳು ಕಂಡುಬರಲು, ತನ್ನ ಮಗನ ಸಲಹೆಯನ್ನನುಸರಿಸಿ, ಜಾರ್ಜ್ ಸ್ಟೀವನ್ಸನು, ಆ ಕಲ್ಲಿದ್ದಲ ಗಣಿಯಿದ್ದ ಪ್ರದೇಶವನ್ನು ಕ್ರಯಕ್ಕೆ ಪಡೆದು, ಕೆಲಸಗಾರರನ್ನಿಟ್ಟು ಕೆಲಸಕ್ಕೆ ಪ್ರಾರಂಭಿಸಿದನು. ಕೆಲವು ದಿನಗಳಲ್ಲೇ ಅಲ್ಲೊಂದು ಗ್ರಾಮವು ಬೆಳೆಯಿತು. ಅಲ್ಲಿಯ ಕೆಲಸಗಾರರ ಅನುಕೂಲಕ್ಕಾಗಿ, ಅಂಗಡಿ ಮುಂಗಟ್ಟುಗಳೂ, ಒಂದು ಪ್ರಾರ್ಥನಾಲಯವೂ, ಪಾಠಶಾಲೆ ಆಸ್ಪತ್ರೆ ಮುಂತಾದುವೂ ರಚನೆಯಾದುವು ಜಾರ್ಜ್ ಸ್ಟೀವನ್ಸನು ಐವತ್ತು ವರ್ಷಗಳ ವಯಸ್ಕನಾಗಿದ್ದರೂ ಲೇಶವೂ ಬೇಸರವಿಲ್ಲದೆ,ಆಯಾಸವೆಂಬುದಿಲ್ಲದೆ, ದಿನವೊಂದಕ್ಕೆ ಹದಿನಾರು ಹದಿನೆಂಟು ಗಂಟೆಗಳಕಾಲ ಒಂದೇ ಸಮನಾಗಿ ಕೆಲಸಮಾಡುತ್ತಲಿದ್ದನು. ೧೮೩೬ ನೆಯ ಸಂ|| ದಲ್ಲಿ ಆತನು ಐದು ರೈಲ್ವೆ ಕಂಪೆನಿಗಳಿಗೆ ಮುಖ್ಯನಾದ ಇಂಜನಿಯರ್ ಆಗಿ ಅವೆಲ್ಲವುಗಳ ಆಡಳಿತವನ್ನೂ ನಡೆಸುತ್ತಿದ್ದನು. ಇದಕ್ಕಾಗಿ ಆತನು ತನ್ನ ಗುಮಾಸ್ತೆಗೆ ದಿನವೊಂದಕ್ಕೆ ಹನ್ನೆರಡು ಗಂಟೆಗಳವರೆಗೆ ಹೇಳಿ ಬರೆಸುತ್ತಿದ್ದ ಲೆಕ್ಕ - ಕಾಗದಪತ್ರಗಳೇ ವಿಶೇಷವಾಗಿದ್ದುದರೊಂದಿಗೆ ಒಂದೆಡೆಯಿಂದ ಮತ್ತೊಂದು ಸ್ಥಳಕ್ಕೆ ಮಾಡಬೇಕಾಗಿದ್ದ ಪ್ರಯಾಣವೂ ವಿಶೇಷವಾಗಿತ್ತು - ಇಂಗ್ಲೆಂಡಿನಲ್ಲಿ ರೈಲ್ವೇಯಿಂದ ಆಗುತ್ತಿದ್ದ ಪ್ರಯೋಜನವನ್ನು ಕಂಡ ಸ್ಕಾಟ್ಲೆಂಡ್ ಮತ್ತು ಐರ್ಲೆಂಡು ದೇಶಗಳವರೂ ತಮ್ಮತಮ್ಮ ದೇಶಗಳಲ್ಲಿ ರೈಲುಮಾರ್ಗಗಳನ್ನು ಹಾಕಿಸಿಕೊಳ್ಳಬೇಕೆಂದು ಅಪೇಕ್ಷಿಸಿದರು. ೧೮೩೬ರಲ್ಲಿ ಸ್ಕಾಟ್ಲೆಂಡ್ ಮತ್ತು ಐರ್ಲೆಂಡ್‌ಗಳಲ್ಲಿ ರೈಲ್ವೇಕಾಮಗಾರಿಗಳು ಪ್ರಾರಂಭ

ನಾದುವು. ಜನಗಳಿಗೆ ಅದೊಂದು ಲಾಭದಾಯಕವಾದ ಉದ್ಯೋಗವೆಂದು ಮನಸ್ಸಿಗಂಟಿತು. ದುಡ್ಡಿದ್ದವರೆಲ್ಲರೂ ಅದಕ್ಕೆ ನುಗ್ಗಲಾರಂಭಿಸಿದರು. ದಿನದಿನಕ್ಕೆ ರೈಲುಮಾರ್ಗದಲ್ಲಿ ಪ್ರಯಾಣವು ಸುಕರವೆಂದೂ, ಮಿತವ್ಯಯದಿಂದ, ಶೀಘ್ರಕಾಲದಲ್ಲಿ ಸಾಗತಕ್ಕುದೆಂದೂ ಪ್ರಜಾಸಾಮಾನ್ಯದಲ್ಲಿ ತಿಳಿವಳಿಕೆಗೆ ಬಂದಿತು. ಶ್ರೀಮಂತರು ಬಡವರೆನ್ನದೆ ಸಕಲರೂ ಹಿಂದಿದ್ದ ಕೋಚ್ ಗಾಡಿ (*Stage coach*)ಗಳ ಪ್ರಯಾಣಕ್ಕಿಂತಲೂ ಕ್ಷೇಮಕರವೆಂದು ತಿಳಿದು, ರೈಲುಗಾಡಿಗಳಲ್ಲೇ ಪ್ರಯಾಣಮಾಡತೊಡಗಿದರು. ವಿಕ್ಟೋರಿಯಾ ಚಕ್ರವರ್ತಿನಿಯು ೧೮೪೨ನೆಯ ಸಂವತ್ಸರದಲ್ಲಿ ತನ್ನ ವಿಂಡ್ಸರ್ ಅರಮನೆಯಿಂದ ಲಂಡನ್ ನಗರಕ್ಕೆ ರೈಲುಗಾಡಿಯ ಮೂಲಕ ಪ್ರಯಾಣಮಾಡಲಾರಂಭಿಸಿದಾಗಿನಿಂದಲಂತೂ,- ದುರಭಿಮಾನಿಗಳಾದ ಕೆಲಮಂದಿ ಶ್ರೀಮಂತರೂ-ಸಹ, ತಾವು ಬಡವರೊಂದಿಗೆ ಒಂದೇ ಸಮನಾಗಿ ರೈಲಿನಲ್ಲಿ ಕುಳಿತು ಪ್ರಯಾಣಮಾಡಬಹುದೇ, ಎಂಬ ತಮ್ಮ ಶ್ರೀಮದ್ಗಾಂಭೀರ್ಯವನ್ನು ಬದಿಗಿಟ್ಟು, ರೈಲುಮಾರ್ಗವನ್ನು ಉಪಯೋಗಿಸತೊಡಗಿದರು.

ಕ್ರಮಕ್ರಮವಾಗಿ ರೈಲುಮಾರ್ಗವು ದೇಶದಲ್ಲೆಲ್ಲ ಹರಡಿತು. ರೈಲ್ವೆ ಕಂಪೆನಿಯಲ್ಲಿ ಭಾಗ (*Share*) ತೆಗೆದುಕೊಳ್ಳುವುದು ಬಹು ಲಾಭಕರವಾದ ವ್ಯವಹಾರವೆಂದು ತೋರಿಬಂದು ದೊಡ್ಡವರೆನ್ನದೆ ಬಡವರೆನ್ನದೆ, ಶ್ರೀಮಂತನಿಂದ ಕೂಲಿಗಾರನವರೆಗೂ ಸಕಲರೂ ಅದರ 'ಷೇರು'ಗಳನ್ನು ಪಡೆಯತೊಡಗಿದರು. ಪ್ರತ್ಯಕ್ಷ ದುಡ್ಡನ್ನೇ ಬೆಳೆಯುತ್ತಿದ್ದ ಆ ಕಲ್ಪವೃಕ್ಷದಿಂದ ಸಂಪೂರ್ಣ ಪ್ರತಿಫಲವನ್ನು ಪಡೆಯಬೇಕೆಂದು ತಮ್ಮ ಸರ್ವಸ್ವವನ್ನೂ ಅದರ 'ಷೇರು'ಗಳಿಗಾಗಿ ಹಾಕಿ, ತಮ್ಮ ದುರಾಸೆಗೆ ಪ್ರತಿಫಲವಾಗಿ ಎಲ್ಲವನ್ನೂ ನೀಗಿಕೊಂಡು ನಿರ್ಗತಿಕರಾದವರೂ ಉಂಟು. ಈ ಸಂಪಾದನೆಯಲ್ಲಿ ಸತ್ಯ ಧರ್ಮ - ನ್ಯಾಯನೀತಿಗಳನ್ನೆಲ್ಲ ಬದಿಗೊತ್ತಿ, ಹಲವರು ವ್ಯವಹಾರ ನಡೆಸಿ, ಆ ಉದ್ಯೋಗದ ಹೆಸರನ್ನೂ ಕೆಡಿಸಿ, ತಮ್ಮ ಕೀರ್ತಿಯನ್ನೂ ಕಳಂಕಗೊಳಿಸಿಕೊಂಡರು. ಆದರೆ ನಮ್ಮ ಕಥಾನಾಯಕನು ಮಾತ್ರ ಅನ್ಯಾಯಮಾರ್ಗದಿಂದ, ತನ್ನ ಹೆಸರಿಗೆ ಕಳಂಕ ತರುವ ಅಂತಹ ಯಾವ ವ್ಯವಹಾರಕ್ಕೂ ಪ್ರವೇಶಿಸದೆ ಕೊನೆಯವರೆಗೂ ತನ್ನ ಸತ್ಯಸಂಧತೆಯನ್ನೂ ನಿರ್ಮಲ ಚರಿತ್ರೆಯನ್ನೂ ಕಾಪಾಡಿಕೊಂಡನು.

ಜಾರ್ಜ್ ಸ್ಟೀವೆನ್ಸನಿಂದ ತಯಾರಿಸಲ್ಪಟ್ಟ ಇಂಜಿನುಗಳ ಕೀರ್ತಿಯು ಹತ್ತಿರದ ದೂರದ ಎಲ್ಲಾ ಸ್ಥಳಗಳಿಗೂ ಹಬ್ಬಿತು. ಲಿವರ್ಪೂಲ್ ಮ್ಯಾಂಚೆಸ್ಟರು ರೈಲ್ವೇಯು ಪ್ರಾರಂಭವಾಗುವುದಕ್ಕೆ ಮುಂಚೆಯೇ ಅಮೆರಿಕದ ಸಂಯುಕ್ತ ಸಂಸ್ಥಾನಗಳಲ್ಲಿ ಆತನಿಂದ ಇಂಜಿನುಗಳನ್ನು ಮಾತ್ರ ತರಿಸಿಕೊಂಡು ರೈಲುಮಾರ್ಗವನ್ನು ಸ್ಥಾಪಿಸಿಕೊಂಡಿದ್ದರು. ಒಂದೇ ಸಮನಾಗಿ ಇಪ್ಪತ್ತು ವರ್ಷಗಳಕಾಲ ಕೆಲಸಮಾಡಿದರೂ ಅವು ಕೆಡದೆ ಅತ್ಯುತ್ತಮ ರೀತಿಯಿಂದ ಇನ್ನೂ ಕೆಲಸಮಾಡುತ್ತಿವೆಯೆಂದು ಅಮೆರಿಕದವರು ಆತನ ಇಂಜಿನುಗಳ ಉತ್ಕೃಷ್ಟತೆಯನ್ನು ಹೊಗಳಿದರು. ಕಾರ್ಯಾಂತರವಾಗಿ ಇಂಗ್ಲೆಂಡಿಗೆ ಬಂದಿದ್ದ ಬೆಲ್ಜಿಯಂ ದೇಶದ ರಾಜನು, ರೈಲುಗಾಡಿಗಳ ಉಪಯುಕ್ತತೆಯನ್ನು ಕಂಡುಕೊಂಡು, ಅವುಗಳನ್ನು ತನ್ನ ದೇಶದಲ್ಲೂ ಸ್ಥಾಪಿಸಲಿಚ್ಛಿಸಿ, ೧೮೩೫ನೆಯ ಸಂ|ದಲ್ಲಿ ಜಾರ್ಜ್ ಸ್ಟೀವೆನ್ಸನನ್ನು ಸಲಹೆ ಕೇಳಲಿಕ್ಕಾಗಿ ತನ್ನ ದೇಶಕ್ಕೆ ಆಹ್ವಾನಿಸಿದನು ಆ ರಾಜಾಹ್ವಾನದಿಂದ ಬೆಲ್ಜಿಯಂ ದೇಶಕ್ಕೆ ಪ್ರಯಾಣಮಾಡಿದ ಆತನು, ಸಕಲ ವಿಷಯಗಳಲ್ಲೂ ರಾಜನಿಗೆ ತೃಪ್ತಿಕರವಾದ ಸಲಹೆಗಳನ್ನಿತ್ತು ಆ ರಾಜನಿಂದ ಶ್ರೀಮಂತ ಪದವಿ (*Knight of the Order of Leopold*)ಯನ್ನು ಪಡೆದು ಗೌರವಿಸಲ್ಪಟ್ಟನು. ಇದಾದ ತರುವಾಯ ಆತನು ಮತ್ತೆರಡುಬಾರಿ ಆ ದೇಶವನ್ನು ಸಂದರ್ಶಿಸಿದನು ಆ ಎರಡು ಸಂದರ್ಭಗಳಲ್ಲೂ ರಾಜನೂ, ಆ ದೇಶದ ಘನವಂತರೂ ಆತನನ್ನು ವಿಶೇಷ ರೀತಿಯಿಂದ ಗೌರವಿಸಿದರು. ಆತನ ಪ್ರತಿರೂಪವನ್ನು ತಯಾರಿಸಿಟ್ಟು, ಆತನ 'ರಾಕೆಟ್' ಎಂಬ ಯಂತ್ರವಿಶೇಷದ ಪ್ರತಿರೂಪವನ್ನು ತಯಾರಿಸಿಟ್ಟು, ಸಂತೋಷಕೂಟಗಳನ್ನೇರ್ಪಡಿಸಿ ಅಲ್ಲಿ ಅವುಗಳನ್ನು ಪ್ರದರ್ಶಿಸಿ ಆತನನ್ನು ಬಹುಮಾನಿಸಿದರು. ರಾಜನು ಆತನನ್ನು ತನ್ನೊಂದಿಗೆ ಭೋಜನಕ್ಕೆ ಆಹ್ವಾನಿಸಿ ಗೌರವಿಸಿದನು. ಸ್ಟೀವೆನ್ಸನನು ಆ ದೇಶದಲ್ಲಿ ಕಲ್ಲಿದ್ದಲುಗಣಿಗಳನ್ನು ಸ್ಥಾಪಿಸಲು ಇರುವ ವಿಸ್ತಾರವಾದ ಅನುಕೂಲತೆಗಳನ್ನೆಲ್ಲ ಅವರಿಗೆ ತೋರಿಸಿಕೊಟ್ಟು ಅವರಿಂದ ವಿಶೇಷವಾಗಿ ಸನ್ಮಾನಿತನಾದನು ತರುವಾಯ ಆತನು ಸ್ಪೇನ್ ದೇಶವನ್ನೂ ಸಂದರ್ಶಿಸಿ, ಅಲ್ಲಿ ಪ್ರಾರಂಭಿಸಲಿದ್ದ ರೈಲ್ವೆ ಕಾಮಗಾರಿಗೆ ಆವಶ್ಯಕವಾದ ಹಲವು ಸಲಹೆಗಳನ್ನು ಕೊಟ್ಟನು. ಈ ಎರಡು ದೇಶಗಳಲ್ಲಿ ಪ್ರಾರಂಭಿಸಲ್ಪಟ್ಟ

ಈ ನೂತನ ಯಾನಸಾಧನದ ಉಪಯೋಗವು ಕ್ರಮಕ್ರಮವಾಗಿ ಯೂರೋಪು ಖಂಡದಲ್ಲೆಲ್ಲ ಹಬ್ಬಿತು.

ಹೀಗೆ ತನ್ನ ದೇಶದ ಸೌಭಾಗ್ಯವನ್ನೂ, ಒಟ್ಟಿನಲ್ಲಿ ಲೋಕದ ಸೌಭಾಗ್ಯವನ್ನೂ ಒಂದು ಬಗೆಯಿಂದ ಹೆಚ್ಚಿಸಲು ತನ್ನ ಬುದ್ಧಿಶಕ್ತಿ ಕ್ರಿಯಾಶಕ್ತಿಗಳನ್ನು ವ್ಯಯಮಾಡಿ ಪ್ರಯತ್ನಿಸಿ, ಪ್ರಶಸ್ತಿಯನ್ನು ಪಡೆದ ಜಾರ್ಜ್ ಸ್ಟೀವನ್ಸನ್ನನು, ತನ್ನ ನಿರಂತರ ಪರಿಶ್ರಮ, ಅನುಪಮ ಸಾಹಸ, ಸತ್ಯಸಂಧತೆ ಮುಂತಾದುವುಗಳ ಫಲವಾಗಿ ಅಪಾರ ಸಂಪತ್ತನ್ನೂ ಗಳಿಸಿದನು. ೧೮೩೮—೪೦ರ ವೇಳೆಗೆ ಆತನು ಆ ಪ್ರಾಂತದಲ್ಲೇ ವಿಸ್ತಾರವಾದ ಕಲ್ಲಿದ್ದಲು ಗಣಿಗಳಿದ್ದ ಪ್ರದೇಶವನ್ನು ಸ್ವಂತಕ್ಕಾಗಿ ಬೆಲೆಮಾಡಿ, ಅಲ್ಲಿ ಸಾವಿರಾರು ಮಂದಿ ಕೆಲಸಗಾರರನ್ನಿಟ್ಟು ಅವರಿಂದ ಕೆಲಸಮಾಡಿಸುತ್ತ, ವಿಶೇಷವಾದ ತನ್ನ ಅನುಭವದಿಂದ ಹಲವುಮಂದಿ ತರುಣರನ್ನು ತಯಾರಿಸುತ್ತ ತನ್ನ ಕೊನೆಗಾಲವನ್ನು ಕಳೆಯಲು ನಿಶ್ಚಯಿಸಿದನು. ಚಿಕ್ಕಂದಿನಲ್ಲಿ ವಿದ್ಯೆಯಿಲ್ಲದ ಪ್ರಯುಕ್ತ ತಾನು ಪಟ್ಟ ನಷ್ಟವನ್ನು ಚೆನ್ನಾಗಿ ತಿಳಿದವನಾದುದರಿಂದ ತನ್ನ ಪೋಷಣೆಗೆ ಸಂಬಂಧಿಸಿದ ಕೂಲಿಗಳ - ಅಧಿಕಾರಿಗಳ - ಉದ್ಯೋಗಸ್ಥರ ಮಕ್ಕಳಿಗೆ ಉಚಿತವಾದ ವಿದ್ಯಾಭ್ಯಾಸವು ದೊರೆಯಬೇಕೆಂದು ಆತನು ಹಲವು ಅನುಕೂಲತೆಗಳನ್ನು ಕಲ್ಪಿಸಿದನು. ಚಿಕ್ಕಂದಿನಿಂದ ತಾನು ಪಟ್ಟ ಕಷ್ಟಗಳನ್ನೆಲ್ಲ ಕಥೆಗಳನ್ನಾಗಿ ಹೇಳುತ್ತ ತರುಣರಿಗೆ-ಎಂತಹ ಕಷ್ಟದಲ್ಲೂ ಎದೆಗುಂದದೆ, ಧೈರ್ಯದಿಂದ ಮುಂದರಿಸಬೇಕೆಂದೂ, ನಿರಂತರ ಪರಿಶ್ರಮ ಮಾಡುವ ಅಭ್ಯಾಸವೇ ಜಯಪ್ರಾಪ್ತಿಯ ಮೂಲಮಂತ್ರವೆಂದೂ ಸಾರಿದನು. ಕೇವಲ ಬಡತನದ - ಕೂಲಿಯ ಸ್ಥಿತಿಯಲ್ಲಿದ್ದು ಸ್ವಪರಿಶ್ರಮದಿಂದಲೇ ಅತುಳೈಶ್ವರ್ಯವನ್ನೂ ರಾಜಪೂಜ್ಯತೆಯನ್ನೂ ಪಡೆದವನಾದುದರಿಂದ ಆತನಿಗೆ ಸುಖದ ನಶ್ವರತೆಯೂ, ಲೋಕದ ಕಷ್ಟದುಃಖಗಳ ಸಂಪೂರ್ಣಾನುಭವವೂ ಚೆನ್ನಾಗಿ ತಿಳಿವಳಿಕೆಗೆ ಬಂದು, ಆತನು ಕಲಿತ ಪಂಡಿತನೂ - ಓದಿದ ವಿದ್ಯಾವಂತನೂ ಆಗಿರದಿದ್ದರೂ, ಮಿಕ್ಕ ಎಲ್ಲಾ ವಿಷಯಗಳಲ್ಲೂ 'ಕೆಲವಂ ಬಲ್ಲವರಿಂದ ಕಲ್ತು - ಎಂಬ ನಾಣ್ನುಡಿಯಂತೆ ಸರ್ವಜ್ಞನಾಗಿದ್ದನು.

೧೮೪೮ನೆಯ ಸಂವತ್ಸರದವೇಳೆಗೆ ಜಾರ್ಜ್ ಸ್ಟೀವನ್ಸನ್‌ಗೆ ಅರುವ

ತ್ತೇಳು ವರ್ಷಗಳಾದುವು. ಹಿಂದೆ ಸ್ಪೇನ್ ದೇಶಕ್ಕೆ ಹೋಗಿ ಬಂದಾಗಿನಿಂದಲೂ ಆತನ ದೇಹಸ್ಥಿತಿಯು ಕೆಟ್ಟು ಆತನು ರೋಗಗ್ರಸ್ತನಾಗಿದ್ದನು ಅದೇ ರೋಗವೇ ಪ್ರಬಲವಾಗಿ ಆತ್ರಾ ೧೮೪೮ನೆಯ ಆಗಸ್ಟು ೧೨ನೆಯ ದಿನ ಪರಲೋಕಗತನಾದನು.

ಛೆಸ್ಟರ್‌ಫೀಲ್ಡ್ ಪಟ್ಟಣದ ಪ್ರಜೆಗಳು, ಆತನು ಮೃತನಾದ ದಿನ ಆತನ ಗೌರವಕ್ಕಾಗಿ ಉದ್ಯೋಗ ವ್ಯವಹಾರಗಳನ್ನೆಲ್ಲ ಬದಿಗಿಟ್ಟು ಆತನ ಪ್ರೇತಯಾತ್ರೆಯಲ್ಲಿ ಸೇರಿದರು. ಆ ಊರಿನ ಟ್ರಿನಿಟಿ ಚರ್ಚ್ ಎಂಬ ಸ್ಥಳದಲ್ಲಿ ಆತನ ದೇಹವನ್ನು ಭೂಸ್ಥಾಪನೆಮಾಡಿದರು. ಆತನ ಆಜನ್ಮ ಪರಿಶ್ರಮವನ್ನು ತಲೆತಲಾಂತರದವರಿಗೂ ಜ್ಞಾಪಕಕ್ಕೆ ತಂದುಕೊಡುವಂತೆ, ಲಿವರ್ಪೂಲ್ ಮತ್ತು ಲಂಡನ್‌ನಗರಗಳಲ್ಲಿ ಆತನ ಶಿಲಾಪ್ರತಿಮೆಗಳನ್ನು ಸ್ಥಾಪಿಸಿ, ಆತನ ಶಿಷ್ಯವರ್ಗದವರೂ, ದೇಶೀಯರೂ, ಆತನಲ್ಲಿದ್ದ ತಮ್ಮ ಪ್ರೀತಿ ವಿಶ್ವಾಸಗಳನ್ನು ವ್ಯಕ್ತಗೊಳಿಸಿದರು.



## ಉ ಪ ಸಂ ಹಾ ರ

**ಹಬೆಯಂತ್ರದ ಕೈಗಾರಿಕೆಗೆ *ಜಾರ್ಜ್ ಸ್ಟೀವರ್ಸನ್‌ನು ಜನಕನೆಂದರೆ ಅದರಲ್ಲಿ ಅತಿಶಯೋಕ್ತಿಯಿಲ್ಲ.** ಆತನ ಜೀವಿತಕಾಲದಲ್ಲೇ ಸುಪ್ರಸಿದ್ಧರೆನ್ನಿಸಿದ ಅನೇಕರು, ಈ ಮಾತನ್ನು ಆತನ ಮುಖತಃ ನುಡಿದು ಆತನನ್ನು ಗೌರವಿಸಿದ್ದಾರೆ. ಆದರೆ ಆತನು ಬಿರುದು ಬಹುಮತಿಗಳನ್ನಾಗಲೀ ಅಧಿಕಾರ ಆಡಂಬರಗಳನ್ನಾಗಲೀ ಕೋರದ ನಿಗರ್ವಿ ಮನುಷ್ಯನಾಗಿಯೇ ಕೊನೆಯವರೆಗೂ ಜೀವಿಸಿದನು.

ದೃಢಪ್ರಯತ್ನವೇ ಆತನ ಜೀವನ ಸರ್ವಸ್ವ. ಎಂತಹ ಕಷ್ಟದಲ್ಲೂ ಎದೆಗುಂದದ ಧೈರ್ಯವೇರುವಾತನು. ತಾಳ್ಮೆಯಿಂದ ಪರಿಶ್ರಮ ಮಾಡುತ್ತಾ ಹೋಗುವುದೇ ಜಯಪ್ರಾಪ್ತಿಗೆ ಮೂಲಮಂತ್ರವೆಂದು ಆತನು ತಿಳಿದಿ

**George Stephenson* ಎಂಬೀ ಅಕ್ಷರಸಂಯೋಜನವನ್ನು ಜಾರ್ಜ್ ಸ್ಟೀವೆನ್ಸನ್ ಎಂದು ಉಚ್ಚರಿಸುವ ಪದ್ಧತಿಯೂ ಉಂಟು.

ದ್ದದಲ್ಲದೆ,-ಆತನ ವಿಜಯ ರಹಸ್ಯವೇನೆಂದು ಕೇಳಿದವರಿಗೆಲ್ಲ ಅದನ್ನೇ ಹೇಳುತ್ತಿದ್ದನು. ಲೆಕ್ಕಾಚಾರದ ವಿಷಯದಲ್ಲೂ ಕಾಲವ್ಯಯದ ವಿಷಯದಲ್ಲೂ ಆತನೂ ಅತ್ಯಂತ ಜಾಗರೂಕನಾಗಿದ್ದನು. ಚಿಕ್ಕಂದಿನಲ್ಲಿ ವಿದ್ಯಾಭ್ಯಾಸಕ್ಕೆ ಅನುಕೂಲವು ದೊರೆಯಲಿಲ್ಲವಾದರೂ ಆತನು ಸ್ವಪರಿಶ್ರಮದ ಫಲವಾಗಿ ರಾಜಾಧಿರಾಜರಿಂದ ಗೌರವಿಸಲ್ಪಟ್ಟನು ಸತ್ಯಸಂಧತೆಯು ಆತನ ಜೀವನವೇ ಎಂದು ಹೇಳಬಹುದು. ತಾನು ಕೈಕೊಂಡು ನಿರ್ವಹಿಸಿದ ಕೆಲಸದಲ್ಲಿ ಯಾವ ವಿಧವಾದ ದೋಷವಾದರೂ ಕಂಡುಬಂದರೆ, - ಏನಾದರೂ ಲೋಪವುಂಟಾಯಿತೆಂದು ಹೊರಪಟ್ಟರೆ, ಅದಕ್ಕಾಗಿ ನನ್ನ ತಲೆಯನ್ನೇ ಪಣವಾಗಿಡುವೆನು ಎಂಬುದು ಆತನ ಪ್ರತಿಜ್ಞೆಯಾಗಿದ್ದಿತು. ತನ್ನ ಕರ್ತವ್ಯದ ವಿಷಯದಲ್ಲಿ ಅಷ್ಟುಮಟ್ಟಿಗೆ ಮನಸ್ಸಾಕ್ಷಿಗನುಸಾರವಾಗಿ ನಡೆಯುತ್ತಿದ್ದ ಆತನು ತನ್ನ ಜೀವಿತವನ್ನು ಲೋಕಕ್ಕೆ ಆದರ್ಶವನ್ನಾಗಿಸಿಬಿಟ್ಟುದು ಆಶಿಶಯವಲ್ಲ.

'ಗುಣಾಃ ಪೂಜಾಸ್ಥಾನಂಗುಣಿಷು ನ ಚ ಲಿಂಗಂ ನ ಚ ವಯಃ'ಎಂಬೀ ಕವಿವಾಕ್ಯದೊಂದಿಗೆ,-'ಗುಣಿಷು ನ ಚ ಕುಲಃ ನ ಚ ದೇಶಃ' ಎಂಬೀ ಮಾತುಗಳನ್ನೂ ಸೇರಿಸಿದರೆ ಅದು ದೋಷವಾಗಲಾರದು. ಮಹನೀಯವ್ಯಕ್ತಿಗಳು ಮಾಡುವ- ಲೋಕವನ್ನೇ ವ್ಯಾಪಿಸುವ ಇಂತಹ ಕಾರ್ಯಗಳಿಗೆಲ್ಲ ಕಾಲರೂಪಿಯೂ ಸರ್ವವ್ಯಾಪಿಯೂ ಆದ ಭಗವಂತನ ಬೆಂಬಲವಿಲ್ಲದಿರಲು ಸಾಧ್ಯವಿಲ್ಲ - ಹಾಗಿದ್ದರೆ- **ತೇನವಿನಾತೃಣಮಪಿ ನಚಲತಿ** ಎಂಬ ಶ್ರುತಿವಾಕ್ಯಕ್ಕೆ ಅರ್ಥವಿರಲಾರದು. ಹೀಗೆ ಕಾಲಾನುಸಾರವಾಗಿ ಉದ್ಭವಿಸಿ, ತಮ್ಮ ಮನಸ್ಸಾಕ್ಷಿಗೆ ವಿರೋಧವಿಲ್ಲದೆ ನಡೆದು, ತಮ್ಮ ಅಗಾಧ ಪರಿಶ್ರಮದಿಂದ ಜಗತ್ತಿನ ರೂಪವನ್ನೇ ಬದಲುಗೊಳಿಸುವಂತಹ ಇಂತಹ ಮಹನೀಯರ ಜೀವನ ರಹಸ್ಯವು ನಮ್ಮ ತರುಣ ಜನಾಂಗಕ್ಕೆ ಆದರ್ಶವಾಗಿದ್ದು ಅವರೂ, ಸತ್ಯಸಂಧತೆ, ಕಾರ್ಯದಕ್ಷತೆ, ನಿರಂತರ ಪರಿಶ್ರಮ, ದೀರ್ಘಪ್ರಯತ್ನ ಮುಂತಾದುವುಗಳಲ್ಲಿ ನಟ್ಟ ಮನಸ್ಸುಳ್ಳವರಾಗಿ ಏಳಿಗೆಗೆ ಬರಲು ಭಗವದನುಗ್ರಹವಾಗಲಿ —

ತಥಾಸ್ತು.

||ಶ್ರೀ ರಾಮಸಹಾಯಂ||

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸ ಪುಸ್ತಕಾವಳಿ)

**ಮುನ್ನುಡಿ:—**

ಪರಮಪಾವನತರವಾದ ಸೂರ್ಯವಂಶದಲ್ಲಿ ಉದ್ಭವಿಸಿ ಧರ್ಮದಿಂದ ರಾಜ್ಯಪರಿಪಾಲನೆ ಮಾಡಿ ಭೂತಳವನ್ನು ಸ್ವರ್ಗದಂತೆ ಸುಖಧಾಮವನ್ನಾಗಿಸಿದ ರಾಜಾಧಿರಾಜರು ಅನೇಕ ಮಂದಿಯುಂಟು. ಅವರ ಚರಿತ್ರೆಗಳೆಲ್ಲವೂ ಆದಿಕವಿ ಶ್ರೀ ವಾಲ್ಮೀಕಿಮಹರ್ಷಿ ಪ್ರಣೀತವಾದ ಶ್ರೀರಾಮಾಯಣವೆಂಬ ಅಮರಗ್ರಂಥರಾಜದಲ್ಲಿ ವಿರಾಜಮಾನವಾಗಿವೆ. ಆದರೆ ಶ್ರೀ ರಾಮಾಯಣವೆಲ್ಲವೂ ಶ್ರೀ ರಾಮಚಂದ್ರನ ಚರಿತ್ರ ವಿಸ್ತಾರಕ್ಕೇ ಮುಡುಪಾಗಿರುವಂತೆ ನಿರ್ಮಿತವಾದ ಗ್ರಂಥವಾದುದರಿಂದ ಅದರಲ್ಲಿ ಸೂರ್ಯವಂಶದಲ್ಲಿ ಶ್ರೀರಾಮನಿಗೆ ಪೂರ್ವಿಕರಾಗಿ ಜನಿಸಿದ ಇತರ ಮಹಾರಾಜರ ವಿಸ್ತಾರವಾದ ಚಾರಿತ್ರ್ಯವರ್ಣನೆಗೆ ಎಡೆಯಿಲ್ಲವಾಗಿ ಕೇವಲ ಆಯಾ ಮಹಾರಾಜರುಗಳ ಹೆಸರುಗಳು ಮಾತ್ರವೇ ವಂಶಾನುಕ್ರಮದಿಂದ ಅದರಲ್ಲಿ ನಿರೂಪಿತವಾಗಿವೆ. ಶ್ರೀ ವಾಲ್ಮೀಕಿಮಹರ್ಷಿಯಂತೆಯೇ ಸೂರ್ಯವಂಶದವರ ಚಾರಿತ್ರ್ಯವರ್ಣನೆಗೆ ಮನಸ್ಸುಕೊಟ್ಟು ಲೋಕೋಪಕಾರಮಾಡಿದ ಮಹಾಕವಿ ಇನ್ನೊಬ್ಬನುಂಟು. ಆತನೇ ಭಾರತೀಯ ಕವಿಕುಲದಲ್ಲಿ ಅಜರಾಮರ ಸ್ಥಾನವನ್ನು ಹೊಂದಿ ವಿರಾಜಿಸುತ್ತಿರುವ ಕಾಳಿದಾಸನು. ಕಾಳಿದಾಸನು, ಕವಿಸಾರ್ವಭೌಮನೆಂದು ಪ್ರಸಿದ್ಧನಾಗಿ,— ಇಂದು ಆತನ ಜನ್ಮಭೂಮಿಯಾದ ಈ ಭಾರತದೇಶದಲ್ಲಿ ಮಾತ್ರವಲ್ಲ- ಆದ್ಯಂತ ಪೃಥ್ವಿಯಲ್ಲೇ ಸನ್ಮಾನಿತನಾಗಿದ್ದಾನೆ. ಆತನು, ಭಾರತದೇಶದ ಎರಡು ಸರ್ವಶ್ರೇಷ್ಠ ಗ್ರಂಥಗಳಾದ ರಾಮಾಯಣ ಮಹಾಭಾರತಗಳಿಂದ ಎರಡು ಕಥಾನಕಗಳನ್ನು ತೆಗೆದುಕೊಂಡು, ಅವುಗಳನ್ನು ತನ್ನ ಪ್ರತಿಭೆಯಿಂದ ವಿಸ್ತಾರಗೊಳಿಸಿ ಒಂದು ಕಾವ್ಯವನ್ನೂ ಒಂದು ನಾಟಕವನ್ನೂ ರಚಿಸಿದ್ದಾನೆ. ಆತನು ರಚಿಸಿದ ಗ್ರಂಥಗಳು ಇನ್ನೂ ಕೆಲವು ಇರುವುವಾದರೂ, ಆತನ ಕೀರ್ತಿಗೆ ಅಮರಪದವಿಯನ್ನು ದೊರಕಿಸಿಕೊಟ್ಟಿರುವ ಗ್ರಂಥಗಳೆಂದರೆ ಈ ಎರಡೇ! ಇವುಗಳಲ್ಲಿ ಶ್ರೀರಾಮಾಯಣದ ಚರಿತ್ರಾಧಾರದಿಂದ ರಚನೆಯಾದುದು ರಘುವಂಶ ಮಹಾಕಾವ್ಯವೆಂದೂ, ಮಹಾಭಾರತದಿಂದ ರಚನೆಯಾದುದು ಅಭಿಜ್ಞಾನ ಶಾಕುಂತಲವೆಂಬ ನಾಟಕರತ್ನವೆಂದೂ ಜಗತ್ತಿನ ಸಾಹಿತ್ಯಾಕಾಶದಲ್ಲಿ ಚಂದ್ರಸೂರ್ಯರಂತೆ ವಿರಾಜಮಾನವಾಗಿದೆ. ಕವಿಯು ರಾಮಾಯಣ ಭಾರತ ಗ್ರಂಥಗಳಿಂದ ದೊರೆತ ಅಲ್ಪ

ವಾದ ಕಥಾವಸ್ತುವನ್ನು ವಿಶಿಷ್ಟವಾದ ತನ್ನದೊಂದು ಅಲೌಕಿಕ ಪ್ರತಿಭೆಯಿಂದ ವಿಸ್ತಾರಗೊಳಿಸಿ ಈ ಎರಡು ಗ್ರಂಥರತ್ನಗಳನ್ನು ಸಂಸ್ಕೃತ ವಾಙ್ಮಯಕ್ಕೆ ಪ್ರಸಾದಿಸಿ ತನ್ನ ಕೀರ್ತಿಚಂದ್ರಿಕೆಯನ್ನು ಲೋಕದಲ್ಲಿ ಹರಡಿದ್ದಾನೆ. ಕಾಳಿದಾಸ ಕವಿಸಾರ್ವಭೌಮನ ವಾಕ್ಯರತ್ನ ಸಮುದಾಯದಿಂದ ಅಲಂಕೃತವಾದ ಆ ಗ್ರಂಥರಾಜಗಳಲ್ಲಿ ಶಾಕುಂತಲವಂತೂ ದೇಶವಿದೇಶಗಳ ಹಲವು ಮಂದಿ ಸಾಹಿತ್ಯಾರಾಧಕರ ಗೌರವಕ್ಕೆ ಪಾತ್ರವಾಗಿ ಬಹುಶಃ ಪ್ರಪಂಚದಲ್ಲಿ ಪ್ರಬುದ್ಧ ಸ್ಥಿತಿಯನ್ನು ಹೊಂದಿದ ಸಕಲ ನಾಗರಿಕ ಭಾಷೆಗಳಿಗೂ ಪರಿವರ್ತಿತವಾಗಿ, ಆತನ,- ಸಂಸ್ಕೃತ ವಾಙ್ಮಯದ ಮತ್ತು ಭಾರತದೇಶದ ಕೀರ್ತಿಚಂದ್ರಿಕೆಯನ್ನು ದಶದಿಕ್ಕುಗಳಲ್ಲಿಯೂ ವಿಸ್ತರಿಸುತ್ತಿದೆ. ರಘುವಂಶವೂ ಸಹ ಕಾವ್ಯರತ್ನವೆನ್ನಿಸಿ ಆ ಮಹಾಕವಿಯ ಪದಪ್ರಯೋಗ ಚಾತುರ್ಯ, ಉಪಮಾನ ಸೌಂದರ್ಯ, ವರ್ಣನಾ ವೈಖರಿ ಮುಂತಾದುವುಗಳಿಗೆ ಅದ್ವಿತೀಯವೆನ್ನಿಸಿ ಸಂಸ್ಕೃತ ವಾಙ್ಮಯದಲ್ಲೊಂದು ಗೌರವಸ್ಥಾನವನ್ನು ಹೊಂದಿ ಆತನ ನಾಮಘೋಷವನ್ನು ಚಿರಸ್ಥಾಯಿಯನ್ನಾಗಿಸಿದೆ.

ಈ ರಘುವಂಶದಲ್ಲಿ ಸೂರ್ಯವಂಶದೀಪಕರಾದ ದಿಲೀಪ ರಘುಮಹಾರಾಜ ಅಜಮಹಾರಾಜ ಇವರ ಚರಿತ್ರೆಗಳು ಸ್ವಲ್ಪ ವಿಸ್ತಾರವಾಗಿಯೂ, ತರುವಾಯ ಅಜಮಹಾರಾಜನ ಮಗನಾದ ದಶರಥನ ಚರಿತ್ರೆಯು ಸ್ವಲ್ಪ ಸಂಕೋಚವಾಗಿಯೂ ನಿರೂಪಿತವಾಗಿ, ಆತನ ಮಗನೂ ಲೋಕವಿಶ್ರುತ ಕೀರ್ತಿಸಂಪನ್ನನೂ ಆದ ಶ್ರೀರಾಮಚಂದ್ರನ ಚರಿತ್ರವು ತಕ್ಕಷ್ಟು ವಿಸ್ತಾರವಾಗಿಯೇ ವರ್ಣಿಸಲ್ಪಟ್ಟಿದೆ ತರುವಾಯ ಕವಿಯು ಶ್ರೀರಾಮಪುತ್ರನಾದ ಕುಶಮಹಾರಾಜನ ವಂಶವಿಸ್ತಾರವನ್ನು ವರ್ಣಿಸಿ ಎಂತೂ ಒಟ್ಟು ಹತ್ತೊಂಬತ್ತು ಸರ್ಗಗಳಲ್ಲಿ ಗ್ರಂಥವನ್ನು ಪೂರ್ತಿಮಾಡುತ್ತಾನೆ ಪ್ರಕೃತ ನಿರೂಪಿತವಾಗುವ ದಿಲೀಪ ಮಹಾರಾಜನ ಚರಿತ್ರೆಯು, ವಿಶೇಷವಾಗಿ ಈ ಗ್ರಂಥವನ್ನೇ ಅವಲಂಬಿಸಿ ರಚಿತವಾಗಲುಳ್ಳದು. ನಿರ್ಮತ್ಸರರಾದ ಭಾಷಾಭಿಮಾನಿಗಳು, ಗ್ರಂಥಮಾಲಾ ವಿಷಯದಲ್ಲಿ ತಮ್ಮ ಸಹಜ ಪ್ರೀತಿ ವಿಶ್ವಾಸಗಳನ್ನು ಮುಂದರಿಸಿ, ಈ ಕುಸುಮವನ್ನೂ ಸ್ವೀಕರಿಸಿ, ನಮ್ಮ ಈ ಉದ್ಯಮವನ್ನು ಪ್ರೋತ್ಸಾಹಗೊಳಿಸಬೇಕೆಂದು ಪ್ರಾರ್ಥಿಸುತ್ತೇವೆ

ಇತಿ ಸಜ್ಜನ ವಿಧೇಯ

ಬೆಂಗಳೂರು ನಗರ
ತಾ. ೧೩--೧೧—೩೨

||ಶ್ರೀ ರಾಮಸಹಾಯಃ||

### ಸೂರ್ಯವಂಶ ದೀಪಕ

# ದಿಲೀಪ ಮಹಾರಾಜ

## ಅಧ್ಯಾಯ ೧ — “ಸಾಮ್ರಾಜ್ಯಪಾಲನೆ”

ನಮ್ಮ ಮಾತೃಭೂಮಿ ಭಾರತದೇಶದಲ್ಲಿ ರಾಜ್ಯವ್ಯವಸ್ಥೆಯು ಏರ್ಪಟ್ಟಂದಿನಿಂದ ಸೂರ್ಯ- ಚಂದ್ರವಂಶಗಳೆಂಬ ಎರಡು ರಾಜವಂಶಗಳು ರಾಜ್ಯವನ್ನಾಳಿಕೊಂಡು ಬಂದಂತೆ ದೇಶಚರಿತ್ರೆಯು ಹೇಳುತ್ತದೆ. ಭಾರತ ದೇಶದ ಚರಿತ್ರೆಯೆಂದರೆ ಇಂದು ನಿನ್ನೆಯಿಂದ ಆರಂಭಿಸಿದುದಲ್ಲ. - ನೂರಿನ್ನೂರು ವರ್ಷಗಳಲ್ಲ, ಒಂದೆರಡು ಸಹಸ್ರ ವರ್ಷಗಳ ಹಿಂದಿನಿಂದ ಅದು ಆರಂಭಿಸಿತೆಂದೂ ಹೇಳುವಂತಿಲ್ಲ. ಕೇವಲ ಪರಿಮಿತ ದೃಷ್ಟಿಯ ಪಾಶ್ಚಾತ್ಯಚರಿತ್ರಕಾರರು ರಾಮಾಯಣದ ಕಾಲವೂ - ಶ್ರೀ ರಾಮನ ಜನನ ಜೀವನ ಪೈತ್ರಯಾತ್ರೆ ಮುಂತಾದ ಕಾರ್ಯಕಲಾಪಗಳು ನಡೆದ ಕಾಲವೂ ಇಂದಿಗೆ ಸುಮಾರು ಐದು ಸಾವಿರ ವರ್ಷಗಳ ಹಿಂದಿರಬಹುದೆಂದು (3000 B. C ) ಊಹಿಸುತ್ತಾರೆ. ಆದರೆ ಅದು ಭಾರತೀಯ ದೃಷ್ಟಿಯಿಂದ ಸರ್ವಥಾ ಒಪ್ಪತಕ್ಕುದಾಗಿಲ್ಲ. ಶ್ರೀ ರಾಮಾವತಾರವು ಇಪ್ಪತ್ತಾಲ್ಕನೆಯ ಚತುರ್ಯುಗದ-* ತ್ರೇತಾಯುಗದಲ್ಲಿ ಆದುದೆಂದು ನಮ್ಮ ಪುರಾಣಾದಿಗಳು ವಚಿಸುತ್ತವೆ. ಈ ಲೆಕ್ಕವನ್ನು ಅನುಸರಿಸಿ ಯೋಚಿಸುವುದಾದರೆ ರಾಮಾವತಾರವು ಇಂದಿಗೆ ಒಂದು ಕೋಟಿ ಎಂಭತ್ತಾಲ್ಕು ಲಕ್ಷ ವರ್ಷಗಳ ಪೂರ್ವದಲ್ಲಿ ಆದುದೆಂದು ಹೇಳಬೇಕಾಗುತ್ತದೆ. ಅನಾದಿಯಾದ ಈ ಸೃಷ್ಟಿಯು ಜೀವಿತವಾದರೂ ಇಂದು ನಿನ್ನೆ ಆರಂಭವಾದುದಲ್ಲ- ಅನೇಕಾನೇಕ ಕಾಲಗಳಿಂದ

---

* ಈ ಕಾಲನಿರ್ಣಯವು ಗ್ರಂಥಮಾಲೆಯ ೧೧೬ ನೆಯ ಕುಸುಮವಾದ “ಶ್ರೀ ವಾಲ್ಮೀಕಿಮಹರ್ಷಿ” ಪುಸ್ತಕದಲ್ಲಿ ವಿಸ್ತಾರವಾಗಿ ಚರ್ಚಿಸಲ್ಪಟ್ಟಿದೆ.

ನಡೆದು ಬಂದುದು ಎಂಬುದನ್ನು ಭೂಗರ್ಭಶಾಸ್ತ್ರವೇ ಮುಂತಾದುವು ಆಧುನಿಕ ಅನ್ವೇಷಣೆಗಳ ಮೂಲಕ ಸತ್ಯವೆನ್ನಿಸುತ್ತಿವೆ. ಈ ಹೇಳಿಕೆಯನ್ನು ನಮ್ಮ ಪುರಾಣಾದಿಗಳು ಸಮರ್ಥಿಸುತ್ತವೆ. ನಮ್ಮ ದೇಶದ ಪುರಾಣಗಳೆಂದರೆ, ಬರೀ ಹಳೆಯ ಕಥೆಗಳ-ಕಂತೆಗಳಲ್ಲ. ಅವುಗಳಲ್ಲಿ ಒಳಹೊಕ್ಕು ಚಾರಿತ್ರಿಕಾಂಶಗಳನ್ನು ಹುಡುಕುವುದಾದರೆ ನಮ್ಮ ದೇಶದ ಪ್ರಾಚೀನ ನಾಗರಿಕತೆ, ಸೌಭಾಗ್ಯಸಂಪನ್ನತೆ, ಸಾಮಾಜಿಕೋನ್ನತಿ, ಧಾರ್ಮಿಕವಿಚಾರದ ಪರಾಕಾಷ್ಠತೆ ಮುಂತಾದ ಅನೇಕಾನೇಕ ವಿಚಾರಗಳಿಗೆಲ್ಲ ಸಮಂಜಸ ಉತ್ತರವು ದೊರೆಯುವುದು. ಕಾಲಕರ್ಮವಿಶೇಷದಿಂದ ಇಂದು ಭಾರತ ನಿವಾಸಿಗಳ ದೃಷ್ಟಿಯೆಲ್ಲ ಪಶ್ಚಿಮಾಭಿಮುಖವಾಗಿರುವುದರಿಂದ ಭಾರತೀಯವೆನ್ನಿಸುವ ಪ್ರತಿಯೊಂದು ವಿಚಾರವೂ ವಿಪರೀತಭಾವನೆಯಿಂದಲೇ ತೋರಸಾಗಿದೆ. ಅವರೂ ಹೈತುಕ ಮಾರ್ಗಾವಲಂಬಿಗಳಾಗಿ ಆಪ್ತವಾಕ್ಯದಲ್ಲೂ ವಿಶ್ವಾಸವನ್ನು ನೀಗಿಕೊಂಡು, ಪರಕೀಯರ ಅಭಿಪ್ರಾಯವೇ ಸರ್ವೋತ್ಕೃಷ್ಟವಾದುದೆಂದು ಭಾವಿಸುವಂತಹ ಭಾವದಾಸ್ಯಕ್ಕೆ ಈಡಾಗಿದ್ದಾರೆ. ಈ ಅಜ್ಞಾನಪಟ್ಟಿಯು ತೊಲಗಿ, ಅವರ ದೃಷ್ಟಿಯು ಸ್ವಚ್ಛಗೊಂಡು, ಅವರು ನಿರ್ಮಲ ಮನಸ್ಕತೆಯನ್ನು ಪಡೆದರೆಂದರೆ, ಮೇಲಿನ ಈ ಎಲ್ಲಾ ವಿಚಾರಗಳೂ ಅವುಗಳ ಸಹಜಸ್ಥಿತಿಯಿಂದ ಗೋಚರಕ್ಕೆ ಬಂದು, ಆಪ್ತವಾಕ್ಯದಲ್ಲಿ ವಿಶ್ವಾಸವುಂಟಾಗತೊಡಗುವುದು.

ಸುಪ್ರಸಿದ್ಧವಾದ ಸೂರ್ಯವಂಶವು ರಾಮಾಯಣ ಗ್ರಂಥದಲ್ಲಿ ನಿರೂಪಿತವಾದಂತೆ ಬಹು ವಿಸ್ತಾರವಾಗಿದೆ. ಅವ್ಯಕ್ತಸ್ವರೂಪನಾದ ಶ್ರೀಮಹಾವಿಷ್ಣುವಿನ ನಾಭೀಕಮಲದಿಂದ ಬ್ರಹ್ಮನೂ, ಆತನಿಂದ ಮರೀಚಿಯೂ, ಮರೀಚಿಯಿಂದ ಕಾಶ್ಯಪನೂ, ಆತನಿಂದ ಸೂರ್ಯನೂ, ಸೂರ್ಯನಿಂದ ಮನುವೂ ಹುಟ್ಟಿದರು. ಈ ಮನುವೇ ಧರ್ಮಶಾಸ್ತ್ರಕರ್ತನೆನ್ನಿಸಿ ಇಂದಿಗೂ ಚಿರಸ್ಮರಣೀಯನಾಗಿದ್ದಾನೆ ಈತನ ಮಗನೇ ಇಕ್ಷ್ವಾಕುವು. ಸುಪ್ರಸಿದ್ಧನಾದ ಈತನೇ ಅಯೋಧ್ಯೆಯಲ್ಲಿ ಪ್ರಾರಂಭಕ್ಕೆ ರಾಜ್ಯವಾಳಲು ತೊಡಗಿದವನು. ಈತನಿಂದಲೇ ಸೂರ್ಯವಂಶಕ್ಕೆ ಇಕ್ಷ್ವಾಕುವಂಶವೆಂಬ ಪ್ರಶಸ್ತಿಯೂ ಉಂಟಾಯಿತು. ಈತನ ತರುವಾಯ ಕ್ರಮವಾಗಿ ಕುಕ್ಷಿ, ವಿಕುಕ್ಷಿ, ಬಾಣ, ಅನರಣ್ಯ, ಪೃಥು, ತ್ರಿಶಂಕು, ದುಂಧುಮಾರ, ಯುವನಾಶ್ವ,

ಮಾಂಧಾತೃ, ಸುಸಂಧಿ, ಧ್ರುವಸಂಧಿ, ಪ್ರಸೇನಜಿತ್ತು, ಭರತ, ಅಸಿಕ, ಸಗರ, ಅಸಮಂಜ ಎಂಬ ರಾಜವರೇಣ್ಯರು ಈ ಧರಾವಲಯವನ್ನು ಪಾಲಿಸಿದರು. ಅಸಮಂಜನ ಮಗನೇ ಅಂಶುಮಂತನೆಂಬಾತನು. ಸೂರ್ಯವಂಶೋದ್ಭವರಾದ ಈ ರಾಜವರೇಣ್ಯರೆಲ್ಲರೂ ಪರಿಶುದ್ಧ ಚರಿತ್ರರು; ಫಲೋದಯ ಪರ್ಯಂತವಾಗಿ ಹಿಡಿದ ಕಾರ್ಯವನ್ನು ಮಾನಸಿಕ ಮಾಡದಂತಹ ಧೀರರು. ಚತುರ್ದಿಕ್ಕುಗಳಲ್ಲೂ ಸಮುದ್ರವೇ ಎಲ್ಲೆಕಟ್ಟಾಗಿರುವಂತೆ ರಾಜ್ಯವನ್ನು ವಿಸ್ತರಿಸಿ ಧರ್ಮದಿಂದ ಪಾಲಿಸಿದ ನರವೀರರು. ಸಶರೀರವಾಗಿ ಸ್ವರ್ಗದವರೆಗೆ ರಥವನ್ನು ನಡೆಯಿಸಿಕೊಂಡು ಪ್ರಯಾಣಮಾಡುವಂತಹ ಸುಧೀರಚರಿತ್ರರು. ಧರ್ಮಮಾರ್ಗ ತಪ್ಪದೆ, ಪ್ರಜೆಗಳನ್ನು ಮಕ್ಕಳಂತೆ ಪಾಲಿಸುತ್ತಿದ್ದ ಅವರ ಆಳ್ವಿಕೆಯಲ್ಲಿ, ಸಕಲರಿಗೂ ಧರ್ಮಾರ್ಥಕಾಮಗಳೆಂಬ ಸಕಲ ಸಿದ್ಧಿಗಳೂ ಕರತಲಾಮಲಕವಾಗಿದ್ದುವು ಪಕ್ಷಪಾತವಿಲ್ಲದಂತಹ ನ್ಯಾಯವಿಚಾರಣೆಯು ನಡೆದು, ತಪ್ಪುಮಾಡಿದವನು ತಪ್ಪದೆ ದಂಡನೆಯನ್ನು ಹೊಂದಿ-ನಿರಪರಾಧಿಯು ರಕ್ಷಿಸಲ್ಪಡುತ್ತಿದ್ದನು.

ಆ ರಾಜವರೇಣ್ಯರು ಕೇವಲ ಧರ್ಮತತ್ಪರರಾದುದರಿಂದ ವಿಷಯಗಳನ್ನು ಜಯಿಸಿದವರಾಗಿದ್ದರು. ಅವರು ರಾಜ್ಯಕ್ಕಾಗಿ ಗಳಿಸಿದ ಧನರಾಶಿಯಲ್ಲಿ ಲೇಶಮಾತ್ರವನ್ನೂ ಸ್ವಕೀಯ ಇಂದ್ರಿಯಲೋಲುಪ್ತಿಗಾಗಿ ವಿನಿಯೋಗಿಸದೆ, ಪ್ರಜಾಕ್ಷೇಮಕ್ಕಾಗಿಯೇ ಸರ್ವಸ್ವವನ್ನೂ ತ್ಯಾಗಮಾಡಲು ಮುಕ್ತಹಸ್ತರಾಗಿದ್ದರು. ಅವರು ತಮ್ಮ ಶಕ್ತಿಯನ್ನು ಕಾರ್ಯರೂಪದಲ್ಲಿಯೇ ವ್ಯಕ್ತಪಡಿಸುತ್ತಿದ್ದವರಾದುದರಿಂದ, ಮಿತಭಾಷಿಗಳಾಗಿದ್ದರು. ಶಿಷ್ಟಪರಿಪಾಲನೆಗಾಗಿ ದುಷ್ಟರನ್ನು ನಿಗ್ರಹಿಸಿಯೂ, ದುರುಳರೂ ಪ್ರಜಾಪೀಡಕರೂ ಆದ ಅನ್ಯರಾಜರನ್ನು ನಿಗ್ರಹಿಸಿಯೂ ಕೀರ್ತಿಸಂಪನ್ನರಾಗಿದ್ದರು. ಜಿತೇಂದ್ರಿಯರಾದ ಆ ರಾಜವರೇಣ್ಯರು ಸಂತತಿಗೋಸ್ಕರವಾಗಿಯೇ ಗೃಹಸ್ಥಧರ್ಮಾವಲಂಬಿಗಳಾಗಿ - ಮಿತಕಾಮಿಗಳಾಗಿದ್ದರು. ಅವರ ಜೀವಿತವಾದರೋ ಅತ್ಯಂತ ನಿಯಮಬದ್ಧವಾಗಿ ವ್ಯವಸ್ಥಿತವಾಗಿದ್ದಿತು ಬಾಲ್ಯವು ವಿದ್ಯಾಭ್ಯಾಸಕ್ಕಾಗಿಯೂ, ಯೌವನವು ಗೃಹಸ್ಥಧರ್ಮಪಾಲನೆಗಾಗಿಯೂ, ಮುಪ್ಪು ಮುನಿವೃತ್ತಿಗಾಗಿಯೂ ಮೀಸಲೆಂಬಂತೆ ಇಡಲ್ಪಟ್ಟು ಆ ಮಹಾಮಹಿಮರು ಯೋಗಿಗಳಾಗಿ ದೇಹತ್ಯಾಗಮಾಡಿ ಸಾರ್ಥಕವಾದ ಪರಗತಿಯ

ನ್ನು ಹೊಂದುತ್ತಿದ್ದರು. ವಂಶಪಾರಂಪರ್ಯವಾಗಿ ಪ್ರಜಾಕ್ಷೇಮವನ್ನೇ ಪರಮ ಧರ್ಮವಾಗಿ ತಿಳಿದು ರಾಜ್ಯಭಾರ ಮಾಡುತ್ತ ಬರುತ್ತಿದ್ದ ಆ ರಾಜಶೇಖರರ ಆಳ್ವಿಕೆಯಲ್ಲಿ, ಅನ್ಯಾಯ ಅಪಧ್ವಾನಗಳು ಅಡಗಿ, ಧರ್ಮವು ಸ್ಥಾಪಿಸಲ್ಪಟ್ಟು ಲೋಕವು ಸುಖಸೌಭಾಗ್ಯಗಳ ನೆಲೆವೀಡಾಗಿ ವಿರಾಜಿಸಿತು. ಕಾಲಕಾಲಕ್ಕೆ ವೃಷ್ಟಿಯಾಗಿ ಪಶುಗಳೂ ಪ್ರಜೆಗಳೂ ಸಂತುಷ್ಟರಾಗಿದ್ದರು. ಕಳ್ಳಕಾಕರು, ಶತ್ರುರಾಜರು, ಮುಂತಾದ ಈತಿಬಾಧೆಗಳೊಂದೂ ಇಲ್ಲದೆ, ಎಲ್ಲೆಲ್ಲೂ ಶಾಂತಿಸಮಾಧಾನಗಳೇ ಸಾರ್ವಾಧಿಪತ್ಯ ಮಾಡುತ್ತಲಿದ್ದುವು. ಆಹಾ! ಸರ್ವತ್ರ ಶಾಂತಿಯು ನೆಲೆಗೊಂಡಿದ್ದ ಆ ಕಾಲವು ಎಷ್ಟು ಸುಖಮಯವಾಗಿದ್ದಿರಬಹುದು! ಅದನ್ನು ಈಗ ಊಹಿಸಿಕೊಳ್ಳಲಿಕ್ಕಾದರೂ ಸಾಧ್ಯವೆ?

ಅಂಶುಮಂತನ ತರುವಾಯ ಸೂರ್ಯವಂಶದಲ್ಲಿ ಉದ್ಭವಿಸಿ, ಧರ್ಮದಿಂದ ಆಳಿದ ಪ್ರಭುವೆಂದರೆ ನಮ್ಮ ಕಥಾನಾಯಕನಾದ ದಿಲೀಪ ಮಹಾರಾಜನೇ! ಅಂಶುಮಂತನ ಸುಪುತ್ರನಾದ ಆ ದಿಲೀಪರಾಜನು, ತನ್ನ ಹಿರಿಯರ ಪದ್ಧತಿಯಂತೆ, ಬಾಲ್ಯದಲ್ಲಿ ಗುರುಗಳಾದ ವಸಿಷ್ಠಮಹರ್ಷಿಗಳಿಂದ ಶಿಕ್ಷಿತನಾಗಿ ಸಕಲ ವಿದ್ಯೆಗಳನ್ನೂ ಅಭ್ಯಾಸಮಾಡಿ ಪ್ರಾಜ್ಞನೆನ್ನಿಸಿಕೊಂಡನು. ಕ್ಷತ್ರಿಯರಿಗೆ ಉಚಿತವೆನ್ನಿಸುವ ಧನುರ್ವಿದ್ಯೆಯಲ್ಲಿ ಅದ್ವಿತೀಯ ಪಾಂಡಿತ್ಯವನ್ನು ಸಂಪಾದಿಸಿದನು. ಆಜಾನುಬಾಹುವಾದ, ಆ ರಾಜವರೇಣ್ಯನ ಸುದೀರ್ಘ ಭವ್ಯದೇಹವು ಮಹಾ ಶಕ್ತಿಸಾಹಸಯುಕ್ತವಾಗಿ, ವಿಸ್ತಾರವಾದ ಆ ರಾಜ್ಯಪಾಲನೆಗೆ ತಕ್ಕುದೆನ್ನಿಸಿತು. ಆ ಮಹಾನುಭಾವನ ಪ್ರಜ್ಞಾಸಾಮರ್ಥ್ಯವೇನೂ ಸಾಮಾನ್ಯವಾದುದಾಗಿರಲಿಲ್ಲ; ಆತನ ಭವ್ಯದೇಹದ ತೇಜಸ್ಸಿಗೆ ಅನುರೂಪವಾದುದಾಗಿದ್ದಿತು. ಆ ಪ್ರಜ್ಞೆಗೆ ತಕ್ಕ ವಿದ್ಯೆಯೂ, ಆತನಲ್ಲಿ ವಿರಾಜಮಾನವಾಗಿತ್ತು. ವಿದ್ಯಾವಿನಯ ಸಂಪನ್ನನಾದ ಆ ಮಹಾಭಾಗನು ಆ ವಿದ್ಯೆ ಮತ್ತು ಪ್ರಜ್ಞೆಗಳ ಫಲವೋ ಎಂಬಂತೆ ಸರ್ವದಾ ಪ್ರಜಾಕ್ಷೇಮಕರಗಳೂ, ಲೋಕದ ಸುಖ ಸಂತೋಷವರ್ಧಕಗಳೂ, ಪುರುಷಾರ್ಥಸಾಧಕಗಳೂ ಆದ ಸತ್ಕಾರ್ಯಗಳನ್ನೇ ಮಾಡುತ್ತಿದ್ದನು. ಸಕಲ ಲೋಕಪ್ರಿಯಕರಗಳಾದ, ಸುಜನಸಮ್ಮತವೆನ್ನಿಸತಕ್ಕವಾದ ಕಾರ್ಯಗಳಲ್ಲೇ ಮಗ್ನನಾಗಿರುತ್ತಿದ್ದ ಆತನು ಕೈಕೊಂಡ ಕಾರ್ಯಗಳಿಗೆ ಎಂದಿಗಾ

ದರೂ ಹಾನಿಯುಂಟಾಗಬಹುದೇನು ? ಆ ಕಾರ್ಯಗಳು ಎಂದಿಗಾದರೂ ನಿಷ್ಫಲವಾಗಬಹುದೇನು ?

ರಾಜತೇಜವಿರಾಜಮಾನನಾದ ಆ ದಿಲೀಪರಾಜೇಂದ್ರನಲ್ಲಿ ರಾಜ್ಯಪಾಲನೆಗೆ ಆವಶ್ಯಕವೆನ್ನಿಸುವ ಸೌಮ್ಯಸ್ವಭಾವವೂ-ಭೀಮ (ಭಯಂಕರ) ಸ್ವಭಾವವೂ ತಕ್ಕಷ್ಟು ಪ್ರಮಾಣದಲ್ಲಿ ಹೊಂದಿಕೊಂಡಿದ್ದುವು. ಮಹಾಸಾಗರದಲ್ಲಿ ಅಮೌಲ್ಯಬೆಲೆಯ ಚಿಂತಾಮಣಿಗಳೂ, ಅಂತೆಯೇ ಕ್ರೂರಜಲಚರ ಸಮೂಹವೂ ತುಂಬಿ ಮೇಲೆ ಮಾತ್ರ ಅದು ಗಂಭೀರವಾಗಿರುವಂತೆ, ಆತನೂ ಸೌಮ್ಯ-ಭೀಮ ಸ್ವಭಾವಗಳೆರಡನ್ನೂ ಉಚಿತಾನುಚಿತವರಿತು ಉಪಯೋಗಿಸುತ್ತಾ ಪ್ರಜಾರಂಜಕನಾಗಿದ್ದನು. ಆತನ ಆಶ್ರಿತರು ಆತನ ಮಂತ್ರವಿಂಥದು ಎಂಬುದನ್ನು ತಿಳಿಯಲು ಅಶಕ್ತರಾಗಿ ಸರ್ವದಾ ಭಯಭಕ್ತಿಗಳಿಂದ ಆತನನ್ನು ಓಲಗಿಸಿಕೊಂಡಿರುವರು. ತನ್ನ ವಂಶದಲ್ಲಿ ಪೂರ್ವಿಕನಾದ ಮನುಸಾರ್ವಭೌಮನು ವಿಧಿಸಿದ ನಿಯಮಗಳಿಗೆ ಒಂದು ತೃಣಮಾತ್ರವೂ ಲೋಪವುಂಟಾಗದಂತೆ ಆ ಪೃಥ್ವೀಪಾಲನು ರಾಜನೀತಿಗನುಸಾರವಾಗಿ ಪ್ರಜಾಪರಿಪಾಲನೆ ಮಾಡುತ್ತಿದ್ದನು. ಪ್ರಜೆಗಳೂ ಸಹ, ಚಕ್ರದ ಜಾಡನ್ನೇ ಅನುಸರಿಸಿ ಸಾಗುವ ರಥದಂತೆ ಆತನ ಮಾರ್ಗನಾವುದೋ ಅದನ್ನೇ ಅನುಸರಿಸಿ ನಡೆಯುವರು.

ಸೂರ್ಯನು ಹೇಗೆ ತಾನು ರಸರೂಪವಾಗಿ ಭೂಮಿಯಿಂದ ಆಕರ್ಷಿಸಿ ತೆಗೆದುಕೊಂಡುದಕ್ಕೆ ಸಾವಿರಪಾಲು ಹೆಚ್ಚಾಗಿ ವರ್ಷರೂಪವಾದ ಜೀವನಾಧಾರವನ್ನು ಲೋಕಕ್ಕೆ ಪ್ರಸಾದಿಸುವನೋ ಹಾಗೆಯೇ ಆ ದಿಲೀಪ ಮಹಾರಾಜನೂ ಸಹ, ಪ್ರಜೆಗಳಿಗೆ ಅನೇಕ ಬಗೆಯಿಂದ ಪ್ರಯೋಜನವನ್ನು ಕಲ್ಪಿಸಬೇಕೆಂಬ ಉದ್ದೇಶದಿಂದಲೇ ಅವರಿಂದ ಕಂದಾಯವನ್ನು ಕೈಗೊಳ್ಳುತ್ತಿರುವನು. ಆ ಮಹನೀಯನು ಕೈಕೊಂಡ ಕಾರ್ಯೋದ್ದೇಶವಿಂಥದೆಂಬುದನ್ನು ಫಲೋದಯವಾದಮೇಲೆಯೇ ಕಾಣಬೇಕಲ್ಲದೆ, ಆತನು ವಚನ ಶೂರನಾಗಿ ಎಂದೂ ತನ್ನ ಉದ್ದೇಶವನ್ನು ಹರಹಿ ಮೆರೆಯದೆ ಗೂಢವಾಗಿಟ್ಟುಕೊಂಡಿರುವ ಸತ್ಸ್ವಭಾವವವನು. ತಾನು ಸ್ವತಃ ಧರ್ಮಮಾರ್ಗ ನಿರತನೂ, ಪ್ರಜಾರಂಜಕನೂ ಆದುದರಿಂದ ಲೇಶಮಾತ್ರವೂ ಅಂಜಿಕೆಯಿಲ್ಲದೆ ನಿರ್ಭಯದಿಂದ ಸರ್ವತ್ರ ಸಂಚರಿಸಬಲ್ಲವನಾಗಿದ್ದ ಆ ಪ್ರಭುವು

ನಿಶ್ಚಲ ಚಿತ್ತವೃತ್ತಿಯಿಂದ ಧರ್ಮಕಾರ್ಯಗಳನ್ನು ಮಾಡುತ್ತಲೂ, ಅತ್ಯಾಶೆಯಿಂದಲಲ್ಲದೆ ಕೇವಲ ರಾಜ್ಯಕ್ಷೇಮಕ್ಕಾಗಿಯೇ ಧನಸಂಗ್ರಹಣಮಾಡುತ್ತಲೂ ಇದ್ದನು. ಆತನು ಕೇವಲ ಗೃಹಸ್ಥಾಶ್ರಮ ಧರ್ಮಪಾಲನೆಗಾಗಿ ಭೋಗಾಸಕ್ತನಂತೆ ಕಾಣಬರುತ್ತಿದ್ದನಲ್ಲದೆ ವಿಷಯಗಳಿಗೆ ದಾಸನಾಗಿರದಂತೆ ಜಾಗರೂಕನಾಗಿದ್ದನು. ಜ್ಞಾನಿಯಾಗಿದ್ದರೂ ವಿನಯವಿಭೂಷಿತನೂ ಮಿತಭಾಷಿಯೂ, ಶಕ್ತಿವಂತನಾಗಿದ್ದರೂ ಕ್ಷಮಾಶೀಲನೂ, - ಮಹಾತ್ಯಾಗಿಯೂ ವಿರಕ್ತಶಿಖಾಮಣಿಯೂ ಆಗಿದ್ದ ಆ ನೃಪವರೇಣ್ಯನಲ್ಲಿ ಈ ಗುಣಗಳೆಲ್ಲವೂ ಸೋದರರಂತೆ ಏಕತ್ರ ಕಲೆತು ಪ್ರೀತಿಯಿಂದ ಇದ್ದುವು. ಇಂದ್ರಿಯಗಳ ಶಳೆತಕ್ಕೆ ಲೇಶಮಾತ್ರವೂ ಮನಸ್ಸುಕೊಡದೆ, ಸಕಲ ವಿದ್ಯಾವಿಶಾರದನಾಗಿ ಆ ರಾಜಚಂದ್ರಮನು, ಮುಪ್ಪಿನಿಂದ ಉಂಟಾಗಬಹುದಾದ ದೇಹವಿಕಾರಗಳಿಲ್ಲದೆಯೇ, (ಜ್ಞಾನ)ವೃದ್ಧತ್ವವನ್ನು ಹೊಂದಿ ವಿರಾಜಿಸಿದನು ಪ್ರಜೆಗಳ ಸಕಲಾಭೀಷ್ಟಗಳನ್ನೂ ಅಪ್ರಾರ್ಥಿತವಾಗಿ ನೆರವೇರಿಸುತ್ತಲೂ, ಸಕಲವಿಧಗಳಿಂದಲೂ ಅವರಿಗೆ ಯಾವ ಆಪದವೂ ಉಂಟಾಗದಂತೆ ಕಾಪಾಡುತ್ತಲೂ ದಿಲೀಪಮಹಾರಾಜನು ವಾಸ್ತವವಾಗಿಯೂ ಪ್ರಜೆಗಳಿಗೆ ತಂದೆಯಾಗಿಯೇ ಪರಿಣಮಿಸಿದ್ದುದರಿಂದ ಆತನ ರಾಜ್ಯದಲ್ಲಿ ಪ್ರಜೆಗಳು ತಮ್ಮ ಮಕ್ಕಳಿಗೆ ಕೇವಲ ಜನ್ಮ ಕೊಟ್ಟುದರಿಂದ ಮಾತ್ರವೇ ತಾವು ತಂದೆಗಳೆನ್ನಿಸಿಕೊಂಡರು. ಮಹಾ ಪುಣ್ಯಶೀಲನೂ ವಿದ್ವಾಂಸನೂ ಆದ ಆ ರಾಜನು ಶಿಕ್ಷಾರ್ಹರಾದವರನ್ನು ದಾಕ್ಷಿಣ್ಯವಶನಾಗಿ ಬಿಡದೆ, ನಿರಪರಾಧಿಗಳನ್ನು ಶಿಕ್ಷಿಸದೆ ತನ್ನ ಪ್ರಜೆಗಳನ್ನು ಕಾಪಾಡಿದನು. ಧೀಮಂತನಾದ ಆ ಮಹೀಪತಿಯು ಯಜ್ಞಯಾಗಾದಿಗಳಿಂದ ದೇವತೆಗಳನ್ನು ತೃಪ್ತಿಗೊಳಿಸಲು, ಅವರು ವರ್ಷರೂಪದಿಂದ ಸಸ್ಯಾದಿಗಳನ್ನು ಅಭಿವೃದ್ಧಿಗೊಳಿಸುವರು, ಹೀಗೆ ಭೂಪತಿಯೂ ಸ್ವರ್ಗಾಧಿಪತಿಯೂ ಪರಸ್ಪರ ಐಕಮತ್ಯದಿಂದ ಭೂಮಿಯಲ್ಲಿ ಸುಖಸಂಪತ್ತುಗಳನ್ನು ವೃದ್ಧಿಗೊಳಿಸಿದರು. ದಿಲೀಪಮಹಾರಾಜನು ಹೀಗೆ ಸಮುದ್ರಗಳೇ ಎಲ್ಲೆಕಟ್ಟಾಗಿರುವಂತೆ ವಿಸ್ತಾರವಾದ ಭೂಸಾಮ್ರಾಜ್ಯವನ್ನು ಧರ್ಮಮಾರ್ಗತತ್ಪರನಾಗಿ ಆಳಿಕೊಂಡಿದ್ದನು.

---

*

## ಅಧ್ಯಾಯ ೨　　'ಆಶ್ರಮವಾಸ'

ಲೋಕದಲ್ಲಿ ದುಃಖಮಿಶ್ರಿತವಲ್ಲದ ಸಂಪೂರ್ಣ ಸುಖವನ್ನೇ ಅನುಭವಿಸುವ ಪುಣ್ಯಶಾಲಿಯಾವನು! ಒಬ್ಬನು ಧನಹೀನನಾಗಿ ವ್ಯಥೆಪಟ್ಟರೆ, ಮತ್ತೊಬ್ಬನು ಮನೆಯಿಲ್ಲವೆಂಬ ವ್ಯಥೆಯಿಂದ ನರಳುತ್ತಿರುವನು. ಧನ ಮನೆಗಳನ್ನುಂಟಾಗಿರುವವನು ಪತ್ನಿಯಿಲ್ಲೆಂದು ಪರಿತಪಿಸುತ್ತಿರುವನು. ಇಷ್ಟೂ ಇರುವವನು ದೇಹಾರೋಗ್ಯವಿಲ್ಲವೆಂದು ಸಂಕಟಪಡುತ್ತಿರುವನು. ಆದೂ ಇದ್ದವನು-ಮಕ್ಕಳಿಲ್ಲವೆಂಬ ಅಗಾಧ ಚಿಂತಾವಶನಾಗಿ ಕೊರಗುತ್ತಿರುವನು. ಧನಮನೆ ಹೆಂಡಿರುಮಕ್ಕಳು ದೇಹಾರೋಗ್ಯ ಈ ಎಲ್ಲವನ್ನೂ ಉಂಟಾಗಿರುವವನು, ವಿದ್ಯಾವಿನಯಾದಿ ಸಂಪತ್ತಿಲ್ಲವೆಂದೋ ಮಕ್ಕಳು ದುರ್ಮಾರ್ಗರಾದರೆಂದೋ, ಹೆಂಡತಿಯು ದುರಾಚಾರಿಣಿಯೆಂದೋ, ವ್ಯವಹಾರದಲ್ಲಿ ಹೊರಕ್ಕೆ ಪರರಿಗೆ ಕೊಟ್ಟಿರುವ ಹಣವು ಹಿಂದಿರುಗಿ ಬರಲಿಲ್ಲವೆಂದೋ, ಭೂಮಿಕಾಣಿಗಳಲ್ಲಿ ಚೆನ್ನಾಗಿ ಬೆಳೆಬೆಳೆಯಲಿಲ್ಲವೆಂದೋ, ಅಥವ ಮತ್ತೇನೋ ಒಂದು ಬಗೆಯಿಂದ ಎಂತೂ ಚಿಂತಾಮಗ್ನನಾಗಿ ಕೊರಗುತ್ತಿರುವುದು ತಪ್ಪದು. ಈ ಎಲ್ಲ ವಿಷಯಗಳೂ ತೃಪ್ತಿಯಾಗುವಷ್ಟು ತುಂಬಿದ್ದರೂ, ತಕ್ಕ ಅಧಿಕಾರವಿಲ್ಲವೆಂಬ ಯೋಚನೆಯಾಗಲೀ, ಕೊನೆಗೆ, ಇಷ್ಟಕ್ಕಿಂತಲೂ ಐಶ್ವರ್ಯಾದಿಗಳು ಹೆಚ್ಚಾಗಿಲ್ಲವಲ್ಲ ಎಂಬ ಯೋಚನೆಯಾಗಲೀ ಬಾಧಿಸದೆ ಇರದು. ಹೀಗೆ ಮನುಷ್ಯನು ಯಾವುದಾದರೊಂದು ಚಿಂತೆಗೆ ವಶನಾಗಿರುವುದೇ ಅವನ ಪ್ರಕೃತಿಧರ್ಮವೆಂಬಂತೆ ತೋರುವುದು. ಅಭ್ಯಾಸವಶವಾಗಿಯಾಗಲೀ ಅನುಭವದಿಂದಲಾಗಲೀ ಐಹಿಕ ವಿಷಯಾದಿಗಳು ತುಚ್ಛವಾದುವೆಂದು ನಿರಾಶನಾದವನು, ಸ್ವರ್ಗ ಅಥವ ಮೋಕ್ಷಸಾಧನೆಯ ಅಗಾಧ ಚಿಂತೆಗೆ ವಶನಾಗಿ ಎಂತೂ ಮನಶ್ಶಾಂತಿಯನ್ನು ಕಳೆದುಕೊಂಡಿರುವನು. ಹೀಗೆ ಮನಸ್ಸಿನ ಅತೃಪ್ತಸ್ಥಿತಿಯು ಒಂದು ದೃಷ್ಟಿಯಿಂದ ಯೋಗ್ಯವಾದುದಲ್ಲವೆಂದು ಕಂಡುಬರಬಹುದಾದರೂ, ಮತ್ತೊಂದು ದೃಷ್ಟಿಯಿಂದ ಅದು ಇರಬೇಕಾದುದು ಆವಶ್ಯಕವೆಂದು ತೋರುವುದು. ಈ ಬಗೆಯ ಅಪೇಕ್ಷೆಯೊಂದು ಇದ್ದರಲ್ಲದೆ, ಲೋಕದಲ್ಲಿ ಪ್ರಾಣಿವರ್ಗದ-ಮುಖ್ಯವಾಗಿ ಮನುಷ್ಯವರ್ಗದ ಬೆಳವಣಿಗೆಯೇ ಮುಂದಕ್ಕೆ ಸಾಗಲಾರದು. ಇಂದಿರುವುದಕ್ಕಿಂ

ತಲೂ ಉತ್ತಮವಾದ ಮತ್ತೊಂದು ಸ್ಥಾನವು, ಅಥವ ಸ್ಥಿತಿಯು ಲಭ್ಯವಾಗಬೇಕೆಂದು ಆಸೆಯೇ ಇಲ್ಲದಿದ್ದಲ್ಲಿ, ಆ ಬಗ್ಗೆ ಪ್ರಯತ್ನವೇ ಹುಟ್ಟಲಾರದು. ಹಾಗೆ ಎಲ್ಲರೂ ನಿರಾಸೆಯಿಂದ ಇದ್ದರಾದರೆ ಲೋಕದಲ್ಲಿ ಯಾವ ಬಗೆಯ ಉನ್ನತಿಯ ವಿಚಾರವಾಗಿಯೂ ಪ್ರಯತ್ನವೂ, ತನ್ಮೂಲಕ ಅಭಿವೃದ್ಧಿಯೂ ನಡೆಯದೆ ಎಲ್ಲವೂ ಇದ್ದಂತೆಯೇ ಸ್ತಬ್ಧವಾಗಿದ್ದುಬಿಡುವುದು. ಹೀಗೆ ಸ್ತಬ್ಧವಾಗಿರುವ ಸ್ಥಿತಿಯು ಪ್ರಕೃತಿಧರ್ಮಕ್ಕೆ ವಿರೋಧವಾದುದರಿಂದ ಅದು ಒಡನೆಯೇ ಕ್ಷೀಣವಾಗತೊಡಗಿ, ಕ್ರಮಕ್ರಮವಾಗಿ ನಾಶವಾಗುವುದು ತಪ್ಪದು. ಆದುದರಿಂದ ಲೋಕದಲ್ಲಿ ಮನುಷ್ಯನು, ಧನ, ಭೂಮಿ, ಮನೆ, ವಸ್ತ್ರಒಡವೆಗಳು, ಅಧಿಕಾರ, ವಿದ್ಯೆ, ಪುತ್ರಸಂಪದ, ದೇಹಾರೋಗ್ಯ ಮುಂತಾದುವುಗಳಿಗಾಗಿ ಇಚ್ಛೆಗೊಂಡು, ಅವುಗಳ ಪ್ರಾಪ್ತಿಗಾಗಿ ಪ್ರಯತ್ನಿಸಿ ಗಳಿಸತಕ್ಕದು ತಪ್ಪಲ್ಲ. ಆದರೆ, ಅವುಗಳನ್ನು ಗಳಿಸುವಿಕೆಯಲ್ಲಿ, ಪರಪೀಡೆಯೂ, ಪಾಪಸಾಧನೆಯೂ ಆಗಿ ತನ್ನ ಆತ್ಮನಾಶವಾಗದಂತೆ ಗಮನಿಸತಕ್ಕದು ಮಾತ್ರ ಅತಿಶಯ ಆವಶ್ಯಕವಿದೆ.

ಇಕ್ಷ್ವಾಕುವಂಶದೀಪಕನಾದ ನಮ್ಮ ದಿಲೀಪ ಮಹಾರಾಜನು, ಪಿತೃಪಿತಾಮಹರಿಂದ ಪರಿಪಾಲಿತವಾದ ಅಖಂಡ ಭೂಮಂಡಲ ಸಾಮ್ರಾಜ್ಯಕ್ಕೆ ಏಕಾಧಿಪತಿಯಾಗಿದ್ದನು. ಆತನ ರಾಜಧಾನಿಯೂ, ದೇಶವೂ ಲಕ್ಷ್ಮೀಸಾನ್ನಿಧ್ಯದಿಂದ ಕಳೆಗೊಂಡು, ಸಕಲ ಸಂಪತ್ತುಗಳಿಗೂ ತೌರುಮನೆಯೆನ್ನಿಸಿಕೊಂಡು ವಿರಾಜಿಸುತ್ತಿರುವುದು. ಆನೆ ಕುದುರೆ ರಥ ಕಾಲಾಳುಗಳೆಂಬ ಅಪರಿಮಿತವಾದ ಚತುರ್ಬಲ ಸೈನ್ಯವು ಈ ಅಗಾಧ ಸಂಪತ್ತನ್ನು ಸದಾ ರಕ್ಷಿಸಲು ಏರ್ಪಟ್ಟಿರುವುದು. ರಾಜನು, ಮಗಧವಂಶದಲ್ಲಿ ಉದ್ಭವಿಸಿದ ಸುದಕ್ಷಿಣಾದೇವಿಯೆಂಬ ಶೀಲಯೌವನ ಸಂಪನ್ನಳಾದ ಯುವತೀಮಣಿಯನ್ನು ಪಾಣಿಗ್ರಹಣಮಾಡಿರುವನು. ಸಾಧ್ವೀ ಸುದಕ್ಷಿಣಾದೇವಿಯು, ವಿದ್ಯಾ ವಿನಯಾದಿಗಳಲ್ಲೂ ದಯಾದಾಕ್ಷಿಣ್ಯಾದಿ ಸದ್ಗುಣಗಳಲ್ಲೂ ಸಾಕ್ಷಾಲ್ಲಕ್ಷ್ಮಿ ಪಾರ್ವತಿ ಸರಸ್ವತಿಯರಿಗೆ ಸಮಾನಳೋ ಎಂಬಂತೆ ವಿರಾಜಿಸುತ್ತ ಸಕಲ ಶುಭಲಕ್ಷಣಗಳಿಂದಲೂ ಅರಮನೆಗೆ ಅಲಂಕಾರಪ್ರಾಯಳಾಗಿರುವಳು. ಮಹಾರಾಜನು, ಅಂತಃಪುರದ ಇತರ ಎಲ್ಲರಿಗಿಂತಲೂ ಸುದಕ್ಷಿಣಾದೇವಿಯಲ್ಲೇ ವಿಶೇಷ ಅನುರಾಗವನ್ನಿಟ್ಟು ಪ್ರೀತಿವಿಶ್ವಾಸಗಳಿಂದ ನಡೆದುಕೊ

ಳ್ಳುತ್ತಿರುವನು. ಇಷ್ಟು ಬಗೆಯ ಸೌಭಾಗ್ಯ ಸಂಪತ್ತುಗಳಿಂದ ಕೂಡಿದ್ದವ ನಾದರೂ, ದಿಲೀಪಮಹಾರಾಜನು ಮನೋವ್ಯಥೆಯಿಂದ ಮಾತ್ರ ಮುಕ್ತ ನಾಗಿರಲಿಲ್ಲ. ಅಷ್ಟು ಸೌಭಾಗ್ಯವಿದ್ದರೂ, ವಂಶಾಭಿವೃದ್ಧಿಗೆ ಒಬ್ಬ ಪುತ್ರ ನಿಲ್ಲವಲ್ಲ- ಮನು ಇಕ್ಷ್ವಾಕು ಮುಂತಾದ ಪುಣ್ಯಶೀಲರಿಂದ ತನ್ನವರೆಗೆ ನಡೆದುಬಂದ ಸೂರ್ಯವಂಶವು ದುರ್ದೈವಿಯಾದ ತನ್ನಲ್ಲಿ ಕೊನೆಗಾಣುವಂ ತಾಯಿತಲ್ಲ ಎಂದು ಅಗಾಧ ಚಿಂತಾಮಗ್ನನಾಗಿ, ತನ್ನಾ ಸತೀಮಣಿಯು ಎಂದಿಗೆ ಗರ್ಭಧಾರಣಮಾಡುವಳೋ ತಾನೆಂದಿಗೆ ಮುದ್ದುಮಗುವಿನ ಮುಖ ದರ್ಶನಮಾಡಿ ಧನ್ಯನಾಗುವೆನೋ ಎಂಬ ಆಸೆಯಿಂದ, ಮುಂಗಾರುಮಳೆ ಹನಿಗಾಗಿ ಕಾದಿರುವ ಚಾತಕಪಕ್ಷಿಯಂತೆ ಎಷ್ಟೋಕಾಲ ನಿರೀಕ್ಷಿಸಿಕೊಂಡಿ ದ್ದನು. ಎಷ್ಟುಕಾಲವಾದರೂ ತನ್ನಾ ಪತ್ನಿಯಲ್ಲಿ ಸಂತಾನವಾಗುವ ಲಕ್ಷಣ ಗಳಾವುವೂ ಕಂಡುಬರದಿರಲು ಕ್ರಮಕ್ರಮವಾಗಿ ಮನಸ್ಸು ಬೇಸರಗೊಳ್ಳ ತೊಡಗಿತು. ಆಹಾರ ನಿದ್ರೆ ದೇಹಸೌಖ್ಯಾದಿಗಳಲ್ಲಿ ಅಪೇಕ್ಷೆಯು ಕಡಮೆ ಯಾಯಿತು. ರಾಜ್ಯವಿಚಾರಗಳಲ್ಲಿ ಆಸಕ್ತಿ ಕುಂದಲು ಮೊದಲಾಯಿತು. ಆಪ್ತೇಷ್ಟರೊಂದಿಗೆ ಮಾತುಕಥೆಗಳೂ ಬೇಡವಾದುವು. ತನ್ನ ಪತ್ನಿಯ ಉದರದಲ್ಲಿ ತನಗೆ ಸಮಾನನೆಂದೆನಿಸಿಕೊಳ್ಳಲು ಅರ್ಹವಾದ ಪುತ್ರಸಂತಾನ ವನ್ನು ಪಡೆಯಲಿಕ್ಕಾಗಿ ವ್ರತನಿಯಮಾದಿಗಳನ್ನು ಮಾಡಬೇಕೆಂದು ಮನ ಸ್ಸಿನಲ್ಲಿ ಪ್ರೇರಣೆಯಾಯಿತು. ಆ ಯೋಚನೆಯೇ ಮನಸ್ಸಿನಲ್ಲಿ ಮೇಲೆಮೇಲೆ ಪರಿವರ್ತಿತವಾಗಿ, ಆ ಮಾರ್ಗಬಿಟ್ಟರೆ ಮತ್ತಾವ ಸಾಧನದಿಂದಲೂ ತನ್ನ ಇಷ್ಟಾರ್ಥವು ಪೂರ್ತಿಯಾಗುವಂತಿಲ್ಲವೆಂಬುದು ಮನಸ್ಸಿಗೆ ದೃಢವಾಯಿತು.

ವ್ರತನಿಯಮಾದಿಗಳನ್ನು ಆಚರಿಸಿ ವಂಶೋದ್ಧಾರಕ ಸಂತತಿಯನ್ನು ಪಡೆಯಲಿಚ್ಛಿಸಿದ ರಾಜನು ಕ್ರಮಕ್ರಮವಾಗಿ ರಾಜ್ಯಪಾಲನಾ ವಿಚಾರ ಗಳನ್ನು ತನ್ನ ಮಂತ್ರಿಶ್ರೇಷ್ಠರ ಅಧಿಕಾರಗಳಿಗೆ ಒಳಪಡಿಸಿ, ಧರ್ಮದಿಂದ ನಡೆಯಲು ಅವಶ್ಯಕವಾದ ಕಟ್ಟುಪಾಡುಗಳನ್ನು ಮಾಡಿದನು. ಮಂತ್ರಿ ಗಳು, ಮಹಾರಾಜನ ಆಜ್ಞಾಬದ್ಧರಾಗಿ ಗುರುತರವಾದ ಪ್ರಜಾಪಾಲನಾ ಕಾರ್ಯವನ್ನು ಸ್ವೀಕರಿಸಿ, ಧರ್ಮಕ್ಕೆ ಲೇಶಮಾತ್ರವೂ ಲೋಪವುಂಟಾಗ ದಂತೆ ನಡೆಯುವುದರಲ್ಲಿ ಜಾಗರೂಕರಾಗಿದ್ದರು. ಮಹಾರಾಜನು ಹಾಗೆ ರಾಜ್ಯಪಾಲನೆಗೆ ತಕ್ಕ ವ್ಯವಸ್ಥೆಮಾಡಿ, ಮುಂದೆ ತನ್ನ ಗುರುವರ್ಯರಾದ

ಶ್ರೀ ವಸಿಷ್ಠ ಮಹರ್ಷಿಗಳ ಆಶ್ರಮಕ್ಕೆ ಪ್ರಯಾಣಮಾಡಿ, ಅಲ್ಲಿ ಅವರ ಆಜ್ಞಾನುಸಾರ ವ್ರತಾದಿ ಸತ್ಕಾರ್ಯಗಳನ್ನು ನೆರವೇರಿಸಿ ಸತ್ಸಂತಾನವನ್ನು ಗಳಿಸಬೇಕೆಂದು ನಿರ್ಧರಿಸಿದನು.

ಮುಂದೆ ಒಂದಾನೊಂದುದಿನ ರಾಜನು ದಿವ್ಯರಥಾರೂಢನಾಗಿ ರಾಜಧಾನಿಯನ್ನು ಬಿಟ್ಟು ಪತ್ನಿ ಸುದಕ್ಷಿಣಾದೇವಿಯೊಂದಿಗೆ ಪ್ರಯಾಣಮಾಡಿದನು. ಕೇವಲ ಮಿತಪರಿವಾರವು ಮಾತ್ರವೇ ರಾಜಾಜ್ಞೆಯಿಂದ ಅವರನ್ನು ಹಿಂಬಾಲಿಸಿದ್ದಿತು. ದಿಲೀಪಪ್ರಭುವು, ಮಹರ್ಷಿಗಳ ಆಶ್ರಮಕ್ಕೆ ಯಾವ ರೀತಿಯಿಂದಲೂ ಪೀಡೆಯುಂಟಾಗಬಾರದೆಂದು, ತಾವು ಏರಿಕೊಂಡು ಬಂದ ರಥವನ್ನೂ ಸಹ ಆಶ್ರಮದ ಹೊರಪ್ರಾಂತದಲ್ಲೇ ಬಿಟ್ಟು, ಭಯಭಕ್ತಿಯಿಂದ ಆಶ್ರಮವನ್ನು ಪ್ರವೇಶಿಸಿ, ಕಾಲ್ನಡಿಗೆಯಿಂದಲೇ ಮಹರ್ಷಿಗಳ ಸಾನ್ನಿಧ್ಯವನ್ನು ಕುರಿತು ಪ್ರಯಾಣಮಾಡಿದನು. ಆಶ್ರಮದ ಗಿಡ ಮರಗಳೂ, ಪುಷ್ಪಲತಾದಿಗಳೂ, ಮಹಾಭಾಗನಾದ ಆ ರಾಜಾತಿಥಿಗೆ ಯೋಗ್ಯವಾದ ಸುಖಾಗಮನವನ್ನು ಸೂಚಿಸಲಿಕ್ಕಾಗಿಯೋ ಎಂಬಂತೆ ಸುವಾಸಿತ ಪುಷ್ಪಗಳನ್ನು ಅವರಮೇಲೆ ಸುರಿಸಿದುವು. ಮಂದಮಾರುತವು ಬೀಸಿ ಅವರ ಮಾರ್ಗಾಯಾಸವನ್ನು ಪರಿಹರಿಸಲು ಪ್ರಯತ್ನಿಸಿತು. ಗಿಳಿ ಕೋಗಿಲೆ ಮುಂತಾದ ಪಕ್ಷಿವರ್ಗಗಳು ತಮ್ಮ ಗಾನದಿಂದ ಅವರಿಗೆ ಕರ್ಣಾನಂದಗೊಳಿಸಿದುವು. ಧನುರ್ಬಾಣಧಾರಿಗಳಾಗಿದ್ದ ರಾಜನನ್ನೂ, ಆತನ ಅಂಗರಕ್ಷರನ್ನೂ ಕಂಡು ಬೆದರಿದ್ದ ಎರಳೆಗಳು ದೂರದಲ್ಲೇ ನಿಂತು, ತಮ್ಮ ವಿಶಾಲವಾದ ಕಣ್ಣುಗಳಿಂದ, ಅವರು ದೃಷ್ಟಿಗೋಚರವಾಗುವವರೆಗೂ ಕಣ್ಣಿಟ್ಟು ಅವರ ಕಡೆಯೇ ನೋಡುತ್ತಲಿದ್ದುವು. ಪ್ರಕೃತಿಯೇ ತಮ್ಮ ಆಗಮನವನ್ನು ಅಭಿನಂದಿಸುತ್ತಿರುವ ಈ ಶುಭಸೂಚನೆಯನ್ನು ಕಂಡು ಪರಮ ಸಂತುಷ್ಟನಾಗಿ, ಮಹರ್ಷಿಗಳ ಪರಮಾನುಗ್ರಹವು ತನ್ನ ಮೇಲುಂಟಾಗುವುದು, ತನ್ನ ಆಶೋತ್ತರವು ಸಿದ್ಧಿಸುವುದು, ತಾನು ಕೃತಕೃತ್ಯನಾಗುವೆನು ಎಂದು ಮನಸ್ಸಮಾಧಾನಗೊಳ್ಳುತ್ತಿರಲು ಆಶ್ರಮ ಸಮೀಪದ ಆ ಉಪವನ ಪ್ರಾಂತದಲ್ಲಿ ಬಹುದೂರ ನಡೆದು ದಿಲೀಪ ರಾಜೇಂದ್ರನು ಆಶ್ರಮದ್ವಾರವನ್ನು ಕಂಡು, ಮುಂದರಿಸಿದನು.

ಆಶ್ರಮದ ಬಳಿ ಮುನಿಕನ್ಯೆಯರು ಹೂಗಿಡಗಳ ಪಾತಿಗಳಿಗೆ ನೀರೆರೆ

ಯುತ್ತಲೂ, ಸಾಧುವಾದ ಆಶ್ರಮವಾಸಿ ಮೃಗಪಕ್ಷಿಗಳನ್ನು ಆದರಿಸುತ್ತಲೂ ಇದ್ದರು. ಜಿಂಕೆ ಮುಂತಾದ ಸಾಧು ಪ್ರಾಣಿಗಳು, ಎಳೆಯ ಗರಿಕೆಯನ್ನೂ ತಮ್ಮ ಆಹಾರಕ್ಕಾಗಿ ಇಟ್ಟ ಧಾನ್ಯಾದಿಗಳನ್ನೂ ತಿನ್ನುತ್ತಲೂ ಹೊಸಬರಾದ ರಾಜಪರಿವಾರದವರನ್ನು ಗಾಬರಿಗೊಂಡ ದೃಷ್ಟಿಯಿಂದ ಕಣ್ದೆರೆದು ನೋಡು ತ್ತಲೂ ಇದ್ದುವು. ರಾಜನೂ ಸುದಕ್ಷಿಣಾದೇವಿಯೂ, ಪರಿವಾರದವರೂ, ಶುದ್ಧಶಾಂತಮಯ ವಾತಾವರಣದ ಈ ದೃಶ್ಯಗಳನ್ನು ನೋಡುತ್ತ ಪ್ರಸನ್ನ ಚಿತ್ತರಾಗಿ, ಆಶ್ರಮದ್ವಾರದ ಬಳಿಗೆ ಬರುತ್ತಿರಲು, ಒಳಗಿನಿಂದ ಮುನಿವಟು ಗಳು ಹೇಳುತ್ತಿದ್ದ ವೇದಘೋಷವು ಕೇಳಬಂದಿತು. ಮಹರ್ಷಿಗಳು ನಡೆ ಸುತ್ತಿದ್ದ ಹೋಮದಿಂದ ಸುವಾಸನಾಯುಕ್ತವಾದ ಹೋಮಧೂಮವು ಘ್ರಾಣೇಂದ್ರಿಯಕ್ಕೆ ಮಹದಾನಂದವನ್ನುಂಟುಮಾಡುತ್ತ ರಾಜನನ್ನು ಆಹ್ವಾ ನಿಸಿತು. ಆಗಲಾ ದಿಲೀಪಮಹಾರಾಜನು, ತನ್ನಾ ಮಿತಪರಿವಾರದವರನ್ನೂ ಅಲ್ಲೇ ನಿಲ್ಲಹೇಳಿ, ತಾನೂ ತನ್ನ ಪತ್ನಿಯೂ ಮಾತ್ರವೇ ಒಳಹೊಕ್ಕರು. ತಮ್ಮ ಆ ಆಶ್ರಮಕ್ಕೆ ದಯೆಮಾಡಿಸಿದ ರಾಜೇಂದ್ರನನ್ನು ಮುನಿ ವಟುಗಳೂ ಮುನಿಗಳೂ, - ಆತನು ನ್ಯಾಯದಕ್ಷನೂ, ತಮ್ಮನ್ನು ರಕ್ಷಿಸುವ ಪ್ರಭುವೂ ಎಂಬ ಆದರ ಭಾವದಿಂದ ಕಂಡು ಉಚಿತವಚನಗಳಿಂದ ಉಪ ಚರಿಸಿ, ಅತಿಥಿಗಳಾದ ಆ ರಾಜದಂಪತಿಗಳನ್ನು ವಿಧ್ಯುಕ್ತವಿಧಾನಗಳಿಂದ ಲೆಲ್ಲ ಸತ್ಕರಿಸಿದರು.

ಮುನಿಗಳ ಮತ್ತು ಮುನಿವಟುಗಳ ಮೃದುಮಧುರ ವಾಕ್ಯಗಳಿಂ ದಲೂ ಆದರ ಸತ್ಕಾರಗಳಿಂದಲೂ ಸುಪ್ರೀತನಾದ ರಾಜೇಂದ್ರನು, ವಸಿಷ್ಠ ಮಹಾಮುನಿಗಳನ್ನು ಸಂದರ್ಶಿಸಬೇಕೆಂದು ಅಪೇಕ್ಷಿಸಲು ಅವರು ಆತನನ್ನು ಕರೆದೊಯ್ದು ಹೋಮವೇದಿಕೆಯ ಬಳಿ ಕುಳಿತಿದ್ದ ಆ ಮಹರ್ಷಿಯ ದರ್ಶನ ಮಾಡಿಸಿದರು. ಸ್ವಾಹಾದೇವಿಯೊಂದಿಗೆ ಕೂಡಿರುವ ಯಜ್ಞೇಶ್ವರನಂತೆ ಪತಿವ್ರತಾಶಿರೋಮಣಿಯಾದ ಅರುಂಧತೀದೇವಿಯೊಂದಿಗೆ ಕುಳಿತಿದ್ದ ಮಹಾ ತೇಜಸ್ವಿಯಾದ ಆ ಮುನಿಸಾರ್ವಭೌಮನನ್ನು ಕಂಡು, ದಿಲೀಪ ಮಹಾ ರಾಜನು ಭಯಭರಿತಭಕ್ತಿಯಿಂದ ಪತ್ನಿಯೊಂದಿಗೆ ದೀರ್ಘದಂಡ ನಮಸ್ಕಾರ ಮಾಡಿದನು. ಸೂರ್ಯವಂಶ ವಿಭೂಷಣನಾದ ಆ ರಾಜನನ್ನೂ, ಆತನ ಧರ್ಮಪತ್ನಿಯಾದ ಆ ಸಾಧ್ವೀಮಣಿಯನ್ನೂ ಕಂಡು, ಆ ವಸಿಷ್ಠಾರುಂಧತಿ

ಯರು ಅವರ ವಿನಯ ಸೌಜನ್ಯಾದಿಗಳಿಗಾಗಿ ಪರಮ ಸುಪ್ರೀತರಾಗಿ-'ದಿಲೀಪ ರಾಜಾ, ನೀವು ಪತಿಪತ್ನಿಯರು ಬಹುದೂರ ಪ್ರಯಾಣಮಾಡಿ, ಆಯಾಸ ಗೊಂಡು ಬಂದಿರುವಿರಿ; ವಿಶ್ರಮಿಸಿಕೊಳ್ಳಿ,-ನಿಮಗೆ ಮಂಗಳವಾಗಲಿ ನಿಮ್ಮ ಪ್ರಜಾಪರಿವಾರಗಳಿಗೆ ಕುಶಲವೆ? ನಿಮ್ಮ ಮಂತ್ರಿಸಾಮಂತರು ವಿಧೇಯರಾಗಿ, ರಾಜ್ಯಭಾರದಲ್ಲಿ ಸಹಾಯಕರಾಗಿರುವರೇ? ರಾಜಭಾಂಡಾರವು ದಿನದಿನಕ್ಕೆ ಅಭಿವೃದ್ಧಿಸ್ಥಿತಿಯಲ್ಲಿರುವುದೇ? ದೇಶದಲ್ಲಿ ಮಳೆಬೆಳೆಗಳಾಗಿ ಪ್ರಜೆಗಳೂ ಪಶ್ವಾದಿಗಳೂ ಯಾವ ಬಗೆಯ ಈತಿಬಾಧೆಗೂ ಒಳಗಾಗದೆ ಆರೋಗ್ಯವಾಗಿ ದ್ದಾರೆಯೇ?' ಎಂದು ಮುಂತಾಗಿ ಕುಶಲಪ್ರಶ್ನೆಮಾಡಿ ಆಶೀರ್ವಾದಮಾಡಿ ದರು. ಅರುಂಧತೀದೇವಿಯು - ಸುದಕ್ಷಿಣಾದೇವಿಯನ್ನು ಬಳಿಗೆ ಕರೆದು ಪ್ರೈದ ಡವಿ, ಮುಡಿಯನ್ನೂ ಮುಂಗುರುಳುಗಳನ್ನೂ ನೇವರಿಸಿ, ಪರಮಪ್ರೀತಿ ಯಿಂದ ಮೃದುಮಧುರ ವಾಕ್ಯಗಳನ್ನಾಡಿ ಆದರಿಸಿದಳು.

ಆಗಲಾ ದಿಲೀಪಮಹಾರಾಜನು, ಪುನಃ ಮಹರ್ಷಿಯ ಪಾದಗಳನ್ನು ಹಿಡಿದು ನಮಸ್ಕರಿಸಿ- 'ಮಹರ್ಷಿವರ್ಯ, ನನಗೆ ಪ್ರಾಪ್ತವಾಗುವ ಆಧ್ಯಾ ತ್ಮಿಕ ಆಧಿದೈವಿಕ ಆಧಿಭೌತಿಕಗಳೆಂಬ ತಾಪತ್ರಯಗಳನ್ನೂ ನಿವಾರಿಸಿ ಕಾಪಾಡಲು ಸಮರ್ಥವಾದ ತಮ್ಮ ಪಾದಾನುಗ್ರಹವು ಅಕ್ಷಯವಾಗಿರುತ್ತಿರು ವಲ್ಲಿ, ನನಗಾಗಲಿ, ನನ್ನ ರಾಜ್ಯಕ್ಕಾಗಲೀ ಸಕಲವಿಧದಿಂದಲೂ ಕ್ಷೇಮವೇ ಅಲ್ಲದೆ, ಅನ್ಯಥಾ ಏನು ಉಂಟಾಗುವುದು! ಸಪ್ತಾಂಗಸಮೇತವಾದ ನನ್ನ ರಾಜ್ಯವು ತಮ್ಮ ಆಶೀರ್ವಾದದಿಂದ ಸುರಕ್ಷಿತವಾಗಿಯೂ ಸುಭಿಕ್ಷವಾಗಿಯೂ ಇದೆ' ಎಂದು ಬಿನ್ನವಿಸಿದನು. ಮಹಾರಾಜನು, ತನಗೆ ಸ್ವಾಭಾವಿಕವಾದ ಸೌಜನ್ಯ ಮತ್ತು ಗುರು ಭಕ್ತಿಗಳಿಂದ ಪ್ರೇರಿತನಾಗಿ ಅಷ್ಟು ಮಾತುಗಳನ್ನು ಹೇಳಿದರೂ, ಇನ್ನೂ ಆತನ ಮನಸ್ಸಿನಲ್ಲಿ ಏನೋ ಒಂದು ಕಳಂಕವು ಗೂಢ ವಾಗಿ ಇದೆಯೆಂಬುದನ್ನು ಬ್ರಹ್ಮಜ್ಞರಾದ ವಸಿಷ್ಠ ಮಹರ್ಷಿಗಳು ಕಂಡು ಕೊಂಡರು. ನಿನ್ನ ಮನಸ್ಸಿನ ಬಯಕೆಯೇನೆಂದು ಪುನಃ ಪ್ರಶ್ನಿಸಲಿಲ್ಲ. ರಾಜನೇ ಮುಂದೇನು ಹೇಳಲಿರುವನೋ ಎಂದು ಮತ್ತೊಮ್ಮೆ ಆತನ ಮುಖ ವನ್ನು ದಿಟ್ಟಿಸಿ ನೋಡಿದರು. ರಾಜನು ಮಹರ್ಷಿಗಳ ಆ ನೋಟದಲ್ಲಿ ತನ್ನ ಮನಸ್ಸಿನಲ್ಲಿ ಗೂಢವಾಗಿರುವ ವಿಚಾರವೇನು ಎಂಬ ಪ್ರಶ್ನೆಯು ಅಡಗಿದೆ ಎಂಬುದನ್ನು ಕಂಡುಕೊಂಡು, ಅವರಿಗೆ ಕೈಮುಗಿದು ಪುನಃ ಹೇಳತೊಡಗಿ

ದನು.-'ಮಹರ್ಷಿವರ್ಯರೆ, ತಮ್ಮ ಪಾದಾನುಗ್ರಹದಿಂದ ಶತ್ರುಗಳ ಕುತಂತ್ರಗಳನ್ನು ಭೇದಿಸಬಲ್ಲ ಮಂತ್ರಸಿದ್ಧಿಯೂ, ಅವರ ಸೈನ್ಯಸಮೂಹಗಳನ್ನು ನಿಶ್ಶೇಷವಾಗಿಸಬಲ್ಲ ಅಸ್ತ್ರಶಸ್ತ್ರಗಳ ಸಹಾಯವೂ ನಮ್ಮಲ್ಲಿ ಅಕ್ಷಯವಾಗಿದೆ. ಮಾತ್ರವಲ್ಲ, ಮಹರ್ಷಿವರ್ಯರೇ ತಾವು ವಿಧಿವಿಹಿತ ವಿಧಾನಗಳಿಂದ ಯಜ್ಞೇಶ್ವರನಲ್ಲಿ ಸಮರ್ಪಿಸುವ ಹವ್ಯವು, ನಮಗೆ ಪ್ರತಿಕೂಲವಾಗಿರುವ ದುರ್ಗ್ರಹಗಳ ಸಾಮರ್ಥ್ಯವನ್ನು ಶೋಷಿಸುವ ಶಕ್ತಿಯಾಗಿ, ನಮ್ಮ ಆಹಾರ ಸಾಮಗ್ರಿಗಳ ಬೆಳೆವಣಿಗೆಗೆ ಪರಮಾವಶ್ಯಕವಾದ ದಿವ್ಯವರ್ಷವಾಗಿ ಸುರಿದು ನಮ್ಮನ್ನು ಸಂರಕ್ಷಿಸುತ್ತಿದೆ. ಬ್ರಹ್ಮರ್ಷಿ ಶ್ರೇಷ್ಠರೆ, ನನ್ನ ಪ್ರಜಾಪರಿವಾರಗಳವರೆಲ್ಲರೂ ಯಾವ ಬಗೆಯ ಈತಿಬಾಧೆಗೂ ಒಳಪಡದೆ, ಪೂರ್ಣಾಯುಷ್ಮಂತರಾಗಿ, ಎಲ್ಲಾ ವಿಧಗಳಿಂದಲೂ ಅಭಿವೃದ್ಧಿಗೊಳುತ್ತಿರುವುದೆಲ್ಲ ತಮ್ಮ ಬ್ರಹ್ಮವರ್ಚಸ್ಸಿನ ಪ್ರಭಾವದಿಂದಲೇ ಅಲ್ಲವೆ! ನಮ್ಮ ಕುಲಗುರುಗಳೂ, ಬ್ರಹ್ಮಪುತ್ರರೂ ಬ್ರಹ್ಮರ್ಷಿಮುಖ್ಯರೂ ಆದ ತಾವು ನನಗೆ ಮೇಲನ್ನುಂಟುಮಾಡಲು ಸದಾ ಸುಪ್ರೀತರಾಗಿರುತ್ತಿರುವಲ್ಲಿ ಯಾವ ಆಪದವಾದರೂ ನನ್ನ ಬಳಿಗೆ ಬರಲು ಹೇಗೆ ಸಾಧ್ಯವಾಗುವುದು-ಅಲ್ಲದೆ ಶ್ರೇಯಸ್ಸು ಸದಾ ನನ್ನ ಬಳಿಯಲ್ಲೇ ಇರದಿರಲು ತಾನೇ ಹೇಗೆ ಸಾಧ್ಯವಾಗುವುದು!' ಎಂದು ನುಡಿದನು. ಮಹಾರಾಜನು ಅಷ್ಟು ಮಾತುಗಳನ್ನು ಹೇಳಿದನಾದರೂ, ಆತನ ಮನೋಭೀಷ್ಟವೇನೆಂಬುದನ್ನು ಇನ್ನೂ ವ್ಯಕ್ತಪಡಿಸಲಿಲ್ಲವೆಂಬುದು ಮಹರ್ಷಿಗಳ ಗಮನಕ್ಕೆ ಬರದಿರಲಿಲ್ಲ. ಅವರು-'ಸಾಧುಸಾಧು, ರಾಜೇಂದ್ರ ನಿನ್ನಮಾತುಗಳು ನಿನ್ನವಂಶೋನ್ನತಿಗೂ, ಸೌಜನ್ಯಕ್ಕೂ ತಕ್ಕುವಾಗಿವೆ. ಮನು ಇಕ್ಷ್ವಾಕುಗಳ ವಂಶಸಂಭೂತನಾದ ನೀನು ಹೀಗೆ ವಿನಯಾದಿ ಸದ್ಗುಣಗಳಿಂದ ವಿಭೂಷಿತನಾಗಿರತಕ್ಕುದು ಯುಕ್ತವಾಗಿಯೇ ಇದೆ' ಎಂದು ನುಡಿದರು. ಮಹಾರಾಜನು,-'ನಿನ್ನ ಬರುವಿಕೆಯ ಉದ್ದೇಶವೇನೆಂದು ಮಹರ್ಷಿಗಳು ತನ್ನನ್ನು ಪ್ರಶ್ನಿಸುವರೆಂ'ದು ತಿಳಿದಿದ್ದನು. ಆದರೆ ಅವರಿಂದ ಆ ಪ್ರಶ್ನೆಯು ಬಾರದಿರಲು, ಪತ್ನೀಸಮೇತನಾದ ತನ್ನ ಬರುವಿಕೆಗೆ ಕಾರಣವನ್ನು ತಾನೇ ಹೇಳಿಕೊಳ್ಳಬೇಕೆಂದು ನಿರ್ಧರಿಸಿದನು.

-'ಮಹರ್ಷಿವರ್ಯಾ, ಈ ದಾಸನಿಗೆ ಇಷ್ಟು ಸಂಪತ್ತು ಸಮೃದ್ಧಿಯಾಗಿದ್ದರೂ ಎಲ್ಲವೂ, ಕಾಡಿನಲ್ಲಿ ಪ್ರಕಾಶಿಸುವ ಬೆಳದಿಂಗಳಂತೆ ನಿಷ್ಫಲ

ವಾಗಿವೆ. ತಮ್ಮ ಈ ಸೊಸೆಯು (ಸುದಕ್ಷಿಣಾದೇವಿ) ಸಂತಾನರತ್ನ ವಿಹೀನ ಗಳಾಗಿರುವುದನ್ನು ನೋಡಿದಂತೆಲ್ಲ, ಬಹುರತ್ನಾಕರಳಾದ ಈ ವಸುಂಧ ರೆಯೂ ಸಹ ನನಗೆ ಲೇಶಮಾತ್ರವೂ ಸಂತೋಷವನ್ನುಂಟುಮಾಡಲೊಲ್ಲಳು ಇದು ಮಾತ್ರವಲ್ಲ, ಪರಲೋಕವಾಸಿಗಳಾದ ನನ್ನ ಪಿತೃಗಳು, ನನ್ನಲ್ಲೇ ವಂಶಚ್ಛೇದವಾಗುವುದನ್ನು ತಿಳಿದು, ನನ್ನ ತರುವಾಯ ತಮಗೆ ತಪ್ಪದೆ ಅಧೋಗತಿಯೇ ಸಿದ್ಧವೆಂಬುದನ್ನು ಅರಿತವರಾಗಿ ಶ್ರಾದ್ಧಾದಿಗಳಲ್ಲಿ ನಾನು ಸಮರ್ಪಿಸುವ ಪಿಂಡಾದಿಗಳನ್ನು ಶಾಂತಚಿತ್ತತೆಯಿಂದ ಈಗಲೇ ಸ್ವೀಕರಿಸ ದಿರುವರು. ಇದು ನನ್ನ ಮನಸ್ಸನ್ನು ವಿಶೇಷ ಪರಿತಾಪಗೊಳಿಸತಕ್ಕುದಾ ಗಿದೆ. ತಾಪಸೇಂದ್ರ ಮತ್ತೇನು ಹೇಳಲಿ! ನನ್ನ ತರುವಾಯ ಈ ತಿಲೋ ದಕವೂ ದುರ್ಲಭವೆಂದು ಯೋಚಿಸಿ ನನ್ನ ಪಿತೃಗಳು ನಾನೀಗ ಕೊಡುತ್ತಿ ರುವ ತರ್ಪಣದ ಉದಕವನ್ನು ತಮ್ಮ ನಿಟ್ಟುಸಿರಿನಿಂದ ಬಿಸಿಮಾಡಿ ಕುಡಿ ಯುತ್ತಿರುವರೆಂದು ನನಗೆ ತೋರುತ್ತಲಿದೆ ಹಲವು ಯಜ್ಞಾದಿಗಳನ್ನಾಚ ರಿಸಿ, ಶುದ್ಧತೆಯನ್ನು ಹೊಂದಿದೆನಾದರೂ, ಸಂತಾನವಿಹೀನತೆಯಿಂದ ನಾನು ಸ್ವರ್ಗಬಾಹಿರನಾದೆನಲ್ಲವೆ? ಲೋಕದಲ್ಲಿ ದಾನ ತಪಸ್ಸು ಮೊದಲಾದುವುಗ ಳಿಂದ ಉದ್ಭವವಾದ ಸುಕೃತವು ಪರಲೋಕದಲ್ಲಿ ಸೌಖ್ಯ ಸಮೃದ್ಧಿಯನ್ನುಂ ಟುಮಾಡುವುದು. ಆದರೆ ಸತ್ಸಂತಾನವೆಂಬುದು ಇಹಪರಗಳೆರಡರಲ್ಲೂ ಸೌಖ್ಯಸಮೃದ್ಧಿಗಳನ್ನುಂಟುಮಾಡಲು ಶಕ್ತವಾಗುವುದು. ಅಕ್ಕಟಾ, ಪಿತೃ ಋಣವನ್ನು ತೀರಿಸಿಕೊಳ್ಳಲು ಅಶಕ್ತನಾಗಿ, ಆನೆಯು ತನ್ನನ್ನು ಬಂಧಿಸಿದ್ದ ಸರಪಳಿಯಿಂದ ಮರ್ಮಭೇದಕವಾದ ಬಾಧೆಯಿಂದ ಸಂಕಟಪಡುವಂತೆ ನಾನೂ ಸಹ ಅಗಾಧ ಸಂಕಟಕ್ಕೆ ಒಳಗಾಗಿದ್ದೇನೆ. ಆರ್ಯೋತ್ತಮಾ, ಇಕ್ಷ್ವಾಕುಕುಲದವರ ಸಕಲ ಶ್ರೇಯಸ್ಸೂ ನಿಮ್ಮ ಪಾದಗಳಿಗೇ ಸೇರಿದುವಾ ಗಿವೆ. ನನ್ನ ಈ ಚಿಂತೆಯನ್ನು ನಿವಾರಿಸುವ ಮಾರ್ಗವಾವುದೆಂಬುದನ್ನು ತಾವೇ ತಿಳಿಸಲಾಗದೆ?' ಎಂದು ರಾಜನು ದೀನನಾಗಿ ಪ್ರಾರ್ಥಿಸಿಕೊಂಡನು.

ದಿಲೀಪಮಹಾರಾಜನು ನುಡಿದ ಆ ಮಾತುಗಳನ್ನೆಲ್ಲ ಸಾವಧಾನದಿಂದ ಕೇಳಿದ ಆ ಮುನಿಪೋತ್ತಮರು ಆತನಿಗೆ ಸಂತಾನವಾಗದೆ ಇರಲು ಕಾರಣವೇ ನಿರಬಹುದೆಂದು, ನಿಶ್ಚಂಚಲಭಾವದಿಂದ ಕ್ಷಣಕಾಲ ಕಣ್ಣುಮುಚ್ಚಿ ಧ್ಯಾನ ಮಗ್ನರಾಗಿ ಜ್ಞಾನದೃಷ್ಟಿಯಿಂದ ನೋಡಿದರು ಒಡನೆ ರಾಜಪತ್ನಿಯಲ್ಲಿ

ಸಂತಾನವಾಗದಿರುವುದಕ್ಕೆ ಪ್ರತಿಬಂಧಕವಾದ ವೃತ್ತಾಂತವು ಜ್ಞಾನಕ್ಕೆ ಗೋಚರವಾಯಿತು. ತರುವಾಯ ವಸಿಷ್ಠರು ಕಣ್ದೆರೆದು-'ರಾಜೇಂದ್ರ ಹಿಂದೆ ಒಂದು ಸಂದರ್ಭದಲ್ಲಿ ನೀನು ದೇವೇಂದ್ರನನ್ನು ಸೇವಿಸಿ, ನಿನ್ನ ನಗರಾಭಿಮುಖವಾಗಿ ಹೋಗುತ್ತಿರುವಾಗ ಮಾರ್ಗದಲ್ಲಿ ಕಲ್ಪವೃಕ್ಷದ ನೆಳಲಿನಲ್ಲಿ ಶಾಂತತೆಯಿಂದ ವಿಶ್ರಾಮಗೊಂಡಿದ್ದ ಕಾಮಧೇನುವನ್ನು ನೋಡದೆ, ಮುಂದರಿಸಿದೆ. ಋತುಸ್ನಾನ ಮಾಡಿದವಳಾದ ನಿನ್ನ ರಾಣಿಯನ್ನು ಜ್ಞಾಪಿಸಿಕೊಂಡು, ಧರ್ಮಲೋಪವಾಗುವುದೋ ಎಂಬ ಭಯದಿಂದ, ಆತುರನಾಗಿ ಹೋಗುತ್ತಿದ್ದ ನೀನು, ಪ್ರದಕ್ಷಿಣ ನಮಸ್ಕಾರಾದಿ ಮರ್ಯಾದೆಗಳಿಗೆ ಯೋಗ್ಯಪಾತ್ರವಾದ ಕಾಮಧೇನುವನ್ನು ಕಂಡೂ ಮರ್ಯಾದಿಸದೆ ಇದ್ದುದರಿಂದ, ಆ ಧೇನುವು ಕೋಪಿಸಿ-'ಎಲಾ ಕ್ಷತ್ರಿಯಾ ನೀನು, ನನ್ನನ್ನು ಅವಮಾನಗೊಳಿಸಿದೆಯಾದ್ದರಿಂದ ನನ್ನ ಮಗಳಾದ ನಂದಿನೀಧೇನುವನ್ನು ಅರ್ಚಿಸಿ ಅದರ ಪ್ರಸನ್ನತೆಯನ್ನು ಗಳಿಸುವವರೆಗೂ ಸಂತತಿಯು ಉಂಟಾಗದಿರಲಿ' ಎಂದು ಶಾಪಕೊಟ್ಟಿತು. ಆ ಶಾಪವೇ ನಿನಗೆ ಪ್ರತಿಬಂಧಕವಾಗಿದೆ' ಎಂದು ನುಡಿದರು. ರಾಜನು, ತನ್ನಿಂದ ಅಂದು ಅಜ್ಞಾನವಶವಾಗಿ ಜರುಗಿಹೋದ ಆ ಅಚಾತುರ್ಯಕ್ಕಾಗಿ ಅತ್ಯಂತ ಪರಿತಾಪಪಟ್ಟನು. ಮುಂದೆ ಮಾರ್ಗವೇನೆಂಬುದು ತೋರದೆ, ನಿರಾಶಾಸೂಚಕ ದೃಷ್ಟಿಯಿಂದ ಮಹರ್ಷಿಯನ್ನೇ ನೋಡುತ್ತಿರಲು, ಆತನು - 'ರಾಜೋತ್ತಮಾ, ವ್ಯಸನಪಡಬೇಡ. ಪಾತಾಳದಲ್ಲಿ ಪ್ರಚೇತಸನು ಒಂದು ಸತ್ರಯಾಗವನ್ನು ಕೈಕೊಂಡು, ಅದರಲ್ಲಿ ಸಹಾಯಕವಾಗಿರಲೆಂದು, ಆ ಕಾಮಧೇನು ಪುತ್ರಿಯಾದ ನಂದಿನೀಧೇನುವನ್ನು ಕರೆದುಕೊಂಡು ಹೋಗಿದ್ದಾನೆ. ಅದಿನ್ನೇನು ಶೀಘ್ರವಾಗಿಯೇ ಹಿಂದಿರುಗಿ ಬರಬಹುದು. ಅವರೆಗೂ ಇಲ್ಲೇ ವಾಸಿಸಿರು. ಅದು ಬಂದ ತರುವಾಯ, ತ್ರಿಕರಣ ಶುದ್ಧಿಯಿಂದ ಅದರ ಸೇವೆಮಾಡಿ, ಅದನ್ನು ಪ್ರೀತಿಪಡಿಸಿದೆಯೆಂದರೆ, ಕಾಮಧೇನುವಿನ ವಾಕ್ಯದಂತೆ ನಿನ್ನ ಇಷ್ಟಾರ್ಥವು ಈಡೇರುವುದು'' ಎಂದು ನುಡಿದರು.

ಮಹರ್ಷಿ ವಾಕ್ಯದಲ್ಲಿ ವಿಶ್ವಾಸವಿಟ್ಟು, ಆ ದಿಲೀಪರಾಜೇಂದ್ರನು, ಅಲ್ಲೇ ಆಶ್ರಮದಲ್ಲೇ, ಆ ಮುನಿಸನ್ನಿಧಿಯಲ್ಲಿ ಪತ್ನಿಯೊಂದಿಗೆ ಕೆಲಕಾಲ ವಾಸಮಾಡಲು ನಿಶ್ಚಯಿಸಿದನು.

## ಅಧ್ಯಾಯ ೩ 'ಮೃಗರಾಜದರ್ಶನ'

ಅವರು ಅಷ್ಟುಮಟ್ಟಿಗೆ ಮಾತನಾಡುತ್ತಿದ್ದ ಆ ವೇಳೆಯಲ್ಲೇ, ರಾಜನ
ಪುಣ್ಯತರುವು ಫಲಿಸಿತೋ ಎಂಬಂತೆ, ವಸಿಷ್ಠ ಮಹರ್ಷಿಗಳ ಹೋಮಸಾಧ
ನವಾದ ಆ ನಂದಿನೀಧೇನುವು ಆಶ್ರಮದ ಕಡೆಗೆ ಬರುತ್ತಿದ್ದುದು ಕಾಣಿ
ಸಿತು. ಒಡನೆ ಅವರು ಪರಮಾನಂದಗೊಂಡರೆಂದು ಹೇಳಬೇಕಾದುದೇನು?
ದಿಲೀಪರಾಜನು, ಆ ಧೇನುವು ದೃಷ್ಟಿಗೋಚರವಾದೊಡನೆಯೇ ಭಕ್ತಿಯುತ
ನಾಗಿ ಪತ್ನಿಯೊಂದಿಗೆ ಎದ್ದು, ಅದು ಬಳಿಗೆ ಬರುವವರೆಗೂ ಕೈಮುಗಿದು
ಕೊಂಡು, ಅದು ಬರುತ್ತಿದ್ದ ದಿಕ್ಕಿನಲ್ಲೇ ನಟ್ಟ ದೃಷ್ಟಿಯಿಂದ ಕಾದಿದ್ದನು.
ಅದು ತನ್ನ ಗಂಭೀರವಾದ ನಡಿಗೆಯಿಂದ, ಅಡಿಯಿಟ್ಟ ಸ್ಥಳವನ್ನು ಪವಿತ್ರ
ಗೊಳಿಸುತ್ತ ಅವರಿದ್ದ ಬಳಿಗೆ ಬಂದಿತು. ಅದರ ಅಂಗಚ್ಛಾಯೆಯೂ, ಅವ
ಯವ ಸೌಂದರ್ಯವೂ ಆ ರಾಜದಂಪತಿಗಳ ಕಣ್ಮನಗಳನ್ನು ಆನಂದಗೊಳಿ
ಸಿದುವು. ಅದರ ಮೈಯು ಬಿಳಿಯ-ಶುಭ್ರವಾದ ರೋಮಗಳಿಂದ ಬಹು
ಅಂದವೆನ್ನಿಸಿದ್ದಿತು. ನೇರವಾಗಿಯೂ ಮನೋಹರವಾಗಿಯೂ ಬಾಗಿದ್ದ
ಅದರ ಕೊಂಬುಗಳೂ, ಎಷ್ಟು ನೋಡಿದರೂ ಮನಸ್ಸಿಗೆ ತೃಪ್ತಿಯೇ ಉಂ
ಟಾಗದಂತಹ ಆಕರ್ಷಕವಾದ ಅದರ ಮಂಗಳಕರವಾದ ಮುಖವೂ, ಸೌಮ್ಯ
ತೇಜಸ್ಸಿನಿಂದ ಕಂಗೊಳಿಸುತ್ತಿದ್ದ ಅದರ ನೇತ್ರಗಳೂ, ವಿಶಾಲವಾದ ಗಂಗೆ
ದೊಗಲೂ, ಹಿಂದೆ ನೆಲವನ್ನು ಸೋಕುವಷ್ಟು ದೀರ್ಘವಾಗಿದ್ದ ಅದರ ಬಾಲ
ವೂ ಆ ರಾಜದಂಪತಿಗಳಿಗೆ ಆ ಕಾಮಧೇನು ಪುತ್ರಿಯಲ್ಲಿ ವಿಶೇಷ ಭಕ್ತಿ
ವಿಶ್ವಾಸಗಳನ್ನು ಉಂಟುಮಾಡಿದುವು. ದರ್ಶನಮಾತ್ರದಿಂದಲೇ ಸಕಲ
ಪಾಪಗಳನ್ನೂ ಕ್ಷಯಗೊಳಿಸಿ, ಸ್ಪರ್ಶಮಾತ್ರದಿಂದಲೇ ಸಕಲ ತೀರ್ಥಸ್ನಾ
ನಾದಿಗಳಿಂದ ಉಂಟಾಗುವಂತಹ ಶುದ್ಧಿಯನ್ನೂ ಪ್ರಸಾದಿಸಲು ಶಕ್ತವಾದ
ಆ ಪುಣ್ಯಮೂರ್ತಿಯಾದ ನಂದಿನಿಯನ್ನು ರಾಜನು ಎಷ್ಟು ನೋಡಿದರೂ
ತೃಪ್ತಿಗೊಳ್ಳದೆ, ಆನಂದಾಶ್ಚರ್ಯ ಮಗ್ನನಾಗಿ ಅಲ್ಲಿ ನಿಂತಿದ್ದನು.

ಆಗ ವಸಿಷ್ಠಮಹರ್ಷಿಗಳು -'ರಾಜೇಂದ್ರ ನಿನ್ನ ಪುಣ್ಯತರುವು ಶೀಘ್ರ
ದಲ್ಲಿಯೇ ಫಲಿಸಲಿರುವುದೆಂಬುದನ್ನು ಸೂಚಿಸಲಿಕ್ಕಾಗಿಯೋ ಎಂಬಂತೆ,
ನಂದಿನೀ ಧೇನುವು ಶೀಘ್ರವಾಗಿಯೇ ನಮ್ಮ ಬಳಿಗೆ ಬಂದಿದೆ. ನೀನು ಈ

ಆಶ್ರಮದಲ್ಲಿ ಪತ್ನೀ ಸಮೇತನಾಗಿ ಕಂದಮೂಲಫಲಾದಿಗಳಿಂದ ದೇಹಧಾರಣವಮಾಡಿಕೊಂಡು, ಪ್ರತಿದಿನವೂ ಇದರ ಮೈತೊಳೆಯುವಿಕೆ, ಮೈಯುಜ್ಜುವಿಕೆ, ಕಾಡುನೊಣ ಮುಂತಾದುವುಗಳಿಂದ ಬಾಧೆಯಾಗದಂತೆ ನೋಡಿಕೊಂಡು ತುರಿಸುವಿಕೆ ಮುಂತಾದುವುಗಳಿಂದ ಇದರ ಸೇವೆಯನ್ನು ಮಾಡು. ಇದು ಹುಲ್ಲುಮೇಯುವುದಕ್ಕಾಗಿ ಹೊರಕ್ಕೆ ಪ್ರಯಾಣಮಾಡಿದಲ್ಲಿ ಇದರೊಂದಿಗೆ ನೀನೂ ಹೊರಟು, ಅದು ನಿಂತಲ್ಲಿ ನೀನೂ ನಿಂತು, ಅದು ಮಲಗಿಕೊಂಡಲ್ಲಿ ನೀನೂ ತಂಗಿ, ಅದು ನೀರು ಕುಡಿದಲ್ಲಿ ನೀನೂ ಕುಡಿದು ಹೀಗೆ ಸರ್ವವಿಧದಿಂದಲೂ ಇದನ್ನು ಅನುಸರಿಸಿಕೊಂಡು ನಡೆ. ಮುಖ್ಯವೇನು, ಪ್ರತಿ ಪ್ರಾತಃಕಾಲವೂ ಅದು ಎದ್ದೊಡನೆಯೇ ಅದರ ಸಕಲ ವಿಧವಾದ ಸೇವೆಯನ್ನೂ ಶ್ರದ್ಧಾಪೂರ್ವಕ ಮಾಡುತ್ತ, ಅದನ್ನು ಸಮೀಪದ ಕಾವಲಿನಲ್ಲೂ ಕಾಡಿನಲ್ಲೂ ಚಿಗುರು ಹುಲ್ಲನ್ನು ಮೇಯಲಿತ್ತು, ಸಾಯಂಕಾಲದವರೆಗೂ ಅದಕ್ಕೆ ಯಾವ ದುಷ್ಟಮೃಗದಿಂದಲೂ ಏನೂ ಬಾಧೆಯುಂಟಾಗದಂತೆ ಕಾದುಕೊಂಡಿದ್ದು ಸಾಯಂಕಾಲದಲ್ಲಿ, ಅದು ಮನೆಗೆ ಹಿಂದಿರುಗಿತೆಂದರೆ ಅದನ್ನು ಹಿಂಬಾಲಿಸಿ ಆಶ್ರಮಕ್ಕೆ ಬಂದುಸೇರು. ಹೀಗೆ ನಿಮ್ಮ ವಿಷಯದಲ್ಲಿ ಅದರ ಅನುಗ್ರಹವು ಉಂಟಾಗುವವರೆಗೂ, ದಂಪತಿಗಳಿಬ್ಬರೂ ಅದರ ಸೇವೆಯಲ್ಲಿ ತತ್ಪರರಾಗಿರಿ. ರಾಜೇಂದ್ರಾ, ನಿನ್ನ ಇಷ್ಟಾರ್ಥವು ಸಿದ್ಧಿಯಾಗಲಿ, ನೀವು ಶ್ರೇಯೋವಂತರಾಗಿರಿ' ಎಂದು ಆಶೀರ್ವದಿಸಿದರು.

ಗುರುವರ್ಯರು ಹೇಳುತ್ತಿದ್ದ ಮಾತುಗಳನ್ನು ಅಪ್ಪುಹೊತ್ತು ತಲೆಬಾಗಿ ವಿನಯದಿಂದ ಕೇಳಿಕೊಂಡಿದ್ದ ಆ ದಿಲೀಪರಾಜನು—ಮಹದಾಜ್ಞೆ ಎಂದು ನುಡಿದು, ಅವರು ಹೇಳಿದ ಆ ಆಜ್ಞೆಗಳನ್ನೆಲ್ಲ ತನಗೆ ಶ್ರೇಯಸ್ಕರವಾದುವೆಂದೇ ಭಕ್ತಿಪೂರ್ವಕವಾಗಿ ಸ್ವೀಕರಿಸಿದನು. ಆ ವೇಳೆಗೆ ರಾತ್ರಿಯಾದುದರಿಂದ, ಅಲ್ಲಿ ವಸಿಷ್ಠರ ಆಜ್ಞೆಯಿಂದ ಮುನಿಶಿಷ್ಯರು ತಂದಿತ್ತ ಫಲಮೂಲಾದಿಗಳನ್ನು ಗಂಡಹೆಂಡಿರಿಬ್ಬರೂ ಆಹಾರಮಾಡಿಕೊಂಡರು. ಮಹಾರಾಜಾಧಿರಾಜನೂ, ಆಗರ್ಭ ಶ್ರೀಮಂತನೂ ಆದ ಆ ರಾಜಚಂದ್ರನು ಮಹರ್ಷಿಗಳು ಪ್ರೀತಿಯಿಂದ ತೋರಿಸಿದ ಪರ್ಣಶಾಲೆಯಲ್ಲಿ, ಮುನಿಪುತ್ರರು ಕೊಟ್ಟ ದರ್ಭಾಸನ (ಚಾಪೆ) ಗಳ ಮೇಲೆ ತನ್ನ ಪತ್ನಿಯೊಂದಿಗೆ ಮಲಗಿ, ಪರಮಸಂತುಷ್ಟಾಂತರಂಗನಾಗಿ ನಿದ್ರಿಸಿದನು. ರಾತ್ರಿಕಳೆದು

ಅರುಣೋದಯಕಾಲವು ಪ್ರಾಪ್ತಿಸುತ್ತಿರಲು, ದಿಲೀಪರಾಜನೂ ಸುದಕ್ಷಿಣಾ ದೇವಿಯೂ, ಮುನಿಪುತ್ರರು ಶ್ರಾವ್ಯವಾಗಿ ಪಠಿಸುತ್ತಿದ್ದ ಪವಿತ್ರವಾದ ವೇದಾಧ್ಯಯನದಿಂದ ಎಚ್ಚರಗೊಂಡರು.

ಪ್ರಾತಃಕಾಲವಾಗುತ್ತಿರಲು, ದಿಲೀಪರಾಜೇಂದ್ರನು ತನ್ನ ಸ್ನಾನಾಹ್ನಿಕಗಳನ್ನು ತೀರಿಸಿಕೊಂಡು ಮಹರ್ಷಿಗಳ ಆಜ್ಞಾನುಸಾರ ಗೋಸೇವೆಗೆ ಸಿದ್ಧನಾಗಿ ಅದರ ಬಳಿಗೆ ಬಂದನು. ಆ ವೇಳೆಗೆ ಸರಿಯಾಗಿ ಮಹಾರಾಣಿ ಸುದಕ್ಷಿಣಾದೇವಿಯೂ ಸಹ ಮೈದೊಳೆದು, ಗುರುದೇವತಾರಾಧನೆಗಳನ್ನು ಮಾಡಿ, ನಂದಿನಿಯ ಬಳಿಗೆ ಬಂದು ಆ ಧೇನುವನ್ನು ಹರಿದ್ರಾಕುಂಕುಮ ಗಂಧಮಾಲ್ಯಾದಿಗಳಿಂದ ಪೂಜಿಸಿದಳು. ರಾಜನು, ಅಭಿಷೇಕಾದಿಗಳಿಗಾಗಿ ಹಾಲನ್ನು ಕರೆನುಕೊಂಡ ತರುವಾಯ ಅದರ ಸ್ತನ್ಯಪಾನಮಾಡಿದ ಎಳೆಗರುವನ್ನು ಮನೆಯಲ್ಲೇ ಕಟ್ಟಿ ನಿಲ್ಲಿಸಿ, ಪ್ರಭಾತವೇಳೆಗೆ ಸರಿಯಾಗಿ ಅದನ್ನು ಹೊರಕ್ಕೆ ಬಿಟ್ಟುಕೊಂಡು ನಡೆದನು.

ದಿಲೀಪರಾಜನು ಗೋವನ್ನು ಬಿಟ್ಟುಕೊಂಡು ಮುಂದೆ ನಡೆಯಲು ಶ್ರುತಿಯನ್ನು ಅನುಸರಿಸಿ ನಡೆವ ಸ್ಮೃತಿಯೋ ಎಂಬಂತೆ, ಸತೀಮಣಿಯೂ ಯಶೋವಂತಳೂ ಆದ ಆ ಸುದಕ್ಷಿಣಾದೇವಿಯೂ ಆ ಸುರಭಿಪುತ್ರಿಯಾದ ನಂದಿನಿಯನ್ನು ಅನುಸರಿಸಿ ಹೊರಟಳು. ಆಗ ದಯಾಳುವಾದ ಆ ರಾಜೇಂದ್ರನು, ಸುಕುಮಾರಿಯಾದ ತನ್ನಾ ಪತ್ನಿಯನ್ನು ಆಶ್ರಮದಲ್ಲೇ ಇರಹೇಳಿ, ರಾಜಾಧಿರಾಜನಾದ ತನ್ನ ಅಂಗರಕ್ಷಣೆಗೆಂದು ಬೆಂಬತ್ತಿಬಂದ ರಾಜದೂತರನ್ನೂ ಹಿಂದೆ ನಿಲ್ಲಿಸಿ, ವ್ರತಸ್ಥನಾದ ತಾನು ಮಾತ್ರ ನಂದಿನಿಯನ್ನು ಅನುಸರಿಸಿ ಕಾಡಿಗೆ ಪ್ರಯಾಣಮಾಡಿದನು. ಅದಕ್ಕೆ ಮೃದುವಾದ ಎಳೆಯ ಚಿಗುರು ಹುಲ್ಲನ್ನೇ ತಿನ್ನಿಸುತ್ತಾ, ಅದರ ಮೈಮೇಲೆರಗುವ ನೊಣ ಮಿಡತೆ ಮುಂತಾದ ಕ್ಷುದ್ರ ಕೀಟಗಳನ್ನು ತೊಲಗಿಸಿ, ಅದಕ್ಕೆ ಮನಸ್ಸು ಬಂದೆಡೆಗೆ ಹೋಗಲಿತ್ತು, ರಾಜನು ಪರಮಪ್ರೀತಿಯಿಂದ ಅದನ್ನು ಅನುಸರಿಸಿ ಸಂಚರಿಸಿದನು. ಅದು ನಡೆದರೆ ನಡೆದು, ನಿಂತರೆ ತಾನೂ ನಿಂತು, ಅದು ವಿಶ್ರಾಂತಿಗಾಗಿ ಮಲಗಿದಲ್ಲಿ ತಾನೂ ಕುಳಿತು, ಅದು ನೀರು ಕುಡಿಯಲು ತಾನೂ ಜಲಪ್ರಾಶನಮಾಡಿ ಮಹರ್ಷಿಗಳ ಆಜ್ಞಾನುಸಾರ ಸಕಲ ವಿಷಯಗಳಲ್ಲೂ ಅದರ ದೇಹಚ್ಛಾಯೆಯೋ ಎಂಬಂತೆ ನಡೆದನು.-ತಾನು ಮದವೇರಿದ್ದರೂ ಅದನ್ನು

ಹೊರಕ್ಕೆ ತೋರಗೊಡದೆ ಇರುವ ಇಂದ್ರನ ಐರಾವತದಂತೆ ಬಾಹ್ಯದಲ್ಲಿ ರಾಜ ಚಿನ್ಹೆಗಳಾವುವೂ ಇಲ್ಲದಿದ್ದರೂ ದಿಲೀಪನು ರಾಜ್ಯಲಕ್ಷ್ಮಿಯನ್ನು ಧರಿಸಿ ರಾಜತೇಜದಿಂದಲೇ ಪ್ರಕಾಶಿಸಿದ್ದನು. ರಾಜನು, ದುಷ್ಟ ಕಾಡುಮೃಗ ಗಳಿಂದ ನಂದಿನೀಧೇನುವಿಗೆ ಯಾವ ಬಾಧೆಯೂ ಉಂಟಾಗದಂತಿರಲಿಕ್ಕಾಗಿ ಧನುರ್ಬಾಣಧಾರಿಯಾಗಿ ಅರಣ್ಯದಲ್ಲಿ ಮುಳ್ಳು ಕಲ್ಲುಗಳೆನ್ನದೆ ಸಂಚರಿಸು ತ್ತಿರಲು, ಪಕ್ಷಿಸಂಕುಲವು ಬೆದರಿ, ಥಿಗ್ಗನೆ ಮೇಲಕ್ಕೆದ್ದು ಆಗಾಗ ಮಾಡು ತ್ತಿದ್ದ ಕಲಕಲನಿನಾದವು, ಆತನಿಗೆ ಜಯಜಯಕಾರವೋ ಎಂಬಂತೆ ಇದ್ದಿತು.

ಆ ಧೇನುವನ್ನು ಹಿಂಸೆಗೊಳಿಸುವ ದುಷ್ಟಮೃಗಗಳನ್ನು ಶಿಕ್ಷಿಸಲೋ ಸುಗಮಾತ್ರವೇ ರಾಜನು ಧನುರ್ಬಾಣಗಳನ್ನು ಧರಿಸಿದ್ದಾನೆಯಲ್ಲದೆ, ಆತನ ಆ ಕ್ರೂರ ಆಯುಧಗಳಿಂದ ತಮಗೆ ಏನೂ ತೊಂದರೆಯಿಲ್ಲವೆಂದು ಅಂತ ರಾತ್ಮನು ಪ್ರೇರಿಸಲಾಗಿ, ವಿಸ್ತಾರವಾಗಿ ತೆರೆದ ಕಣ್ಣುಗಳಿಂದ ತನ್ನನ್ನೇ ನೋಡುತ್ತಿದ್ದ ಹರಿಣಮೃಗಗಳನ್ನು ರಾಜನು ಕಣ್ದಣಿಯೆ ನೋಡಿ ಸಂತೋ ಷಪಟ್ಟನು. ಬಿದಿರುಮೆಳೆಗಳಲ್ಲಿ ಹಾಯ್ದು ಬೀಸುವ ಗಾಳಿಯಿಂದ ಉಂಟಾ ಗುತ್ತಿದ್ದ ಒಂದು ಬಗೆಯ ಶಬ್ದವು ವೇಣುಗಾನದಂತೆ ಮಧುರವಾಗಿ ಕೇಳ ಬರುತ್ತಿರಲು, ಆತನು ಸಂತೃಪ್ತಿಯಿಂದ ಆ ವನದಲ್ಲಿ ಸಂಚರಿಸಿದನು. ಸದಾ ಚಾರಸಂಪನ್ನನೂ, ರಾಜನಾದುದರಿಂದ ಧರ್ಮರಕ್ಷಕನೂ ಆದ ಆ ರಾಜೇಂದ್ರನು, ಆ ವನದಲ್ಲಿ ಸಂಚರಿಸತೊಡಗಿದಾಗಿನಿಂದ, ಅಲ್ಲಿ ದುಷ್ಟಮೃ ಗಾದಿಗಳ ಬಾಧೆಯು ನೀಗಿ, ಅರಣ್ಯದಲ್ಲೆಲ್ಲೂ ಆರ್ತನಾದವು ಇಲ್ಲದಂತಾ ಯಿತು. ವೃಕ್ಷಗಳು ಪುಷ್ಪಫಲಗಳಿಂದ ನೇತ್ರಾನಂದಕರವಾದುವು. ಸ್ವಭಾ ವಶಾಂತವಾದ ಆ ಅರಣ್ಯವು ಅತಿಶಯ ಶಾಂತತೆಯಿಂದ ಪ್ರಕಾಶಿಸಿತು. ನಂದಿನಿಯು ಇಷ್ಟವಾದಾಗ ಸೊಂಪಾಗಿ ವನದಲ್ಲಿ ಬೆಳೆದ ಮೃದುತೃಣ ಗಳನ್ನು ಮೆಯ್ದು, ತಿಳಿಗೊಳದಲ್ಲಿನ ನೀರನ್ನು ಕುಡಿದು, ತಂಪಾದ ವೃಕ್ಷದಡಿ ಯಲ್ಲಿ ಮಲಗಿ ವಿಶ್ರಾಂತಿಗೊಂಡು, ಸಾಯಂಕಾಲವಾಗುತ್ತಿರಲು, ಆಶ್ರಮದ ದಲ್ಲಿದ್ದ ತನ್ನ ಎಳೆಯ ಕರುವನ್ನು ನೆನೆಸಿಕೊಂಡು ಅದನ್ನು ಕಾಣಲಿಚ್ಛಿಸಿ ಆಶ್ರಮದ ಕಡೆಗೆ ಹಿಂದಿರುಗಿ ಹೊರಟಿತು. ನೆಳಲಿನಂತೆ ಪ್ರಾತಃಕಾಲದಿಂ ದಲೂ ಅದನ್ನೇ ಅನುಸರಿಸಿ ಸಂಚರಿಸುತ್ತಿದ್ದ ದಿಲೀಪರಾಜೇಂದ್ರನು, ಆ

ಕಾಮಧೇನು ಪುತ್ರಿಯ ಪಾದ ಚಿನ್ಹೆಗಳನ್ನೇ ದೃಷ್ಟಿಯಲ್ಲಿಟ್ಟು ಬರುತ್ತಿದ್ದು ದನ್ನು ಆಶ್ರಮದ್ವಾರದಲ್ಲಿದ್ದ ಸುದಕ್ಷಿಣಾದೇವಿಯು ರೆಪ್ಪೆಯಿಕ್ಕದಂತೆ ದಿಟ್ಟಿ ಸಿನೋಡಿ ತೃಪ್ತಿಗೊಂಡಳು.

ಪವಿತ್ರವಾದ ಆ ಗೋವು ಆಶ್ರಮ ಸಮೀಪಕ್ಕೆ ಬರಲು, ಸುದಕ್ಷಿಣಾ ದೇವಿಯು ವಿಶೇಷ ಭಕ್ತಿಯುತಳಾಗಿ ಅದಕ್ಕೆ ಪ್ರದಕ್ಷಿಣೆಯಾಗಿ ತಿರುಗಿ ಬಂದು, ತನ್ನ ಇಷ್ಟಾರ್ಥಸಿದ್ಧಿಗೆ ಮಹಾದ್ವಾರವೋ ಎಂಬಂತೆ ಶೋಭಿಸು ತ್ತಿದ್ದ ಅದರ ಶೃಂಗಗಳ ಮಧ್ಯಭಾಗದ ಪ್ರದೇಶವನ್ನು ಹರಿದ್ರಾ ಕುಂಕುಮ ಅಕ್ಷತೆಗಳಿಂದ ಪೂಜಿಸಿದಳು. ನಂದಿನೀ ಧೇನುವಾದರೋ ತನ್ನ ಚಿಕ್ಕ ಕರು ವನ್ನು ನೋಡುವ ಕುತೂಹಲದಿಂದ ಆಕೆಯು ಮಾಡುತ್ತಿದ್ದ ಪೂಜೆಯನ್ನು ಸಮಾಧಾನದಿಂದ ಕೈಗೊಳ್ಳದೆ, ತನ್ನ ಕರುವು ಇದ್ದ ಸ್ಥಳಕ್ಕಾಗಿ ನುಗ್ಗಿ ಹೊರಡಲು ಆ ರಾಜದಂಪತಿಗಳೂ ಅದರೊಂದಿಗೇ ನಡೆದು, ಅದು ಪ್ರೀತಿ ಯುಕ್ತವಾಗಿರಲು ತನ್ನ ಚಿಕ್ಕ ಕರುವನ್ನು ನಾಲಿಗೆಯಿಂದ ನೆಕ್ಕಿ ಆದರಿಸುತ್ತಿ ರುವಾಗ ರಾಜರಾಣಿಯರೂ ಅದರ ಮೈಕೈಕಾಲುಗಳನ್ನು, ತುರಿಸಿ ಉಪಚರಿ ಸುತ್ತಿದ್ದರು. ದಿಲೀಪಮಹಾರಾಜನು ಆಶ್ರಮದೊಳಕ್ಕೆ ನಡೆದು, ಮಹರ್ಷಿ ಗಳಿಗೂ ಮುನಿಪತ್ನಿಗೂ ದಂಡವತ್ಪ್ರಣಾಮ ಮಾಡಿ, ಸಂಧ್ಯಾದಿವಿಧಿಗಳನ್ನು ಮುಗಿಸಿಕೊಂಡು ಪುನಃ ಧೇನುವಿನ ಸೇವೆಗೆ ಸಿದ್ಧನಾದನು.

ಆ ವೇಳೆಗೆ ಹಸುವೂ ಸಹ ಹಾಲುಕರೆದು, ಕರುವಿಗೂ ಹಾಲು ಕುಡಿ ಯಲಿತ್ತು ಸ್ವಸ್ಥಚಿತ್ತದಿಂದ ಮಲಗಿದ್ದಿತು. ರಾಜನು ತನ್ನ ಪತ್ನಿಯೊಂ ದಿಗೆ ಅದರ ಸಮೀಪವನ್ನು ಸೇರಿ, ರಾತ್ರಿ ಇಷ್ಟವಾದಾಗ ತಿನ್ನಲಿಕ್ಕಾಗಿ ಮೇವನ್ನು ಹಾಕಿ, ರಾಣಿಯೊಂದಿಗೆ ಅದರ ಬಳಿಯಲ್ಲೇ ರಕ್ಷಣೆಗಾಗಿ ಕುಳಿ ತಿದ್ದನು. ಅದು ನಿದ್ರೆಮಾಡಲು, ಪತ್ನಿಯೊಂದಿಗೆ ತಾನೂ ನಿದ್ರೆಮಾಡಿದನು. ಹೀಗೆ ಗುರುಗಳಾದ ವಸಿಷ್ಠರ ಆಜ್ಞೆಗೆ ಲೇಶಮಾತ್ರವೂ ವ್ಯತ್ಯಾಸವುಂಟಾಗ ದಂತೆ ಇಪ್ಪತ್ತೊಂದು ದಿವಸಗಳವರೆಗೆ ರಾಜರಾಣಿಯರು ಅನನ್ಯ ಭಾವ ದಿಂದ ಆ ನಂದಿನೀ ಧೇನುವನ್ನು ಸೇವಿಸಿದರು. ಮಹಾಕೀರ್ತಿಸಂಪನ್ನನೂ ಕ್ಷತ್ರಿಯೋತ್ತಮನೂ ಆದ ಆ ರಾಜಚಂದ್ರನು, ಸುಕುಮಾರಿಯಾದ ಮಹಾ ರಾಣಿಯೊಡಗೂಡಿ ಸತ್ಸಂತಾನಾಪೇಕ್ಷೆಯಿಂದ ಹಾಗೆ ಇಪ್ಪತ್ತೊಂದು ದಿನಗ ಳವರೆಗೆ ತ್ರಿಕರಣಶುದ್ಧಿಯಿಂದ ಮಾಡಿದ ಸೇವೆಯು, ನಂದಿನೀ ಧೇನುವಿಗೆ

ಪ್ರೀತಿಕರವಾಯಿತು. ಆಗಲಾ ಧೇನುವು ರಾಜನ ಮನಸ್ಸಿನ ದಾರ್ಢ್ಯವನ್ನು ಪರೀಕ್ಷಿಸಬೇಕೆಂದು ಇಚ್ಛೈಗೊಂಡಿತು.

ಇಪ್ಪತ್ತೆರಡನೆಯದಿನ ಎಂದಿನಂತೆ ಪ್ರಾತಃಕಾಲ ವನಕ್ಕಾಗಿ ಹೊರಡಲು, ನಂದಿನಿಯು ಆ ದಿನ ನಿತ್ಯವೂ ಹೋಗುತ್ತಿದ್ದ ಮಾರ್ಗವನ್ನು ಬಿಟ್ಟು, ಹಿಮಗಿರಿ ಕಂದರದಲ್ಲಿ, ಗಂಗಾ ಪ್ರಪಾತದಿಂದ ಶೋಭಿಸುತ್ತಿದ್ದ ಮನೋಹರವೂ ಭೀಕರವೂ ಆದ ಒಂದು ದುರ್ಗಮವನವನ್ನು ಸೇರಿತು. ತನ್ನ ರಕ್ಷಣೆಗೊಳಪಟ್ಟ ಈ ಗೋವನ್ನು ಯಾವ ಕ್ರೂರಮೃಗವಾದರೂ ಸಮೀಪಿಸಿ ಬದುಕಬಹುದೇ ಎಂಬ ಯೋಚನೆಯಿಂದ ನಿಶ್ಚಿಂತನಾಗಿದ್ದ ದಿಲೀಪರಾಜೇಂದ್ರನು, ಆ ಶೈಲದ, ಕಂದರದ ಮತ್ತು ವಿವಿಧ ವರ್ಣರಂಜಿತ ವೃಕ್ಷಗಳ-ಸೌಂದರ್ಯಾತಿಶಯವನ್ನು ನೋಡುವ ಇಚ್ಛೆಯಿಂದ, ಆ ಸೊಬಗಿಗೆ ಮರುಳಾಗಿ ಆ ಕಡೆ ಗಮನವಾಗಿದ್ದನು. ಹಾಗೆ ಕ್ಷಣಕಾಲ ಮಾತ್ರ, ಅನ್ಯತ್ರ ದೃಷ್ಟಿಯಿಟ್ಟು ರಾಜನು ಅನ್ಯಮನಸ್ಕನಾಗಿರುತ್ತಿರಲು ಆ ಕ್ಷಣಕಾಲದಲ್ಲೇ ಎಲ್ಲಿಂದಲೋ ಬಂದ ಒಂದು ಸಿಂಹವು ವೇಗದಿಂದ ನಂದಿನಿಯ ಕಡೆಗೆ ಹಾರಿ, ಅದನ್ನು ಹಿಡಿದುಕೊಂಡಿತು. ಒಡನೆ, ವಿಶೇಷ ಭಯಗೊಂಡ ಆ ಧೇನುವು, ಆ ಗಿರಿಯ ಗುಹೆಗಳೆಲ್ಲವೂ ಪ್ರತಿಧ್ವನಿಕೊಡುವಂತೆ ದೀರ್ಘವಾದ ಆಕ್ರಂದನ ಧ್ವನಿಯಿಂದ ಅರಚಿಕೊಂಡಿತು. ತನ್ನ ಇಷ್ಟದೇವತೆಯೋ ಎಂಬಂತೆ ಆರಾಧಿಸುತ್ತಿದ್ದ ಆ ಗೋವು ಪ್ರಾಣಾಪತ್ತಿಗೆ ಒಳಗಾದಂತೆ ವಿಕಾರಸ್ವರದಿಂದ ಕೂಗಿಕೊಂಡ ಆ ಧ್ವನಿಯು ಗಿರಿಕಂದರಗಳ ಪ್ರಕೃತಿ ಸೌಂದರ್ಯಮಗ್ನನಾಗಿದ್ದ ಆ ರಾಜನ ಕಿವಿಗೆ ಸಿಡಿಲಧ್ವನಿಯಂತೆ ಕೇಳಿಸಿತು. ಒಡನೆ ಆ ಧ್ವನಿಯು ಕಿವಿಯಲ್ಲಿ ಕರಗಿದ ಸೀಸವನ್ನು ಸುರಿದಂತೆ ಕೇಳಿಸಲು, ದಿಲೀಪನು ಗಾಬರಿಗೊಂಡು ತಿರುಗಿನೋಡಲು, ಸೌಮ್ಯಮೂರ್ತಿಯಾದ ಆ ಹಸುವಿನಮೇಲೆ ಎರಗಿದ್ದ ಭಯಂಕರವಾದ ಕೋರೆದಾಡೆಯ ಮೃಗರಾಜನು ದೃಷ್ಟಿಗೆ ಗೋಚರವಾಯಿತು. ಒಡನೆ ಆ ದುಷ್ಟಮೃಗವನ್ನು ಸಂಹರಿಸಲಿಚ್ಛಿಸಿ, ಕೈಯಲ್ಲೇ ಸಿದ್ಧವಾಗಿದ್ದ ಧನುಸ್ಸನ್ನು ಹಿಡಿದು, ಬಲಗೈಯಿಂದ ಹರಿತವಾದ ಬಾಣವನ್ನು ಅದಕ್ಕೆ ಹೂಡಿ ಆ ಸಿಂಹಕ್ಕೆ ಗುರಿಯಿಟ್ಟು ಆಕರ್ಣಾಂತವಾಗಿ ಸೆಳೆದನು. ಧನುರ್ಧರರಲ್ಲಿ ಅಗ್ರೇಸರನಾದ ಆತನ ಕೈಯಿಂದ ಬಾಣವು ಬಿಡಲ್ಪಟ್ಟಿದ್ದರೆ, ಆ ಸಿಂಹವು ನಿಶ್ಚಯವಾಗಿಯೂ ಮೃತ್ಯುವಶ

ವಾಗತಕ್ಕುದೇ! ಆದರೆ ಅಷ್ಟರಲ್ಲಿ ಆತನ ಕೈಯು ಇದ್ದುದಿದ್ದಂತೆಯೇ ಸ್ತಂಭಿಸಿಬಿಟ್ಟಿತು. ರಾಜನು ನಿಂತಂತೆಯೇ ಇದ್ದಾನೆ. ಆತನ ಎಡದ ಕೈಯಲ್ಲಿ ಬಿಲ್ಲು ಹಾಗೆಯೇ ಇದೆ. ಬಲದ ಕೈಯಿಂದ ಆಕರ್ಣಾಂತವಾಗಿ ಸೆಳೆದ ಬಾಣವೂ ಹಾಗೆಯೇ ಇದೆ. ರಾಜನು ಚಿತ್ರಪ್ರತಿಮೆಯಂತೆ ನಿಂತು ಬಿಟ್ಟನು.

---

## ಅಧ್ಯಾಯ ೪ "ವರದಾನ"

ರಾಜನಿಗೆ ಪರಮಾಶ್ಚರ್ಯವಾಯಿತು. ಮಣಿಮಂತ್ರ ಔಷಧಾದಿಗಳಿಂದ ತಡೆಗಟ್ಟಲ್ಪಟ್ಟ ನಾಗಸರ್ಪದಂತೆ ರೋಷಗೊಂಡು, ಏನು ಮಾಡಬೇಕೆಂದು ತೋರದೆ ಆತನು ಕ್ಷಣಕಾಲ ಆ ಸಿಂಹವನ್ನು ಬಿರುನೋಟದಿಂದ ನೋಡತೊಡಗಿದನು. ಹೀಗೆ ರಾಜನು ತನ್ನ ಶಕ್ತಿಯು ಕುಂಠಿತವಾದುದಕ್ಕಾಗಿ ಆಶ್ಚರ್ಯಪಟ್ಟು ನೋಡುತ್ತಿರಲು, ಆತನಿಗೆ ಮತ್ತೂ ಹೆಚ್ಚು ಆಶ್ಚರ್ಯವನ್ನುಂಟುಮಾಡುವಂತೆ, ನಂದಿನೀ ಹಸುವನ್ನು ಹಿಡಿದಿದ್ದ ಆ ಸಿಂಹವು ಮನುಷ್ಯವಾಕ್ಯದಿಂದ ಮಾತನಾಡತೊಡಗಿತು.

'ಸಾಕು ಸಾಕು, ಭೂಪಾಲ- ನನ್ನಮೇಲೆ ಬಾಣಪ್ರಯೋಗಮಾಡಬೇಕೆಂದು ಏಕೆ ಈ ಸಾಹಸ! ಹಾಗೆ ನೀನೊಂದುವೇಳೆ ಪ್ರಯೋಗಿಸಿದರೂ ಅದು ವ್ಯರ್ಥವಾಗುವುದು. ಮಾರುತನು ರೋಷಗೊಂಡರೆ ಒಂದು ವೇಳೆ ಮರವನ್ನು ಮೂಲೋತ್ಪಾಟನ ಮಾಡಬಹುದಲ್ಲದೆ ಗಿರಿಶಿಖರವನ್ನು ಉರುಳಿಸಲು ಸಾಧ್ಯವಾಗಬಲ್ಲುದೆ? ನಾನು ಪರಶಿವನ ದ್ವಾರಪಾಲಕನು. ನನಗೆ ಆತನ ಅನುಗ್ರಹವುಂಟು. ಇಗೋ ನೋಡು, ಇಲ್ಲಿರುವ ಈ ದೇವದಾರು ವೃಕ್ಷವನ್ನು ಪಾರ್ವತೀದೇವಿಯು ತನ್ನ ಗರ್ಭಸಂಭೂತನಾದ ಪುತ್ರನಂತೆ ನೋಡಿಕೊಂಡು ಪ್ರೀತಿಸುತ್ತಿರುವಳು ಒಂದು ಸಂದರ್ಭದಲ್ಲಿ, ಒಂದಾನೊಂದು ಕಾಡಾನೆಯು ಬಂದು, ಈ ಮರಕ್ಕೆ ತನ್ನ ಮೈಯನ್ನಿಟ್ಟು ನವೆತೀರಿಸಿಕೊಳ್ಳಲು ಉಜ್ಜಿಕೊಂಡಿತು. ಆಗ ಇದರ ಮೇಲಿನ ತೊಗಟೆಯು ಕಿತ್ತುಹೋಗಿ ಗಾಯವಾದಂತಾಯಿತು. ಅದನ್ನು ಕಂಡು ಗೌರೀದೇವಿಯು

ತನ್ನ ಮಗನಾದ ಷಣ್ಮುಖಸ್ವಾಮಿಯು ಅಸುರವೀರರ ಬಾಣಗಳಿಂದ ಗಾಯಗೊಂಡಗಿಂತಲೂ ಹೆಚ್ಚಾಗಿ ಮರುಗಿ ಶೋಕಿಸಿದಳು. ಅದನ್ನು ಕಂಡು ಪರಮೇಶ್ವರನು, ನನಗೆ ಸಿಂಹತ್ವವನ್ನಿತ್ತು, ಇಲ್ಲಿಗೆ ಬರುವ ಆನೆ ಮುಂತಾದ ಪ್ರಾಣಿಗಳಿಂದ ಈ ದೇವದಾರುವಿಗೆ ಅಪಾಯವಿಲ್ಲದಂತೆ ರಕ್ಷಿಸಬೇಕೆಂದೂ, ಈ ಪ್ರಾಂತಕ್ಕೆ ತಾವಾಗಿ ಬಂದ ಪ್ರಾಣಿಗಳನ್ನು ಆಹಾರಮಾಡಿಕೊಳ್ಳಬೇಕೆಂದೂ ಆಜ್ಞೆಮಾಡಿದನು. ರಾಜೇಂದ್ರಾ, ಈ ದಿನ ಈಶ್ವರೇಚ್ಛೆಯಿಂದಲೋ ಎಂಬಂತೆ ಹಸಿದ ನನ್ನ ಬಳಿಗೆ ಈ ಹಸುವು ಬಂದು ದೊರೆತಿದೆ. ಹೀಗೆ ಅಕಸ್ಮಾತ್ತಾಗಿ ದೊರೆತಿರುವ ಈ ರಕ್ತ ಭೋಜನಮಾಡಿ ನಾನು ತೃಪ್ತನಾಗುತ್ತೇನೆ. ನೀನು ಇದನ್ನು ಬಿಟ್ಟು, ಲಜ್ಜೆಪಡದೆ ಶಿಷ್ಯಭಕ್ತಿಯಿಂದ ಗುರುಗಳನ್ನು ಸಂದರ್ಶಿಸಿ ಸೇವಿಸು. ಲೋಕದಲ್ಲಿ ಶಸ್ತ್ರಗಳಿಂದ ಯಾವುದನ್ನು ರಕ್ಷಿಸಲು ಅಶಕ್ಯವೋ, ಅಂಥಾದನ್ನು ರಕ್ಷಿಸದಿರುವುದಕ್ಕಾಗಿ ಶಸ್ತ್ರಧಾರಿಗಳಿಗೆ ಅಪಕೀರ್ತಿಯುಂಟೆ, ವೃಥಾ ಏಕೆ ಶ್ರಮಪಡುವೆ?' ಎಂದು ನುಡಿಯಿತು.

ಮೃಗರಾಜನು, ಹೀಗೆ ಪ್ರೌಢರೀತಿಯಿಂದ ಆಡಿದ ಮಾತುಗಳನ್ನು ಕೇಳಿ, ರಾಜನು ತನ್ನ ಅಸ್ತ್ರರಾಜಕ್ಕೆ ಪರಮೇಶ್ವರನ ಪ್ರಭಾವದಿಂದಲೇ ಒದಗಿದ ಭಂಗಕ್ಕಾಗಿ ಹೆಚ್ಚು ಚಿಂತೆಗೊಳ್ಳದೆ- ಆದರೂ ಎಂದೂ ಎಲ್ಲೂ ಭಂಗಗೊಳ್ಳದಿದ್ದ ತನ್ನ ಅಸ್ತ್ರಪ್ರಯೋಗವು ಇಂದು ಇಲ್ಲಿ ವ್ಯರ್ಥವಾಯಿತಲ್ಲಾ ಎಂಬ ಚಿಂತೆಯು ಮನಸ್ಸನ್ನು ವೇಧಿಸುತ್ತಿರಲು, ಆ ಹಿಂಸ್ರಮೃಗವನ್ನು ಕುರಿತು- 'ಎಲೋ ಮೃಗೇಂದ್ರ, ನನ್ನ ಮಾತು ನಿನಗೆ ಪರಿಹಾಸಯೋಗ್ಯವಾಗಿ ತೋರಬಹುದು. ಆದರೂ, ನೀನು ಪ್ರಾಣಿಗಳ ಮನಸ್ಸಿನಲ್ಲಿರುವ ಯೋಚನೆಯನ್ನೂ ತಿಳಿಯಬಲ್ಲವನಾದುದರಿಂದ ಈ ಮಾತುಗಳನ್ನು ಹೇಳುತ್ತೇನೆ ಕೇಳು. ಸ್ಥಾವರಜಂಗಮಾದಿ ಸಮಸ್ತ ವಸ್ತುಗಳ ಜನನಮರಣಗಳಿಗೂ ಕಾರಣಕರ್ತನಾದ ಶ್ರೀ ಪರಮೇಶ್ವರನಿಗೆ ವಂದಿಸಿ ಹೇಳುತ್ತೇನೆ-ಲಾಲಿಸು ನಮ್ಮ ಗುರುವರ್ಯರೂ, ಆಹಿತಾಗ್ನಿಸಂರಕ್ಷಕರೂ ಆದ ವಸಿಷ್ಠ ಮಹರ್ಷಿಗಳ ಈ ಗೋಧನವನ್ನು ನಾನು ಉಪೇಕ್ಷಿಸಿ ಹೋಗಲಾರೆನು. ಆದುದರಿಂದ ಹಸಿದಿರುವ ನೀನು ನನ್ನ ಈ ದೇಹವನ್ನು ಭಕ್ಷಿಸಿ, ನಿನ್ನ ಹಸಿವನ್ನು ಇಂಗಿಸಿಕೊ! ಮನೆಯಲ್ಲಿ ಹಸಿದಿರುವ ಕರುವಿಗೆ ಸಂತೋಷವನ್ನುಂಟುಮಾಡುವಂತೆ ಈ ಹಸುವನ್ನು ಬಿಟ್ಟುಕಳುಹು.' ಎಂದು ಪ್ರಾರ್ಥಿಸಿದನು.

ರಾಜನ ಆ ಮಾತುಗಳನ್ನು ಕೇಳಿ ಸಿಂಹವು, ಗಹಗಹಿಸಿ ನಕ್ಕು— 'ಅಯ್ಯೋ ಇದೇನಾಶ್ಚರ್ಯ! ಪ್ರಪಂಚದಲ್ಲಿ ಏಕಚ್ಛತ್ರಾಧಿಪತ್ಯವನ್ನು ಪಡೆದಿದ್ದೀಯೆ ; ದಿವ್ಯ ಕಾಂತಿಮಯವಾದ ಶರೀರ, ಸಕಲ ಸುಖಾನುಭವಯೋಗ್ಯವಾದ ತುಂಬು ಯೌವನ; ರಾಜೇಂದ್ರಾ ಇಂತಹ ಅಮೌಲ್ಯ ಸೌಭಾಗ್ಯಗಳನ್ನೆಲ್ಲ ಈ ಅಲ್ಪಕ್ಕಾಗಿ ನಷ್ಟಗೊಳಿಸಲು ಉದ್ಯೋಗಿಸಿರುವ ನೀನು ಮತಿಹೀನನಲ್ಲವೆ?- ಅಥವ ಈಗ ನಿನ್ನ ದೇಹದಾನದಿಂದ ಈ ಒಂದು ಹಸುವನ್ನು ಬದುಕಿಸಬಲ್ಲೆ. ಆದರೆ ನೀನು ಜೀವಂತನಾಗಿ ಬದುಕುವುದರಿಂದ ಕೋಟ್ಯಾಂತರ ಪ್ರಜೆಗಳಿಗೆ ತಂದೆಯಾಗಿ ಕಾಪಾಡಬಹುದಲ್ಲವೆ ? ಈ ಒಂದು ಧೇನುವು ಹೋದ ಮಾತ್ರಕ್ಕೆ ಮುನಿವಸಿಷ್ಠರು ಕೋಪಗೊಳ್ಳಲಾರರು. ಹಾಗೊಂದು ವೇಳೆ ಕೋಪಗೊಂಡರೂ ಇಂತಹ ಹಸುಗಳನ್ನು ಕೋಟಿಸಂಖ್ಯೆಯಿಂದ ಕೊಟ್ಟು ಮಹಾರಾಜನಾದ ನೀನು ಅವರ ಕೋಪವನ್ನು ಶಮನಗೊಳಿಸಲು ಸಾಧ್ಯವುಂಟು! ಹೀಗಿರುವಲ್ಲಿ ಸಕಲ ವಿಧವಾದ ಸೌಖ್ಯಗಳನ್ನೂ ಅನುಭವಿಸಲು ಪರಮಸಾಧನವಾದ ಈ ದೇಹವನ್ನೇ ಬಿಡುತ್ತೇನೆ ಎಂಬೆಯಲ್ಲ- ರಾಜೇಂದ್ರ ನಿನಗೇನು ಕೊರತೆಯುಂಟು, ಭೂಸ್ಪರ್ಶವೊಂದರಿಂದ ಮಾತ್ರವಲ್ಲದೆ ನಿನ್ನ ರಾಜ್ಯವೈಭವವು ಮತ್ತಾವ ಬಗೆಯಲ್ಲಿ ದೇವೇಂದ್ರ ಪದವಿಗೆ ಕೀಳೆನಿಸಿಕೊಂಡಿದೆ? ' ಎಂಬದಾಗಿ ಸಮೀಪದ ಗಿರಿಗುಹೆಗಳು ಪ್ರತಿಧ್ವನಿಕೊಡುವಂತೆ ಆರ್ಭಟಿಸಿ ಹೇಳುತ್ತಿದ್ದ ಆ ಮೃಗೇಂದ್ರನ ಮಾತುಗಳನ್ನು ಕೇಳಿ ರಾಜನು ವಿಸ್ಮಿತನಾದನು.

ಆ ಮೃಗರಾಜನಿಗೆ ಏನು ಪ್ರತ್ಯುತ್ತರ ಹೇಳಬೇಕೆಂದು ಕ್ಷಣಕಾಲ ಯೋಚಿಸುತ್ತಿದ್ದ ದಿಲೀಪರಾಜೇಂದ್ರನ ದೃಷ್ಟಿಯು, ಸ್ವಾಭಾವಿಕವಾಗಿಯೇ ನಂದಿನೀ ಧೇನುವಿನ ಕಡೆಗೆ ಹೋಯಿತು. ಮೃಗರಾಜನ ಕೈಯಲ್ಲಿ ಸಿಕ್ಕು, ಮರಣಭಯದಿಂದಲೋ ಎಂಬಂತೆ ಕಂಗೆಟ್ಟು ದೀನವದನದಿಂದಲೂ ತೇಜೋಹೀನವಾದ ನೋಟದಿಂದಲೂ ತನ್ನ ಕಡೆಗೇ ನೋಡುತ್ತಿದ್ದ ಆ ನಂದಿನಿಯನ್ನು ಕಂಡ ರಾಜನು -' ಎಲೈ ಮೃಗರಾಜನೇ, ಕ್ಷತ್ರಿಯನಾದ ನನ್ನ ಧರ್ಮವು ಕಷ್ಟದಲ್ಲಿ ಸಿಕ್ಕು ದಿಕ್ಕುಕಾಣದೆ ಸಂಕಟಪಡುತ್ತಿರುವ ಒಂದು ಪ್ರಾಣಿಯನ್ನು ಕಾಪಾಡುವುದು ಮಾತ್ರವಲ್ಲದೆ ಅದರ ಫಲಪರಿಣಾಮುಗಳನ್ನು ಕುರಿತುದಲ್ಲ. ನನ್ನಾ ಧರ್ಮಕ್ಕೆ ವಿರೋಧವಾಗಿ ನಡೆವುದಾದಮೇಲೆ ನನಗೆ

ರಾಜ್ಯವೇಕೆ, ಅಥವ ಈ ಪ್ರಾಣವಾದರೂ ಏಕೆ? ಈ ಒಂದು ಗೋವಿಗೆ ಬದಲಾಗಿ ಹಲವು ಹಸುಗಳನ್ನು ಕೊಟ್ಟು ಮೌನೀಂದ್ರನಾದ ವಸಿಷ್ಠ ಮಹರ್ಷಿಯನ್ನು ಸಮಾಧಾನಗೊಳಿಸು ಎಂಬೆಯಲ್ಲವೆ! ಎಲೋ ಮರುಳೇ ಸ್ವರ್ಗಧೇನುವಾದ ಈ ಸುರಭಿಗೆ ಸಮಾನವಾದ ಒಂದು ಗೋವನ್ನು ತ್ರಿಲೋಕದಲ್ಲಿಯಾದರೂ ಹುಡುಕಿತರಲು ಸಾಧ್ಯವೇ? ಅದು ಎಂದಿಗೂ ಆಗದಮಾತು, ಆದುದರಿಂದ ಇಗೋ ಈ ನನ್ನ ಪ್ರಾಣಗಳನ್ನು ಕ್ರಯವಾಗಿ ಸಮರ್ಪಿಸಿ, ಈ ಧೇನುರತ್ನವನ್ನು ನಿನ್ನ ಬಂಧನದಿಂದ ಬಿಡಿಸತಕ್ಕುದು ನನಗೆ ಈಗ ಯುಕ್ತಧರ್ಮವಾಗಿದೆ. ಇದರಿಂದ ನಿನ್ನ ಆಹಾರವೂ ತಪ್ಪಿದಂತಾಗುವುದಿಲ್ಲ. ಮುನಿಗಳ ಹೋಮಕಾರ್ಯಕ್ಕೂ ಲೋಪವುಂಟಾದಂತೆ ಆಗುವುದಿಲ್ಲ. ಮೃಗರಾಜಾ, ದೇವದಾರುವನ್ನು ರಕ್ಷಿಸಲು ಪರಶಿವನಿಂದ ಆಜ್ಞಪ್ತನಾದ ನೀನು ಪರತಂತ್ರನೆಂಬುದು ಎಷ್ಟು ಕಠಿಣವಾದುದೆಂಬುದನ್ನು ತಿಳಿಯಬಲ್ಲೆಯಲ್ಲವೆ! ಹಾಗಿದ್ದಲ್ಲಿ ವಸಿಷ್ಠಮುನಿವರ್ಯರಿಂದ ಈ ಸುರಧೇನುವಿನ ರಕ್ಷಣೆಗೆಂದು ನಿಯಮಿತನಾದ ನನ್ನಮೇಲೆ ಹೊತ್ತಿರುವ ಉತ್ತರವಾದಿತನವು ಎಷ್ಟು ಗುರುತರವಾದುದು ಎಂಬುದನ್ನೂ ಅರಿಯಬಲ್ಲೆ. ಹೀಗಿರುವಲ್ಲಿ ಅದಕ್ಕೆ ಅಪಾಯವೊದಗಿದ ವೇಳೆಯಲ್ಲಿ ಅದನ್ನು ರಕ್ಷಿಸಲಾರದೆ, ಮೃತ್ಯುವಿಗೆ ಒಪ್ಪಿಸಿಕೊಟ್ಟು, ನಾನು ಮಾತ್ರ ಮುನಿಗಳ ಎದುರಿಗೆ ಹೋಗಿ ಹೇಗೆ ನಿಲ್ಲಲಿ? ಮೃಗರಾಜಾ ನನ್ನನ್ನು ಹಿಂಸೆಗೊಳಿಸುವುದು ನಿನಗೆ ಇಷ್ಟವಿಲ್ಲದಿದ್ದಲ್ಲಿ, ನನ್ನ ಯಶಃಕಾಯವನ್ನೂ ಹಿಂಸಿಸದಂತೆ ಕರುಣೆಯಿಂದ ನೋಡಿಕೋ! ಅತಿ ತುಚ್ಛವಾದ ಈ ಭೌತಿಕ ದೇಹವನ್ನುಳಿಸಿ, ಯಶಃಕಾಯವನ್ನು ಕೊಂದೆಯಾದರೆ, ಹಾಗೆ ಜೀವಿಸುವ ನಾನು ಜೀವನ್ಮೃತನಂತೆಯೇ ಇರುವೆನಲ್ಲವೆ! ಮೃಗಾಧಿಪ ಹೆಚ್ಚಿಗೆ ಇನ್ನೇನು ಹೇಳಲಿದೆ? ಲೋಕದಲ್ಲಿ ಸಂಭಾಷಣೆಯ ಮೂಲಕವಾಗಿಯೇ ಪರಸ್ಪರ ಮೈತ್ರಿಯುಂಟಾಗುವುದೆಂದು ಹೇಳುವರು. ಅದು ಈ ವನಾಂತರದಲ್ಲಿ ನಮ್ಮಲ್ಲಿ ಫಲಿಸಿತು. ನನ್ನ ದಿವ್ಯಸಖನಾದ ನೀನು, ನನ್ನ ಈ ಕೋರಿಕೆಯನ್ನು ಸಾಂಗಗೊಳಿಸಿ, ಭೂತನಾಥನ ಭೃತ್ಯನೆಂಬ ಬಿರುದನ್ನು ಸಾರ್ಥಕಗೊಳಿಸಿಕೊ!' ಎಂದು ನುಡಿದು, ಸಿಂಹವು ಏನು ಮಾಡುವುದೋ ಎಂದು ಕಾತರಭಾವದಿಂದ ಅದರ ಮುಖವನ್ನೇ ನೋಡುತ್ತಾ ನಿಂತನು.

ಸಿಂಹವು ರಾಜನ ಹೃದಯವನ್ನು ತಿಳಿಯಿತು. ರಾಜನು ಸುರಭಿಯ ಪ್ರಾಣರಕ್ಷಣೆಗಾಗಿ ತನ್ನ ಪ್ರಾಣವನ್ನು ಕೊಡಲು, ಶ್ರದ್ಧಾಪೂರ್ವಕವಾಗಿ ಸಿದ್ಧನಾಗಿದ್ದಾನೆಂಬುದು ಅದರ ಮನಸ್ಸಿಗೆ ಅರಿವಾಯಿತು. ಇನ್ನು ಪರೀಕ್ಷಿಸಬೇಕಾದುದು ಅನಾವಶ್ಯಕವೆಂದು ತೋರಿತು. ಒಡನೆ- 'ರಾಜೇಂದ್ರಾ ನಿನ್ನ ಇಚ್ಛೆಯಂತೆಯೇ ಆಗಲಿ' ಎಂದು ನುಡಿದು, ಹಸುವನ್ನು ಬಂಧನದಿಂದ ಬಿಟ್ಟಿತು. ಅದನ್ನು ಕಂಡು ರಾಜನು ಸಂತೋಷಪಟ್ಟು ಅದನ್ನು ಆದರಿಸಲಿಕ್ಕಾಗಿ ಅದರ ಬಳಿಗೆ ಹೋಗಬೇಕೆಂದು ಇಚ್ಛೆಗೊಂಡಿರಲು, ಅಷ್ಟರಲ್ಲಿ ಅಕಸ್ಮಾತ್ತಾಗಿ ಮಂತ್ರಬದ್ಧವಾದಂತೆ ಸೆಟೆದು ನಿಂತಿದ್ದ ಆತನ ಕೈಗಳೂ ಬಿಡಲ್ಪಟ್ಟುವು. ಒಡನೆ ರಾಜನು ಆನಂದಾಶ್ಚರ್ಯಗಳಿಂದ ತನ್ನ ಕೈಗಳಲ್ಲಿದ್ದ ಬಿಲ್ಲು ಬಾಣಗಳನ್ನು ನೆಲದಮೇಲಿಟ್ಟು, ತನ್ನ ದೇಹವನ್ನು ಮಾಂಸಪಿಂಡವೋ ಎಂಬಂತೆ ಮಾಡಿಕೊಂಡು ಸಿಂಹದ ಮುಂಭಾಗದಲ್ಲಿ ಹೋಗಿ ಕುಳಿತನು.

ಪರೋಪಕಾರ ಪರಾಯಣ ಧುರೀಣನಾದ ದಿಲೀಪರಾಜೇಂದ್ರನು ಇನ್ನೇನು ಸಿಂಹವು ತನ್ನಮೇಲೆ ಹಾರಿ ಗೋಣುಮುರಿದು ತನ್ನ ದೇಹವನ್ನು ಆಹಾರವಾಗಿ ಕೈಗೊಳ್ಳುವುದೆಂದು, ಅದರ ಮುಂಭಾಗದಲ್ಲಿ ಭೂಮಿಯನ್ನು ನೋಡುತ್ತಾ ತಲೆತಗ್ಗಿಸಿಕೊಂಡು ಕುಳಿತುಕೊಂಡಿರುತ್ತಿರಲು, ಆತನಿಗೆ ಪರಮಾಶ್ಚರ್ಯವುಂಟಾಗುವಂತೆ ವಿದ್ಯಾಧರರು ಆತನ ಶಿರಿಮುಡಿಯಮೇಲೆ ಕುಸುಮವೃಷ್ಟಿಯನ್ನು ಸುರಿಸಿದರು. ರಾಜನು ಅದೇನೆಂದು ಪರಮಾಶ್ಚರ್ಯಗೊಂಡು ತಲೆಯೆತ್ತಿ ನೋಡುವವೇಳೆಗೆ—'ವತ್ಸ, ದಿಲೀಪರಾಜಾ ಏಳು ಏಳು' ಎಂಬ ಅಮೃತಸಮಾನವಾದ ವಚನವೊಂದು ಆತನ ಕಿವಿಗೆಬಿದ್ದಿತು. ಒಡನೆ ಮೇಲಕ್ಕೆದ್ದು ನೋಡಲು ಸಮೀಪದಲ್ಲಿದ್ದ ಸಿಂಹವು ಅದೃಶ್ಯವಾಗಿದ್ದು-ಮಾತೃಸದೃಶವಾದ ನಂದಿನೀಧೇನುವು ನಿಂತುಕೊಂಡಿತ್ತು. ಅದನ್ನು ಕಂಡು ರಾಜನಿಗೆ ಮೈಮೇಲೆ ಪುಳಕಗಳೆದ್ದು ಆನಂದಬಾಷ್ಪಗಳುದುರಿದುವು. ಅಕಸ್ಮಾತ್ತಾಗಿ ಘಟಿಸಿದ ಈ ಸನ್ನಿವೇಶಕ್ಕೆ ಕಾರಣವೇನೆಂದು ಆನಂದಾಶ್ಚರ್ಯಗಳಿಂದ ಕೂಡಿದ ರಾಜನನ್ನು ಕುರಿತು ನಂದಿನಿಯು-'ಮಗು ದಿಲೀಪ, ನಿನ್ನ ಅಂತರ್ಯ ಶ್ರದ್ಧಾಭಕ್ತಿಗಳನ್ನು ಪರೀಕ್ಷಿಸಲೆಳಸಿ ನಾನೇ ಈ ಮಾಯಾ ಸಿಂಹವನ್ನು ನಿರ್ಮಿಸಿದ್ದೆನಲ್ಲದೆ, ವಸಿಷ್ಠ ಮಹರ್ಷಿಗಳ ಕರುಣೆ

ಯಿಂದ - ಕ್ರೂರಮೃಗಗಳೇಕೆ ಯಮನು ಸಹ ನನ್ನ ಕಡೆಗೆ ತಿರುಗಿನೋಡಲರಿಯನು. ದಿಲೀಪರಾಜೇಂದ್ರ, ನೀನು ನನ್ನ ವಿಷಯದಲ್ಲಿ ವಿಶೇಷ ದಯ ಶ್ರದ್ಧಾಭಕ್ತಿಗಳನ್ನು ಪ್ರಕಟಿಸಿ ಗುರುಕೃಪೆಗೆ ಪಾತ್ರನಾದೆ. ನಿನ್ನ ಗುರುಭಕ್ತಿ ಮುಂತಾದ ಈ ಸದ್ಗುಣಗಳು ನನ್ನ ಮನಸ್ಸಿಗೆ ಅತ್ಯಾನಂದವನ್ನುಂಟುಮಾಡಿವೆ. ನಿನ್ನಂತಹ ಸತ್ಪುತ್ರನನ್ನು ಪಡೆದ ನಿನ್ನ ವಂಶದ ಪೂರ್ವಜರು ಧನ್ಯರಾದರು. ರಾಜೋತ್ತಮಾ, ಕೇಳು ಕೇಳು, ನಿನಗೆ ಏನಪೇಕ್ಷೆಯೋ ಆ ವರವನ್ನು ಸಂಕೋಚವಿಲ್ಲದೆ ಕೇಳು! ನಿನ್ನ ಅಪೇಕ್ಷೆಯೇನೋ ಅದನ್ನು ನಿಶ್ಶಂಕೆಯಿಂದ ಕೇಳು, ಸಂತೋಷದಿಂದ ಕೊಡುವೆನು.'

ಕರ್ಣಗಳಿಗೆ ಪರಮ ಆಪ್ಯಾಯಕವಾಗಿದ್ದ ನಂದಿನೀ ಧೇನುವಿನ ಆ ಮಾತುಗಳನ್ನು ಲಾಲಿಸಿ, ದಿಲೀಪರಾಜನು—'ತಾಯಿ! ನನ್ನ ಶ್ರೇಯಸ್ಸಿಗೆ ಸಾಧಕವಾದ ಇಷ್ಟು ಕಾರ್ಯಗಳನ್ನು ಕಲ್ಪಿಸಿ ನನ್ನನ್ನು ಧನ್ಯನನ್ನಾಗಿಸಿದ ನಿನಗೆ ನಾನು ಎಷ್ಟು ಬಗೆಯಿಂದ ಕೃತಜ್ಞನಾಗಿದ್ದರೂ ಕಡಮೆಯೇ ಇದೆ. ಮಾತೃಸದೃಶಳಾದ ನಿನ್ನ ಮತ್ತು ವಸಿಷ್ಠಮಹಾಮುನೀಶ್ವರರ ಕೃಪೆಗೆ ಪಾತ್ರನಾಗಲು ಯೋಗ್ಯನಾದ ಇಂದಿನ ದಿನವೇ ನನ್ನ ಜನ್ಮದಲ್ಲಿ ಸುದಿನವು. ಇಂದೇ, ನಾನು ಸೂರ್ಯವಂಶದಲ್ಲಿ ಜನಿಸಿದುದು ಸಾರ್ಥಕವಾಯಿತು. ಗುರುಕೃಪೆಗೆ ಪಾತ್ರನಾದ ಇಂದಿನ ಈ ಸುಯೋಗದಿಂದ ನನ್ನ ಪಿತೃಪಿತಾಮಹಾದಿ ಪೂರ್ವಜರೆಲ್ಲರೂ ಸದ್ಗತಿಗೆ ಸಂದರು. ನನ್ನ ಸಕಲಾಭೀಷ್ಟಗಳನ್ನೂ ಪ್ರಸಾದಿಸಲು ಮುಕ್ತಹಸ್ತದಿಂದ ಸಿದ್ಧಳಾಗಿ ನಿಂತಿರುವ ಕಾಮಧೇನುವೇ ನನ್ನ ಸಮೀಪದಲ್ಲಿರುವಾಗ ನನ್ನ ಸಕಲಾಭೀಷ್ಟಗಳೂ ಪೂರ್ಣವಾದುವೆಂದೇ ಭಾವಿಸಿ ಸಂತುಷ್ಟನಾಗಿದ್ದೇನೆ- ಮಾತೇ ಆದರೆ ನನ್ನ ಇಚ್ಛೆಯೊಂದುಂಟು. ಇಷ್ಟುಕಾಲವಾಗಿ ನನ್ನಲ್ಲಿ ಸಂತಾನೋದಯವಾಗಲಿಲ್ಲವಾಗಿ, ನನ್ನಲ್ಲೇ ವಂಶಚ್ಛೇದವಾಗುವುದೋ ಎಂದು ಶಂಕೆಗೊಂಡು ವಿಶೇಷ ಚಿಂತಾಕ್ರಾಂತನಾಗಿದ್ದೆ. ಇಂದು ನಿನ್ನ ಪರಮಾನುಗ್ರಹದಿಂದ ಆ ಶಂಕೆ ನಿವಾರಣೆಯಾಯಿತು. ಧರ್ಮರಕ್ಷಣೆಗಾಗಿ ತನ್ನ ವೀರ್ಯವನ್ನು ವ್ಯಯಮಾಡಿ ಧರಣಿಯನ್ನು ಪಾಲಿಸಲು ಶಕ್ತನಾಗುವಂತಹ, ಧೀರನೂ, ವಂಶಕರ್ತನೂ ವಿಶೇಷ ಯಶೋವಂತನೂ ಆದ ಒಬ್ಬ ಮಗನು ನನಗೆ ನನ್ನ ಧರ್ಮಪತ್ನಿ ಸುದಕ್ಷಿಣಾದೇವಿಯಲ್ಲಿ ಉದಯಿಸುವಂತೆ ವರಪ್ರದಾನಮಾಡು. ತಾಯೇ, ನನಗೆ ಮತ್ತಿ

ನ್ನಾವ ಅಪೇಕ್ಷೆಯೂ ಇಲ್ಲ' ಎಂದು ಪುನಃ ಪೊಡಮಟ್ಟು ಕೈಜೋಡಿಸಿ ನಿಂತನು.

ಶ್ರೇಯಸ್ಸಾಧಕವಾದ ದಿಲೀಪರಾಜನ ಪ್ರಾರ್ಥನೆಯು, ಆ ಕಾಮಧೇನು ಪುತ್ರಿಗೆ ಸಮಂಜಸವಾದುದೆಂದು ತೋರಿತು. ಆತನ ಆ ಪ್ರಾರ್ಥನೆಯೂ, ಆ ಪ್ರಾರ್ಥನೆಯನ್ನು ತಾನು ಸಲ್ಲಿಸಿಕೊಡುವುದೂ ಗುರುವರ್ಯರಿಗೆ ಸಮ್ಮತವಾದುವೇ ಎಂಬುದೂ ಗೋಚರವಾಯಿತು. ಒಡನೆ ಪರಮ ಸಂತೋಷಗೊಂಡು, ತನ್ನ ಭಕ್ತೋತ್ತಮನಾದ ಆತನಿಗೆ ಮೇಲನ್ನುಂಟುಮಾಡಬೇಕೆಂದು ಇಚ್ಛಿಸಿ- ಒಂದು ಪತ್ರಪಾತ್ರೆಯಲ್ಲಿ ಅಮೃತೋಪಮವಾದ ತನ್ನ ಕ್ಷೀರವನ್ನು ಕರೆದು-'ರಾಜೋತ್ತಮಾ ಇದನ್ನು ಸೇವಿಸು ನಿನ್ನ ಇಷ್ಟಾರ್ಥವು ಸಿದ್ಧಿಸುವುದು' ಎಂದು ನುಡಿಯಿತು. ಆ ಮಾತುಗಳನ್ನು ಕೇಳಿ ರಾಜನು -'ಮಾತೆಯೇ ಧನ್ಯನಾದೆ, ನಿನ್ನ ಈ ಅಮೃತ ರಸವು, ಗುರು ವಸಿಷ್ಠರ ಹೋಮಕಾರ್ಯಕ್ಕೂ, ಮತ್ತು ನಿನ್ನ ಮಗುವಾದ ಎಳೆಗರುವಿಗೂ ವಿನಾ ಸಲಾಗಿರತಕ್ಕುದಲ್ಲವೆ. ಇಂತಹ ಪವಿತ್ರವಾದ ಈ ಕ್ಷೀರವನ್ನು - ಮುನಿಗಳು ತಮ್ಮ ತಪಸ್ಸಿನಲ್ಲಿ ರಾಜ್ಯಾಧಿಪತಿಗೆ ಷಷ್ಠಾಂಶವನ್ನು ಕೊಡುವಂತೆ, ಇದನ್ನು ನಾನು ಗುರುಗಳ ಅನುಮತಿಯನ್ನು ಪಡೆದು ಗ್ರಹಿಸುತ್ತೇನೆ ಎಂದು ನುಡಿದು, ಆ ಕ್ಷೀರಪೂರ್ಣವಾದ ಪತ್ರಪಾತ್ರೆಯನ್ನು ಶ್ರದ್ಧಾಭಕ್ತಿ ಪೂರ್ವಕವಾಗಿ ತೆಗೆದುಕೊಂಡನು. ಚಿರಕಾಲದಿಂದ ಅಪೇಕ್ಷಿತವಾಗಿದ್ದ ವರವು ಲಬ್ಧವಾಯಿತೆಂದು ತನ್ನ ಗುರುವರ್ಯರನ್ನು ಮರೆಯದೆ, ಅವರ ಅನುಮತಿಯಿಂದ ಆ ಕ್ಷೀರವನ್ನು ಸ್ವೀಕರಿಸುವೆನೆಂದು ನುಡಿದ ಆತನ ಮಾತನ್ನು ಕೇಳಿ ಆ ಸುರಭಿಯು ಆತನ ಗುರುಭಕ್ತಿಗಾಗಿಯೂ ಸೌಜನ್ಯಕ್ಕಾಗಿಯೂ ಪರಮಸಂತೋಷಗೊಂಡಿತು. ಅಷ್ಟರಲ್ಲಿ ಸಾಯಂಕಾಲವಾಗುತ್ತಿರಲು, ಆ ಗುಹಾಪ್ರದೇಶದಿಂದ ಹೊರಟು ಇಬ್ಬರೂ ನಿರಾಯಾಸವಾಗಿ ನಡೆದು ಆಶ್ರಮವನ್ನು ಸೇರಿದರು.

ಸೇವೆ ಮಾಡಲು ಪ್ರಾರಂಭಿಸಿದಾಗಿನಿಂದ ಪ್ರತಿದಿನವೂ ಇರುತ್ತಿದ್ದ ಆತನ ಮುಖಭಾವಕ್ಕೂ ಆ ದಿನದಲ್ಲಿ ಆತನ ಮುಖಭಾವವಿದ್ದ ರೀತಿಗೂ ಉಂಟಾಗಿದ್ದ ವ್ಯತ್ಯಾಸವನ್ನೂ, ಆ ವ್ಯತ್ಯಾಸಕ್ಕೆ ಕಾರಣವೇನೆಂಬುದನ್ನೂ ವಸಿಷ್ಠಮಹರ್ಷಿಗಳು ಗ್ರಹಿಸದಿರಲಿಲ್ಲ. ಆತನ ಹಸನ್ಮುಖವು, ಆತನಿಗೆ

ನಂದಿನೀ ಧೇನುವಿನ ಪ್ರಸಾದವು ಲಭ್ಯವಾಯಿತೆಂಬುವುದನ್ನು ನಿಸ್ಸಂಶಯವಾಗಿ ತಿಳಿಸುವಂತಿತ್ತು. ಆದರೂ ರಾಜನು, ತನ್ನ ಭಕ್ತಿ ಶ್ರದ್ಧೆಗಳನ್ನನುಸರಿಸಿ, ಅವರ ಬಳಿಗೆಬಂದು, ವಿನೀತಭಾವದಿಂದ ನಮಸ್ಕಾರಮಾಡಿ, ಕೈಜೋಡಿಸಿ ನಿಂತು—'ಗುರುವರ್ಯಾ, ತಮ್ಮ ಪಾದಾನುಗ್ರಹದಿಂದ ಈ ದಿನ ಸುರಭಿಯು ನನ್ನ ವಿಷಯದಲ್ಲಿ ಸುಪ್ರಸನ್ನಳಾದಳು. ನಾನು ಧನ್ಯನಾದೆ. ನನ್ನ ವಂಶವು ಪಾವನವಾಯಿತು' ಎಂದು ಪುನಃ ನಮಸ್ಕರಿಸಿ, ತನ್ನ ಕೃತಜ್ಞತೆಯನ್ನು ತನ್ನ ನೋಟ ವಾಕ್ಕು ಮತ್ತು ಕ್ರಿಯೆಗಳಿಂದ ಪ್ರಕಟಿಸುತ್ತ ನಿಂತಿದ್ದನು ಮಹರ್ಷಿ ವಸಿಷ್ಠರು ಆ ರಾಜನ ಸುಗುಣ ಸಂಪದಕ್ಕೆ ಪರಮಾನಂದಗೊಂಡು-'ವತ್ಸಾ ದಿಲೀಪನರೇಂದ್ರ ನಿನ್ನ ಈ ಸೌಜನ್ಯವೂ ಗುರುಭಕ್ತಿಯೂ ನನಗೆ ಅತ್ಯಾನಂದವನ್ನುಂಟುಮಾಡಿವೆ. ಈ ನಿನ್ನ ನಿಷ್ಕಲ್ಮಷ ಭಕ್ತಿಯ ಫಲವಾಗಿಯೇ ನೀನು, ನಿನ್ನ ಮನೋರಥವನ್ನು ಗಳಿಸಿಕೊಂಡೆ, ನಿನ್ನಂತಹ ಪುತ್ರನನ್ನು ಪಡೆದ ನಿನ್ನ ಪೂರ್ವಜರು ಧನ್ಯತೆಯನ್ನು ಹೊಂದುವುದರಲ್ಲಿ ಆಶ್ಚರ್ಯವೇನಿದೆ! ರಾಜೇಂದ್ರ, ಇನ್ನು ನಾಳೆಯ ಪ್ರಾತಃಕಾಲ ವ್ರತಸಾಂಗವಾದ ಪಾರಣೆಯನ್ನು ತೀರಿಸಿಕೊಂಡು, ನೀನು ಸುದಕ್ಷಿಣಾದೇವಿಯೊಂದಿಗೆ ನಿನ್ನ ರಾಜಧಾನಿಯನ್ನು ಕುರಿತು ಪ್ರಯಾಣಮಾಡು, ನಿನಗೆ ಸಕಲ ಶ್ರೇಯಸ್ಸುಗಳೂ ಲಭ್ಯವಾಗಲಿ' ಎಂದು ನುಡಿದು ಹೃತ್ಪೂರ್ವಕವಾಗಿ ಆಶೀರ್ವದಿಸಿದರು.

ದಿಲೀಪರಾಜೇಂದ್ರನು ಸಂತುಷ್ಟಾಂತರಂಗನಾಗಿ ಆ ರಾತ್ರಿಯನ್ನು ಮಹರ್ಷಿಗಳ ಆಶ್ರಮದಲ್ಲೇ ಸಂತೋಷದಿಂದ ಕಳೆದು, ಮಾರನೆಯ ಪ್ರಾತಃಕಾಲವಾಗಲು, ಸ್ನಾನಸಂಧ್ಯಾದಿಗಳನ್ನು ತೀರಿಸಿಕೊಂಡು ಗುರುವರ್ಯರನ್ನು ಕಂಡು ಸುದಕ್ಷಿಣಾದೇವಿಯೊಂದಿಗೆ ಋಷಿಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಆಜ್ಞೆಯನ್ನು ನಿರೀಕ್ಷಿಸುತ್ತಾ ನಿಂತುಕೊಂಡನು. ವಿನೀತಭಾವದ ಆ ರಾಜದಂಪತಿಗಳನ್ನು ಕಂಡು ವಸಿಷ್ಠರು ಪರಮ ಸಂತೋಷಗೊಂಡು—'ರಾಜೇಂದ್ರಾ ನಿನ್ನೆಯವರೆಗೆ ವ್ರತನಿಯಮಾದಿಗಳನ್ನು ಆಚರಿಸಿ ನೀವಿಬ್ಬರೂ ಬಹು ಕಷ್ಟಪಟ್ಟಿರುವಿರಿ. ಈ ದಿನ ನಿಮ್ಮ ವ್ರತದ ಪಾರಣೆಯೇ ಮುಂತಾದ ಕೆಲವು ಶುಭಕಾರ್ಯಗಳನ್ನೂ ತೀರಿಸಿಕೊಂಡು, ತರುವಾಯ, ನಿಮ್ಮ ರಾಜಧಾನಿಯನ್ನು ಸೇರಿರಿ' ಎಂದು ನುಡಿದರು. ರಾಜನು- 'ಮಹ

ದಾಪ್ನೋ' ಎಂದು, ಆ ದಿನ ಮಧ್ಯಾಹ್ನದವರೆಗೂ ಆ ವ್ರತಸಮಾಪ್ತಿಗೆ ಸಂಬಂಧಿಸಿದ ಕಾರ್ಯಕಲಾಪಗಳನ್ನೆಲ್ಲ ನೆರವೇರಿಸಿ, ತರುವಾಯ ಇನ್ನು ರಾಜಧಾನಿಯನ್ನು ಕುರಿತು ಪ್ರಯಾಣಮಾಡಬಹುದೆಂದು ತೋರಲು, ಪುನಃ ಮಹರ್ಷಿಗಳ ಆಶ್ರಮದೊಳಕ್ಕೆ ನಡೆದು ಹೋಗುವಷ್ಟರಲ್ಲಿ, ಗುರುವರ್ಯರಿಗೂ, ಆ ಮಹರ್ಷಿಭಾರ್ಯೆಯಾದ ಅರುಂಧತೀದೇವಿಗೂ, ಮಾತೃಸದೃಶವಾದ ಕಾಮಧೇನುಸುತೆ ನಂದಿನೀಧೇನುವಿಗೂ, ಅದರ ಕರುವಿಗೂ ಪ್ರದಕ್ಷಿಣೆ ಮಾಡಿ ಪತ್ನಿಯೊಂದಿಗೆ ರಥಾರೂಢನಾಗಿ ಹೊರಟನು.

ರಾಜಧಾನಿಯಿಂದ ಮಹರ್ಷಿಗಳ ಆಶ್ರಮವನ್ನು ಕುರಿತು ಪ್ರಯಾಣ ಮಾಡಿದಾಗ್ಗೆ ದುಗುಡತರ ಚಿತ್ತವೃತ್ತಿಯಿಂದ, ಬಂದ ಆತನಿಗೆ ಮಾರ್ಗದಲ್ಲಿ ಶೃಂಗಾರವಾಗಿದ್ದ ದೃಶ್ಯಗಳೆಷ್ಟೋ ಕಣ್ಣಿಗೇ ಬೀಳದೆ ಇದ್ದುವು. ಈಗಲಾದರೆ, ನಂದಿನೀ ಧೇನುವಿನ ಕೃಪಾಪಾತ್ರನಾಗಿ ವರದಾನವನ್ನು ಪಡೆದೂ, ಮಹರ್ಷಿ ವಸಿಷ್ಠರ ಪರಮಾನುಗ್ರಹಕ್ಕೆ ಪಾತ್ರನಾಗಿಯೂ ಬಂದುದರಿಂದ ಉತ್ಸಾಹಸಂಪನ್ನವಾಗಿದ್ದ ಆತನ ಹೃದಯಕ್ಕೆ ಎಲ್ಲೆಲ್ಲೂ ಸೌಖ್ಯವೇ ಸಮೃದ್ಧವಾಗಿರುವಂತೆ ಕಾಣುಬರುತ್ತಿತ್ತು. ಕಣ್ಣುಗಳಿಗೆ ನೋಡಿದ ವಸ್ತುಗಳೆಲ್ಲ ಆನಂದದಾಯಕವಾಗಿಯೇ ತೋರುತ್ತ ಬಂದುವು. ಹೀಗೆ ಇನವಂಶಭೂಷಣನಾದ ದಿಲೀಪಮಹಾರಾಜನು, ರಾಜಾಧಿರಾಜರಿಗೂ ಪ್ರಭುವಾಗಿದ್ದರೂ ಗುರುಹಿರಿಯರಲ್ಲಿ ವಿಧೇಯನಾಗಿ ವಿನಯಾನ್ವಿತನಾಗಿದ್ದುದರ ಫಲವಾಗಿ ತನ್ನ ವಂಶಾಭಿವೃದ್ಧಿಗಾಗಿ ವರದಾನವನ್ನು ಪಡೆದು, ಸಂತೋಷದಿಂದ ಪ್ರಯಾಣಮಾಡಿದನು.



## ಅಧ್ಯಾಯ ೫ 'ಪುತ್ರೋತ್ಸವ'

ತಮ್ಮ ಮನೋರಥವನ್ನು ಪೂರ್ಣಗೊಳಿಸಿಕೊಂಡು ತಮ್ಮ ನಗರಾಭಿಮುಖರಾಗಿ ಪ್ರಯಾಣಮಾಡಿದ ಆ ರಾಜದಂಪತಿಗಳು, ವಿನೋದಕರಗಳಾದ ಹಲವು ನೋಟಗಳನ್ನು ನೋಡಿಕೊಂಡು, ಬಹುದೂರದ ಆ ಮಾರ್ಗವನ್ನು ಶೀಘ್ರವಾಗಿಯೇ ಕಳೆದು ರಾಜಧಾನಿಯನ್ನು ಸಮೀಪಿಸಿದರು. ಅಷ್ಟ

ಕಾಲ ತಮ್ಮ ರಾಜನನ್ನು ಕಾಣದಿದ್ದುದಕ್ಕಾಗಿ ಪರಿತಪಿಸಿದ್ದ ರಾಜಭಕ್ತಿ ಯುತರಾದ ಆ ಪುರನಿವಾಸೀ ಪ್ರಜೆಗಳು, ತಮ್ಮ ಅರಸನು ಪುತ್ರಪ್ರಾಪ್ತಿ ಗಾಗಿ ವರಪಡೆದು ಬಂದ ವಾರ್ತೆಯನ್ನು ಕೇಳಿ, ಬಹು ಸಂಭ್ರಮಗೊಂಡು ಗುಡಿ ತೋರಣ ಪತಾಕೆಗಳಿಂದ ನಗರವನ್ನು ಸಿಂಗರಿಸಿ, ಗುಂಪು ಗುಂಪಾಗಿ ನೆರೆದು ಕಾದಿದ್ದರು. ಮಂತ್ರಿ ಸಾಮಂತರು ಬಿನ್ನವತ್ತಲೆಗಳನ್ನರ್ಪಿಸಿ, ಎದುರುಗೊಂಡು ತಮ್ಮ ಮಹನೀಯ ರಾಜದಂಪತಿಗಳನ್ನು ಪರಮಸಂ ತೋಷದಿಂದ ಬರಮಾಡಿಕೊಂಡರು. ದಿಲೀಪರಾಜೇಂದ್ರನು, ತನ್ನ ಪ್ರಜೆ ಗಳ ರಾಜಭಕ್ತಿಯನ್ನೂ, ಮಂತ್ರಿ ಸಾಮಂತರ ಸ್ವಾಮಿಭಕ್ತಿಯನ್ನೂ ಕಂಡು ಸಂತುಷ್ಟನಾಗಿ, ತನ್ನನ್ನು ಅಷ್ಟುಮಟ್ಟಿಗೆ ಗೌರವಿಸಿ ಉಪಚರಿಸುತ್ತಿದ್ದ ಸರ್ವರನ್ನೂ ಹಸನ್ಮುಖದಿಂದಲೂ, ಮೃದುಮಧುರ ವಾಕ್ಯಗಳಿಂದಲೂ, ಕಟಾಕ್ಷವೀಕ್ಷಣದಿಂದಲೂ ಆದರಿಸುತ್ತ, ಸಂತೋಷದಿಂದ ಮಹಾರಾಣಿ ಯೊಂದಿಗೆ ಅರಮನೆಯ ಮಹಾಪ್ರಾಸಾದವನ್ನು ಹೊಕ್ಕನು.

ಆವರೆಗೆ ರಾಜ್ಯಭಾರವನ್ನು ನಿರ್ವಹಿಸುತ್ತಿದ್ದ ಮಂತ್ರಿಪ್ರಮುಖ ಅಧಿ ಕಾರಿಗಳು ತಮ್ಮ ಆಡಳಿತದಲ್ಲಿ ನಡೆದ ಸಮಸ್ತ ರಾಜಕಾರ್ಯಗಳ ವರದಿ ಯನ್ನೂ ಧೊರೆಗೆ ಬಿನ್ನವಿಸಿದರು. ಪ್ರಭುವು ಅವುಗಳನ್ನು ಪರಾಂಬರಿಸಿ, ಪರಮನಿಸ್ಪೃಹತೆಯಿಂದಲೂ ಸ್ವಾಮಿಭಕ್ತಿಯಿಂದಲೂ ಕೆಲಸಮಾಡಿದ ಆ ಅಧಿಕಾರಿವರ್ಗವನ್ನು ಮೆಚ್ಚಿಕೊಂಡು ಅವರ ಪ್ರಾರ್ಥನೆಯಂತೆ ರಾಜ್ಯಭಾರ ವನ್ನು ಪುನಃ ತಾನೇ ಅಂಗೀಕರಿಸಿದನು. ಧರ್ಮಪರನೂ ಗುರುಸೇವಾ ಸಕ್ತನೂ ಆದ ಆ ರಾಜೇಂದ್ರನ ರಾಜ್ಯಪಾಲನೆಯಲ್ಲಿ ಪ್ರಜೆಗಳ ಸಕಲ ಬಗೆಯ ಈತಿಬಾಧೆಗಳೂ ತೊಲಗಿ, ಅವರು ತಮ್ಮ ಸಕಲ ಅಭೀಷ್ಟಗಳನ್ನೂ ಪಡೆದು ಸಂತುಷ್ಟರಾದರು.

ವಸಿಷ್ಠಾಶ್ರಮದಲ್ಲಿ ಸುರಭಿ ನಂದಿನಿಯಿಂದ ಅನುಗ್ರಹಿಸಲ್ಪಟ್ಟ ಕ್ಷೀರ ವನ್ನು ಗುರ್ವಾಜ್ಞೆಯಿಂದ ಸೇವಿಸಿದ ಸುದಕ್ಷಿಣಾದೇವಿಯು ಗರ್ಭಧಾರಣೆ ಮಾಡಿದಳು. ತನ್ನ ರಾಣಿಯು ಗರ್ಭಧಾರಣೆಮಾಡಿದಳೆಂದೂ, ಆಕೆಯಲ್ಲಿ ಗರ್ಭಚಿನ್ಹೆಗಳು ಕಂಡುಬರುತ್ತಿವೆಯೆಂದೂ, ದಿಲೀಪನರೇಂದ್ರನು ಆಕೆಯ ಸಖಿಯರಿಂದ ಕೇಳಿ, ಪರಮಸಂಭ್ರಮಗೊಂಡನು. ಅಂದಿಗೆ ತನ್ನ ಬಾಳ್ವೆಯು

ಸಾರ್ಥಕವಾಯಿತೆಂದುಕೊಂಡನು. ಮಹರ್ಷಿಗಳೂ ಸುರಧೇನುವೂ ತನ್ನ ವಿಷಯದಲ್ಲಿ ತೋರಿಸಿದ ಪರಮಾನುಗ್ರಹಕ್ಕಾಗಿ, ಅತ್ಯಂತ ಸಮಾಧಾನ ಗೊಂಡನು. ಇನ್ನು ತನ್ನ ಪಿತೃಗಳು ದುರ್ಗತಿಯನ್ನು ಹೊಂದಲು ಕಾರಣವಿ ಲ್ಲವೆಂಬ ಧೈರ್ಯವು ಆತನಿಗುಂಟಾಯಿತು. ಈವರೆಗೆ ಕೇವಲ ಕರ್ತವ್ಯ ವೆಂಬ ಭಾವನೆಯಿಂದ ನಡೆಯಿಸುತ್ತಿದ್ದ ರಾಜ್ಯಪಾಲನಾ ಕಾರ್ಯವನ್ನು, ಮುಂದೆ ಪರಮೋತ್ಸಾಹಯುಕ್ತನಾಗಿ ನಡೆಯಿಸತೊಡಗಿದನು.

ಸುದಕ್ಷಿಣಾದೇವಿಯಲ್ಲಿ ಗರ್ಭಚಿಹ್ನೆಗಳು ಸ್ಪಷ್ಟವಾಗಿ ಗೋಚರವಾಗ ತೊಡಗಿದುವು. ತನುವು ಕೃಶವಾಯಿತು, ನಡಿಗೆಯು ಮಂದವಾಯಿತು. ದೇಹದಲ್ಲ ಆಗಾಗ್ಗೆ ವಿಶೇಷ ಬಳಲಿಕೆ ತೋರಸಾಗಿತು. ಆಹಾರವು ರುಚಿಸ ದಾಯಿತು. ಗರ್ಭವು ದಿನದಿನಕ್ಕೆ ಬೆಳೆಯುತ್ತಿದ್ದಂತೆ ಬಯಕೆಗಳೂ ಒಂ ದೊಂದಾಗಿ ಉಂಟಾಗತೊಡಗಿದುವು. ರಾಣಿಯು ಮಹಾ ಗಾಂಭೀರ್ಯಶಾ ಲಿನಿಯಾದುದರಿಂದ, ತನಗೆ ಅಪೇಕ್ಷೆಯಾದ ವಸ್ತುಗಳನ್ನು ಪತಿಯಾದ ತನ್ನೆದುರಿಗೆ ಹೇಳಲಾರಳೆಂದು ತಿಳಿದು, ರಾಜನು ಆಕೆಯ ಪ್ರಾಣಸಖಿಯ ರಿಂದ ಆ ಸಂಗತಿಯನ್ನು ಕೇಳಿ ತಿಳಿದುಕೊಳ್ಳುತ್ತಿದ್ದನು. ಆಕೆಗೆ ಯಾವು ದೊಂದು ಪದಾರ್ಥವು ಅಪೇಕ್ಷಣೀಯವಾಯಿತೆಂದರೆ, ಅದನ್ನು ಮಹತ್ಪ್ರಯ ತ್ನದಿಂದಲಾದರೂ ದೊರಕಿಸಿ ಒಡನೆ ಆಕೆಗೆ ಒನಗಿಸಿ, ಆಕೆಯ ಇಚ್ಛಾಪೂ ರ್ತಿಮಾಡುವನು. ಹೀಗೆ ದಿನದಿನಕ್ಕೆ ಗರ್ಭವು ಸುರಕ್ಷಿತವಾಗಿ ಬೆಳೆದು, ಆ ಮಗಧ ರಾಜಪುತ್ರಿಯು, ಪುಷ್ಪಪತ್ರಗಳೆಲ್ಲವೂ ಉದುರಿಹೋದ ತರು ಣಾಯ ಪುಷ್ಪಗರ್ಭದಲ್ಲಿ ಚಿಕ್ಕ ಹೀಚುಗಳನ್ನು ಒಳಗೊಂಡಿದ್ದ ಲತೆಯಂತೆ ಮನೋಹರವಾಗಿ ಒಪ್ಪಿದಳು. ಐದಾರು ತಿಂಗಳುಗಳು ಕಳೆಯಲು, ಉದರ ಪ್ರದೇಶವು ದೊಡ್ಡದಾಗಿ ಗರ್ಭವು ಸ್ಪಷ್ಟವಾಗಿ ಗೋಚರಿಸುವಂತಾಯಿತು, ಆ ಕಾಲದಲ್ಲೇ ನಡೆಯಬೇಕಾದ ಪುಂಸವನಾದಿ ಶುಭಕಾರ್ಯಗಳನ್ನು ರಾಜನು, ಆಕೆಯ ವಿಷಯದಲ್ಲಿ ತನಗಿದ್ದ ಅನುರಾಗಕ್ಕೆ ಅನುಸಾರವಾ ಗಿಯೂ, ತನ್ನ ಮಾನಸ್ಸಿನಲ್ಲಿದ್ದ ಹರ್ಷ ಔದಾರ್ಯಗಳಿಗೆ ತಕ್ಕಂತೆಯೂ, ನಿಜಭುಜಾರ್ಜಿತವಾದ ತನ್ನ ವಿಪುಲ ಸಂಪತ್ತಿಗೆ ಯುಕ್ತವೆನ್ನಿಸುವಂತೆಯೂ ವಿಶೇಷ ವೈಭವದಿಂದ ನಡೆಯಿಸಿದನು. ಆತನ ಔದಾರ್ಯದಿಂದ ಬ್ರಾಹ್ಮ ಣರೇ ಮುಂತಾದ ಉತ್ತಮ ವರ್ಣಸ್ಥರು ಮಾತ್ರವಲ್ಲ - ದೀನಾನಾಥನಿಪ

ನ್ನರೂ ತಮ್ಮ ಇಚ್ಛಾನುಸಾರವಾಗಿ ಅನ್ನವಸ್ತ್ರಾದಿಗಳನ್ನು ಪಡೆದು ಸಂತುಷ್ಟರಾದರು ದಿಲೀಪರಾಜೇಂದ್ರನು, ರಾಜಕಾರ್ಯಗಳನ್ನೆಲ್ಲ ತೀರಿಸಿಕೊಂಡು ಶ್ರಮಹೊಂದಿ ಅಂತಃಪುರದಲ್ಲಿದ್ದ ರಾಣಿಯ ಬಳಿಗೆ ಬರಲು, ಗರ್ಭಭಾರದಿಂದ ಅಶಕ್ತಳಾಗಿದ್ದರೂ, ಪತಿಭಕ್ತಿಪರಾಯಣಳಾದ ಆ ಸಾಧ್ವೀಮಣಿಯು ಒಡನೆ ಇದಿರೆದ್ದು ತನ್ನ ದಿವ್ಯ ಹಸ್ತಗಳಿಂದ ಆತನ ಪೀಠವನ್ನು ಸವರಿಸಿಟ್ಟು, ಅದರಲ್ಲಿ ಆತನು ಕುಳಿತ ನಂತರ ಮಂದಹಾಸದಿಂದಲೂ, ಮೃದುಮಧುರ ಭಾಷಣದಿಂದಲೂ, ಆನಂದದಾಯಕವಾದ ಕಟಾಕ್ಷವೀಕ್ಷಣದಿಂದಲೂ ಆತನನ್ನು ಉಪಚರಿಸಿ, ತೃಪ್ತಿಗೊಳಿಸುವಳು. ಹೀಗೆ ಅನ್ಯೋನ್ಯಮೈತ್ರಿ - ಪ್ರೀತಿವಿಶ್ವಾಸಗಳಿಂದ ಆ ರಾಜದಂಪತಿಗಳು ಭುವಿಯಲ್ಲಿದ್ದರೂ, ದಿವಿಯಲ್ಲಿದ್ದಂತೆ ಮಹದಾನಂದದಿಂದ ಕಾಲಯಾಪನೆಮಾಡಿದರು.

ಮಹಾರಾಣಿಯ ಗರ್ಭವು ಈ ರೀತಿಯಲ್ಲಿ ಸುರಕ್ಷಿತವಾಗಿ ಒಂಬತ್ತು ತಿಂಗಳ ಕಾಲ ಬೆಳೆಯಿತು. ತಮ್ಮ ರಾಜಪತ್ನಿಗೆ ಪ್ರಸವಕಾಲವು ಸಮೀಪಿಸುತ್ತಿದೆ- ಇನ್ನೇನು ಪುತ್ರೋತ್ಸವವಾಗುವುದು, ಎಂಬ ಆನಂದಮಯ ವಾರ್ತೆಯು ರಾಜ್ಯದಲ್ಲೆಲ್ಲ ವ್ಯಾಪಿಸಿ, ಪ್ರಜೆಗಳು ಪರಮೋತ್ಸಾಹದಿಂದ ಆ ದಿನವನ್ನೇ ಎದುರುನೋಡಿಕೊಂಡಿದ್ದರು. ಹೀಗಿರಲು, ಮುಂದೊಂದು ಶುಭ ದಿನದ ಶುಭ ನಕ್ಷತ್ರದಲ್ಲಿ, ಗ್ರಹಗಳೆಲ್ಲವೂ ತಮ್ಮ ತಮ್ಮ ಉಚ್ಚಸ್ಥಾನಗಳಲ್ಲಿದ್ದು ಪ್ರಶಾಂತತೆಯನ್ನು ಹೊಂದಿದ್ದ ಒಂದು ಶುಭ ಮುಹೂರ್ತದಲ್ಲಿ ಮಹಾರಾಣಿಗೆ ವಿಶೇಷ ಪ್ರಯಾಸವಿಲ್ಲದೆಯೇ, ಸುಖಪ್ರಸವವಾಗಿ, ಒಂದು ಪುರುಷ ಶಿಶು ಜನಿಸಿತು. ಇಂದ್ರ ಪತ್ನಿ ಶಚೀದೇವಿಯು ಜಯಂತನನ್ನು ಪಡೆದಂತೆಯೂ, ಪೂರ್ವದಿಗ್ವನಿತೆಯು ಪೂರ್ಣಚಂದ್ರನನ್ನು ಪಡೆದಂತೆಯೂ ಸುದಕ್ಷಿಣಾದೇವಿಯು ಪುತ್ರರತ್ನವನ್ನು ಪಡೆದು ಬಾಣಂತಿಯಾಗಿ ಶೋಭಿಸಿದಳು. ಆ ಶುಭಸಮಯದಲ್ಲಿ ಮಂದವಾದ ಸುವಾಸಿತವಾದ ಮಾರುತವು ಬೀಸಿತು. ಯಜ್ಞಕುಂಡಗಳಲ್ಲಿದ್ದ ಯಜ್ಞೇಶ್ವರನು ಬಲಪಾರ್ಶ್ವವಾಗಿ ತನ್ನ ಜ್ವಾಲೆಯನ್ನು ಬೆಳಗಿಸಿ ಹವಿರ್ಭಾಗವನ್ನು ಕೈಕೊಂಡನು. ಸಕಲ ವಿಧ ಶುಭಲಕ್ಷಣಗಳೂ ತೋರಿದುವು. ಲೋಕಕ್ಕೆ ಮಹಾತ್ಮರ ಆಗಮನವು ಶುಭಪ್ರದವಾಗದಿದ್ದೀತೆ?

ಪ್ರಸವ ಗೃಹದಲ್ಲಿ ತಾಯಿಯ ಪಕ್ಕದಲ್ಲಿ ಬಂಗಾರದ ಮೊಲದಲ್ಲಿ ಪವ

ಡಿಸಿದ್ದ ಆ ತೇಜಸ್ವೀ ಶಿಶುವಿನ ಕಾಂತಿಯು ಆ ಮನೆಯಲ್ಲಿ ಬೆಳಗುತ್ತಿದ್ದ ದಿವ್ಯ ಜ್ಯೋತಿಗಳ ಕಾಂತಿಯನ್ನೂ ಮೀರಿಸಿತು. ಪ್ರಸವದಿಂದುಂಟಾದ ಆಯಾಸವನ್ನು ನೀಗಿಕೊಂಡು ಮಹಾರಾಣಿಯು ಸ್ವಸ್ಥಚಿತ್ತಳಾಗಿ ಮಲಗಿ ತನ್ನಾ ಮುದ್ದು ಕಂದನನ್ನು ಬಾರಿಬಾರಿಗೂ ನೋಡುತ್ತ, ಬಾಯಿಂದ ಉಚ್ಚ ರಿಸಲಾಗದ - ಒಂದು ಬಗೆಯ ಅಲೌಕಿಕ ಆನಂದವನ್ನು ಹೊಂದಿ - ತನ್ನಂತೆ ಸುಖಿಯಾದ ಸ್ತ್ರೀಯು ಜಗತ್ತಿನಲ್ಲೇ ಯಾರೂ ಇಲ್ಲವೆಂದು ಭಾವಿಸಿದಳು. ಇತ್ತ ಪ್ರಸವ ಗೃಹದಲ್ಲಿ ಸುಖಪ್ರಸವವಾಯಿತೆಂಬ ವಾರ್ತೆಯನ್ನು ರಾಜಸೇವಕರು ಕ್ಷಣಮಾತ್ರದಲ್ಲಿ ರಾಜನಿಗೆ ತಿಳಿಸಿದರು. ತನ್ನ ವಂಶೋದ್ಧಾರಕವಾದ ಪುರುಷಸಂತಾನವಾಯಿತೆಂಬ - ಅಮೃತರಸದಂತೆ ಆನಂದಕರವಾದ ಆ ವಾರ್ತೆಯು ಕಿವಿಗೆ ಬಿದ್ದೊಡನೆಯೇ, ಧಾರಾಳವಾಗಿ ಸುರಿಯತೊಡಗಿದ ಆನಂದಬಾಷ್ಪಗಳನ್ನು ರಾಜನು ತಡೆದುಕೊಳ್ಳಲಶಕ್ತನಾಗಿ, ತನಗೆ ಆ ಆನಂದಮಯವಾರ್ತೆಯನ್ನು ಕೇಳಿಸಿದ ಆ ದೂತನಿಗೆ, ಬಹುಮಾನವಾಗಿ ತನ್ನ ಶ್ವೇತಛತ್ರಿ ಮತ್ತು ಎರಡು ಚಾಮರಗಳ ಹೊರತಾಗಿ ಮತ್ತಾವ ಅಮೌಲ್ಯವಸ್ತುವಿನ ಗಣನೆಯೂ ಇಲ್ಲದೆ, ಮನಬಂದಂತೆ ಬಹುಮಾನ ಮಾಡಿ, ತನ್ನ ಅಮಿತೌದಾರ್ಯವನ್ನು ಪ್ರಕಟಿಸಿದನು.

ಆ ವೇಳೆಗೆ ಗುರುವಸಿಷ್ಠರು ರಾಜಪ್ರಾಸಾದವನ್ನು ಕುರಿತು ಆಗಮಿಸಿದ್ದಾರೆಂಬ ವಾರ್ತೆಯು ತಲುಪಲು, ರಾಜನು ಭಯಭಕ್ತಿಗಳಿಂದಲೆದ್ದು ಅವರನ್ನು ಎದುರುಗೊಂಡು ಆದರಿಸಿ ಉಪಚರಿಸಿ ಉನ್ನತಾಸನದಲ್ಲಿ ಕೂರಿಸಿ- 'ತಮ್ಮ ಮತ್ತು ಸುರಧೇನುವಿನ ಅನುಗ್ರಹದಿಂದ ಸತೀ ಸುದಕ್ಷಿಣಾದೇವಿಯು, ಪುತ್ರರತ್ನವನ್ನು ಪ್ರಸವಿಸಿರುವಳು' ಎಂಬ ಮಹೋತ್ಸಾಹಕರವಾದ ವಾರ್ತೆಯನ್ನು ಅವರಿಗೆ ಅರಿಕೆಮಾಡಿದನು. ಆಗ ಅವರು- 'ರಾಜೇಂದ್ರ ಈ ಶುಭಮುಹೂರ್ತದಲ್ಲೇ ನಿನಗೆ ಪುತ್ರೋತ್ಪನ್ನವಾಗುವುದೆಂಬ ಸಂಗತಿಯನ್ನು ತಿಳಿದೇ ನಾವು ಬಂದೆವು' ಎಂದು ತಿಳಿಸಿ, ಆತನನ್ನು ಶ್ರೇಯೋವಂತನಾಗೆಂದು ಹರಸಿದರು. ತರುವಾಯ ರಾಜನು ಗುರುಗಳ ಆಜ್ಞೆಯಿಂದ ಪುತ್ರನ ಮುಖಾವಲೋಕನ ಮಾಡಬೇಕೆಂಬ ಶಾಸ್ತ್ರವಿಧಿಗನುಸಾರವಾಗಿ, ವಂದಿಮಾಗಧರು ಮಾರ್ಗವನ್ನು ತೋರಿಸಲು, ಪ್ರಸವಗೃಹಕ್ಕೆ ನಡೆದು, ಅಲ್ಲಿ, ಅರಳಿದ ಕಮಲದಂತೆ ವಿಸ್ತಾರವಾದ ನೇತ್ರಗಳಿಂದ, ಪೂರ್ಣಚಂದ್ರ

ನಂತೆ ಕಂಗೊಳಿಸುತ್ತಿದ್ದ ಮಂಗಳಕರವಾದ ಮುಖದಿಂದ ಹೃದಯಾಹ್ಲಾದಕ ನಾದ ತನ್ನ ಆ ಸುಪುತ್ರರತ್ನವನ್ನು ಕಂಡು ಪರಮ ಸಂತೋಷಗೊಂಡನು.



## ಅಧ್ಯಾಯ ೬ 'ಅಶ್ವಮೇಧ ಮಹಾಯಾಗ'

ವಂಶಾಭಿವೃದ್ಧಿಗಾಗಿ ಪುತ್ರಸಂತಾನವನ್ನು ಕೋರಿ ಪಟ್ಟ ರಾಜನ ಪರಿಶ್ರಮವು ಇಂದು ಸಾರ್ಥಕವಾದಂತಾಯಿತು. ವಸಿಷ್ಠಮಹರ್ಷಿಗಳು, ವಂಶದ ಪೂರ್ವಸಂಪ್ರದಾಯವನ್ನನುಸರಿಸಿ, ನಡೆಯಬೇಕಾದ ಜಾತ ಕರ್ಮಾದಿ ಸಕಲ ಶುಭ ಕಾರ್ಯಗಳನ್ನೂ ಸಾಂಗವಾಗಿ ನೆರವೇರಿಸಿದರು. ಪ್ರಸವ ಗೃಹದಲ್ಲಿ ರಾಜಪತ್ನಿಗೆ ಹತ್ತು ರಾತ್ರಿಗಳು ಕಳೆಯಲು ಮಾರನೆಯ ದಿನ ಶುಭಮಂಗಳಸ್ನಾನವಾಗಿ, ನಾಮಕರಣಮಹೋತ್ಸವಕ್ಕಾಗಿ ಸಕಲ ಸನ್ನಾಹಗಳೂ ಸಿದ್ಧವಾದುವು. ಮಹಾರಾಜನು, ಪರಮ ಸಂಭ್ರಮದಿಂದ ವಿದ್ವಾಂಸರನ್ನೂ ದೈವಜ್ಞರನ್ನೂ, ಭಗವದ್ಭಕ್ತರನ್ನೂ ಹಲವು ಬಗೆಗಳಲ್ಲಿ ಆದರಿಸಿ, ದಾನ ದಕ್ಷಿಣೆ ಮೃಷ್ಟಾನ್ನ ಭೋಜನಾದಿಗಳಿಂದ ಸಂತೋಷಪಡಿಸಿ, ಅವರಿಂದ ತನ್ನ ಮಗುವಿಗೆ ದೀರ್ಘಾಯುರಾರೋಗ್ಯ ಭಾಗ್ಯಗಳು ಲಭ್ಯವಾಗುವಂತೆ ಆಶೀರ್ವಾದ ಪಡೆದನು. ವಸಿಷ್ಠ ಮಹರ್ಷಿಗಳ ಆಜ್ಞೆಯಿಂದ ನಾಮಕರಣಸಂಬಂಧವಾದ ಕಾರ್ಯಗಳೆಲ್ಲವೂ ಸಾಂಗವಾಗಿ ನೆರವೇರಿ- ಅಂದಿನ ರಾತ್ರಿಯಲ್ಲಿ ಸುವಾಸಿನೀಯರು, ಮಗುವನ್ನು ಸುವರ್ಣಮಯವಾದ ತೊಟ್ಟಿಲಲ್ಲಿಟ್ಟು ಜೋಗುಳವನ್ನು ಪಾಡಿದರು. ವಸಿಷ್ಠ ಮಹರ್ಷಿಗಳ ಆಜ್ಞೆಯಂತೆ, ಮಗುವಿಗೆ **ರಘು** ಎಂಬ ಮಂಗಳಕರವಾದ ನಾಮಧೇಯವು ಇಡಲ್ಪಟ್ಟಿತು. ಸಕಲರೂ ಸರ್ವ ವಿಧದಿಂದಲೂ ಆನಂದ ಶರಧಿಯಲ್ಲಿ ಓಲಾಡಿದರು.

ದಿಲೀಪರಾಜೇಂದ್ರನು, ಅಪೂರ್ವವಾಗಿ ತನಗೆ ಲಭ್ಯವಾದ ಆ ಪುತ್ರ ರತ್ನವೇ ತನ್ನ ಸರ್ವ ಸೌಭಾಗ್ಯವೂ ಎಂದು ಭಾವಿಸಿ, ವಿಶೇಷ ಜಾಗರೂಕತೆಯಿಂದ ತನ್ನಾ ಮಗುವನ್ನು ಕಾಪಾಡುತ್ತಿದ್ದನು. ವಯಸ್ಸಿಗೆ ಸಹಜವಾದ ಅದರ ಬಾಲಲೀಲಾವಿನೋದಗಳನ್ನು ನೋಡಿ ಅತ್ಯಾನಂದಗೊಳ್ಳುವನು.

ಅಂತಃಪುರದಲ್ಲಿ ಪತ್ನಿಯೊಂದಿಗೆ ಕುಳಿತು ಮುದ್ದಿನ ಮೂಟೆಯೋ ಎಂಬಂತಿದ್ದ ಆ ಸುಕುಮಾರನ ವಿವಿಧ ಲೀಲೆಗಳನ್ನು ನೋಡಿ ತನ್ನಂತಹ ಧನ್ಯನು ಲೋಕದಲ್ಲಿ ಮತ್ತಾರೂ ಇಲ್ಲವೆಂದು ಭಾವಿಸಿದನು. ಮಗುವಿನ ಅಂಬೆಗಾಲು, ತಪ್ಪು ಹೆಜ್ಜೆಗಳು, ತೊದಲು ಮಾತುಗಳು, ಇವುಗಳು ಆ ಮಾತಾಪಿತೃಗಳ ಆನಂದವನ್ನು ಉಕ್ಕಿಸುವುವು. ರಾಜನೂ, ಹರ್ಷಾಧಿಕ್ಯದಿಂದ ಆ ಮಗುವಿನಂತೆಯೇ ಮುದ್ದು ಮುದ್ದು ಮಾತುಗಳಾಡುವನು. ಅದರ ಬೆರಳುಗಳನ್ನು ಹಿಡಿದು ನಡೆಯಿಸುವನು. ಹೀಗೆ ಕ್ರಮಕ್ರಮವಾಗಿ ಶೈಶವಾವಸ್ಥೆಯು ಕಳೆದು ರಘುವಿಗೆ ಬಾಲ್ಯಪ್ರಾಪ್ತವಾಯಿತು. ಬಾಲ್ಯದ ಹಲವು ವಿಧ ಆಟಪಾಟಗಳಲ್ಲಿ ಮಂತ್ರಿ ಪ್ರಧಾನಿಗಳ ಸಮವಯಸ್ಸಿನ ಮಕ್ಕಳೊಂದಿಗೆ ಬೆರೆದು ರಾಜಪುತ್ರನು ತನ್ನ ಮಾತಾಪಿತೃಗಳಿಗೆ ಅತ್ಯಾನಂದವನ್ನುಂಟುಮಾಡಿದನು.

ದಿನದಿನಕ್ಕೆ ತೇಜಸ್ವಿಯಾಗಿ ವೃದ್ಧಿಹೊಂದುತಿದ್ದ ಬಾಲಕನನ್ನು ಕಂಡು ದಿಲೀಪರಾಜೇಂದ್ರನು, ಅವನಿಗೆ ವಸಿಷ್ಠ ಮಹರ್ಷಿಗಳ ಆಜ್ಞೆಯಿಂದ ಅತ್ಯಂತ ವಿಜೃಂಭಣೆಯಿಂದ ಉಪನಯನ ಮಹೋತ್ಸವವನ್ನು ನೆರವೇರಿಸಿ ವಿದ್ಯಾಭ್ಯಾಸಕ್ಕಾಗಿ ಗುರುಕುಲವಾಸಕ್ಕೆ ಕಳುಹಿಸಿದನು. ದಿವ್ಯ ರಾಜಕಳೆಯಿಂದ ಶೋಭಿಸುತ್ತಿದ್ದ ರಘು ರಾಜಕುಮಾರನು, ಉಪನೀತನಾಗಿ ಕ್ಷಾತ್ರತೇಜಸ್ಸಿನೊಂದಿಗೆ ಬ್ರಹ್ಮತೇಜಸ್ಸಿನಿಂದಲೂ ಒಪ್ಪುತ್ತ, ಗುರುಗಳಿಗೆ ವಿಧೇಯನಾಗಿ ಸ್ವಲ್ಪ ಕಾಲದಲ್ಲೇ ಸಕಲ ವಿದ್ಯೆಗಳನ್ನೂ ಸಾಂಗವಾಗಿ ಅಭ್ಯಾಸ ಮಾಡಿ ಗುರುಗಳಿಗೆ ಪರಮ ಸಂತೋಷವನ್ನುಂಟುಮಾಡಿದನು. ಕ್ಷತ್ರಿಯರಿಗೆ ಅತ್ಯಾವಶ್ಯಕವಾದ ಅಸ್ತ್ರಶಸ್ತ್ರಾದಿಗಳ ಪ್ರಯೋಗೋಪಸಂಹಾರಾದಿಗಳಲ್ಲೂ, ರಥ ಅಶ್ವಗಜಾದಿಗಳ ಏರಾಟ, ಅವುಗಳಮೇಲೆ ಕುಳಿತು ಮಾಡುವ ಯುದ್ಧಕಾರ್ಯ ಇವುಗಳಲ್ಲೂ, ಕತ್ತಿ, ಈಟಿ, ಚಕ್ರ, ಗದೆ ಮುಂತಾದುವುಗಳನ್ನು ಉಪಯೋಗಿಸಿ ಶತ್ರುವಿನೊಂದಿಗೆ ಹೋರಾಡುವುದರಲ್ಲೂ ಪ್ರವೀಣನೆನ್ನಿಸಿದನು. ಎಳೆಯದಾದ ಚಿಕ್ಕ ಕರುವು ಬಲಿತು ವೃಷಭತ್ವವನ್ನು ಹೊಂದುವಂತೆಯೂ, ಸಣ್ಣದಾದ ಆನೆಯ ಮರಿಯು ಬೆಳೆದು ಗಜರಾಜನೆನ್ನಿಸುವಂತೆಯೂ, ಚಿಕ್ಕವನಾಗಿದ್ದ ರಘುವು ದಿನದಿನಕ್ಕೆ ಪ್ರವರ್ಧಮಾನನಾಗಿ ಪ್ರಾಯಸಮರ್ಥನಾದುದನ್ನು ಕಂಡು ದಿಲೀಪರಾಜೇಂದ್ರನು, ವಸಿಷ್ಠ ಮಹರ್ಷಿಗಳ ಅನುಜ್ಞೆಯನ್ನು ಪಡೆದು ತನ್ನ ಆ ಮಗನಿಗೆ ಶ್ರೇಷ್ಠರಾಜವಂಶದ

ಲ್ಲೊಬ್ಬ ಅನುರೂಪಳಾದ ಕನ್ಯೆಯನ್ನು ತಂದು ವಿಶೇಷ ವೈಭವದಿಂದ ವಿವಾಹಮಂಗಳ ಕಾರ್ಯವನ್ನು ನೆರವೇರಿಸಿದನು. ಸುದಕ್ಷಿಣಾದೇವಿಯು, ಮನೆಗೆ ಮಂಗಳಸ್ವರೂಪಳಾಗಿಯೂ ಲಕ್ಷ್ಮೀದೇವಿಯಂತೆ ಭಾಗ್ಯದಾಯಕಳಾಗಿಯೂ ಬಂದ ತನ್ನ ಸೊಸೆಯನ್ನು ಬಹು ಪ್ರೇಮವಾತ್ಸಲ್ಯಗಳಿಂದ ಆದರಿಸಿ, ತನ್ನ ಉದರ ಸಂಭೂತಳಾದ ಮಗಳೋ ಎಂಬಂತೆ ಪೋಷಿಸುತ್ತ, ಸಂತೋಷದಿಂದ ಕಾಲಯಾಪನೆ ಮಾಡುತ್ತಿದ್ದಳು.

ದಿಲೀಪರಾಜೇಂದ್ರನು, ಪುತ್ರನಾದ ರಘುವು ಪ್ರಾಯಸಮರ್ಥನೂ, ವಿದ್ಯಾಬುದ್ಧಿಗಳಲ್ಲಿ ಪ್ರಬುದ್ಧನೂ, ರಾಜನೀತಿಯಲ್ಲೂ ವ್ಯವಹಾರವಿಚಾರದಲ್ಲೂ ದಕ್ಷನೂ ಆಗಿದ್ದುದನ್ನು ತಿಳಿದು ಇನ್ನು ರಾಜ್ಯಭಾರವನ್ನು ಆತನ ಭುಜಗಳಮೇಲೆ ಇರಿಸಲು ತಕ್ಕ ಪ್ರಯತ್ನ ನಡೆಯಿಸುವುದು ಆವಶ್ಯಕವೆಂದು ಯೋಚಿಸಿದನು. ಮಂತ್ರಿಸಾಮಂತರೂ, ರಾಜವಂಶದ ಹಿತಚಿಂತಕರಾದ ಗುರುವಸಿಷ್ಠರೇ ಮುಂತಾದ ವೃದ್ಧರೂ, ರಾಜನ ಆ ಸಲಹೆಯು ಸಾಧುವಾದುದೆಂದು ಅಂಗೀಕರಿಸಿದರು. ಒಡನೆ ಒಂದಾನೊಂದು ಶುಭಮುಹೂರ್ತವನ್ನು ನಿಷ್ಕರ್ಷಿಸಿ, ಅದರಲ್ಲಿ ದಿಲೀಪನು ತನ್ನ ಪುತ್ರನಾದ ರಘುರಾಜಪುತ್ರನಿಗೆ ಯೌವರಾಜ್ಯಾಭಿಷೇಕವನ್ನು ನೆರವೇರಿಸಿದನು. ಸಕಲ ಸಾಮಂತ ನರಪತಿಗಳೂ, ಮಂತ್ರಿಮುಖ್ಯರೂ ಕಾಣಿಕೆಗಳನ್ನರ್ಪಿಸಿ ರಾಜಕುಮಾರನನ್ನು ಗೌರವಿಸಿದರು. ವಂದಿಮಾಗಧರು, ಆತನ ಶೌರ್ಯಸಾಹಸಾದಿಗಳನ್ನೂ, ವಿದ್ಯಾವಿನಯಾದಿ ಸದ್ಗುಣಗಳನ್ನೂ ಹೊಗಳಿದರು. ರಾಜಪುತ್ರನು ದಿವ್ಯ ರಾಜತೇಜದಿಂದ ಅಂತರಿಕ್ಷದಲ್ಲಿ ಮಧ್ಯಂಗತನಾದ ಸೂರ್ಯನೋ ಎಂಬಂತೆ ಪ್ರಕಾಶಿಸಿದನು.

ತನ್ನ ಮಗನು ಶೌರ್ಯಸಾಹಸ ಧೈರ್ಯವಿಕ್ರಮಾದಿಗಳಿಂದ ಸಮರ್ಥನಾಗಿದ್ದುದನ್ನು ತಿಳಿದು, ರಾಜನು ಆ ಕಾಲದಲ್ಲೇ, ತನ್ನ ಪಾರತ್ರಿಕಸಾಧನೆಗಾಗಿ ಯಜ್ಞಯಾಗಾದಿಗಳನ್ನು ಮಾಡಬೇಕೆಂದು ಉದ್ಯುಕ್ತನಾದನು. ಯಜ್ಞವಿಧಿಯನ್ನು ಅನುಸರಿಸಿ ಅಶ್ವಮೇಧಯಾಗಮಾಡಲು, ವಸಿಷ್ಠರ ಆಜ್ಞೆಯಂತೆ ಸರಯೂ ನದೀತೀರದಲ್ಲಿ ಭವ್ಯವಾದ ಮಂಟಪಾದಿಗಳನ್ನು ನಿರ್ಮಿಸಿದನು. ಮಂತ್ರಿಸಾಮಂತರು ತಮ್ಮ ಪ್ರಭುವಿನ ಆಜ್ಞೆಯಿಂದ ಸಕಲ ಸಾಮಗ್ರಿಗಳನ್ನೂ ಸಿದ್ಧಗೊಳಿಸಿದರು. ರಘುರಾಜಕುಮಾರನು, ತಂದೆಯು ಪೂಜಿಸಿ ಭೂಪ್ರದಕ್ಷಿಣೆಗೆಂದು ಬಿಟ್ಟ ಯಜ್ಞಾಶ್ವದ ಬೆಂಗಾವಲಿ

ಗಾಗಿ ಸೈನ್ಯ ಸಮೂಹವನ್ನು ಜೊತೆಗೆ ತೆಗೆದುಕೊಂಡು ಪ್ರಯಾಣಮಾಡಿದನು. ಸೂರ್ಯವಂಶ ಶ್ರೇಷ್ಠನಾದ ದಿಲೀಪರಾಜೇಂದ್ರನ ಯಜ್ಞಾಶ್ವವು, ವೀರಾಗ್ರೇಸರನಾದ ರಘುಮಹಾಶಯನಿಂದ ರಕ್ಷಿಸಲ್ಪಡುತ್ತಿದೆಯೆಂಬ ವಾರ್ತೆಯನ್ನು ಕೇಳಿಯೇ ಶತ್ರುರಾಜರು ತಲ್ಲಣಿಸಿ ಪಾದಾಕ್ರಾಂತರಾಗಿ ಕಪ್ಪಕಾಣಿಕೆಗಳನ್ನೊಪ್ಪಿಸುತ್ತಿದ್ದರು. ಹೀಗಾಗಿ, ರಘುವು ಆ ಅಶ್ವರಾಜವನ್ನು ಯಾವ ಆತಂಕವೂ ಇಲ್ಲದಂತೆ ಭೂಪ್ರದಕ್ಷಿಣೆ ಮಾಡಿಸಿ, ತನ್ನ ತಂದೆಯು ದೀಕ್ಷಿತನಾಗಿ ಕುಳಿತಿದ್ದ ಯಜ್ಞಶಾಲೆಗೆ ತಂದೊಪ್ಪಿಸಿ ನಮಸ್ಕರಿಸಿದನು. ಮಾತ್ರವಲ್ಲ- ಶತ್ರುರಾಜರನ್ನು ಜಯಿಸಿ ತಂದ ಅಮೌಲ್ಯ ರತ್ನಬಾಂಡಾರವನ್ನೂ, ಅಗಣಿತ ಧನಕನಕಾದಿಗಳನ್ನೂ ರಾಸಿಹಾಕಿ ಯಜ್ಞದ ವೆಚ್ಚಕ್ಕೆಂದು ಸಮರ್ಪಿಸಿದನು. ದಿಲೀಪರಾಜೇಂದ್ರನು ತನ್ನ ಮಗನ ಸಾಹಸ ಸಂಪನ್ನತೆಯನ್ನೂ ವಿನಯಶೀಲತೆಯನ್ನೂ ಕಂಡು ಪರಮ ಸಂತುಷ್ಟನಾಗಿ ಉಚಿತ ವಚನಗಳಿಂದ ಆತನನ್ನು ಆದರಿಸಿ ಯಜ್ಞವನ್ನು ವಿಧ್ಯುಕ್ತರೀತಿಯಲ್ಲಿ ಆಚರಿಸಿದನು. ಮುಕ್ತಹಸ್ತನಾಗಿ ಮಾಡಿದ ಗೋದಾನಭೂದಾನ ಹಿರಣ್ಯದಾನಾದಿಷೋಡಶ ಮಹಾದಾನಾದಿಗಳಿಂದಲೂ ಭೂಸುರವೃಂದವನ್ನು ಸಂತೋಷಪಡಿಸಿದನು. ಅನ್ನದಾನವು ಸಕಲ ವರ್ಣಗಳವರಿಗೂ ಸಮೃದ್ಧಿಯಾಗಿನಡೆದು ಆ ದೇಶದಲ್ಲಿದ್ದ ಪ್ರಜೆಗಳಿಗೆ ದಾರಿದ್ರ್ಯವೆಂಬ ಪದವು ಮರೆತೇ ಹೋಯಿತು. ದಿಲೀಪರಾಜೇಂದ್ರನು, ಹೀಗೆ ಯಜ್ಞಯಾಗಾದಿಗಳನ್ನು ನೆರವೇರಿಸಲು, ಯಜ್ಞದಲ್ಲಿ ಹವಿರ್ಭಾಗವನ್ನು ಕೊಂಡ ಅಷ್ಟದಿಕ್ಪಾಲಕರು, ಸಕಲ ವಿಧಗಳಿಂದಲೂ, ದೇಶಕ್ಕೆ ಸುಭಿಕ್ಷವನ್ನುಂಟುಮಾಡಿದರು. ದೇಶದಲ್ಲಿ ಕ್ಷಾಮಾದಿ ಈತಿಬಾಧೆಗಳು, ದುರ್ವ್ಯಾಧಿಗಳು, ಕಳ್ಳಕಾಕರಭೀತಿ ಮುಂತಾದ ಕ್ಷುದ್ರ ಕಿರುಕುಳಗಳು ಮುಂತಾದ ಯಾವ ತಾಪತ್ರಯವೂ ಇಲ್ಲದೆ ಪ್ರಜಾವರ್ಗವು ಪರಮ ಸಂತೋಷದಿಂದ ಸ್ವರ್ಗಸುಖವನ್ನು ಅನುಭವ ಮಾಡುತ್ತಿದ್ದರು.

ದಿಲೀಪ ರಾಜೇಂದ್ರನು, ಹೀಗೆ ಒಂದಲ್ಲ-ಎರಡಲ್ಲ, ಹತ್ತಿಪ್ಪತ್ತಲ್ಲ. ತೊಂಬತೊಂಬತ್ತು ಅಶ್ವಮೇಧಯಾಗಗಳನ್ನು ಮಾಡಿ ಲೋಕದಲ್ಲೇ ಅದ್ವಿತೀಯ ಕೀರ್ತಿಯನ್ನು ಸಂಪಾದಿಸಿದನು. ಭೂಲೋಕದಲ್ಲಿ ದೇಹಧಾರಿಯಾಗಿ ದೃಗ್ಗೋಚರನಾಗುವ ಇಂದ್ರನೆಂದರೆ ದಿಲೀಪಮಹಾರಾಜನೇ ಎಂಬ

ವಿಖ್ಯಾತಿಯು ಸರ್ವತ್ರ ವ್ಯಾಪಿಸಿತು. ಹಾಗೆ ತೊಂಬತ್ತೊಂಬತ್ತು ಯಾಗ ಗಳನ್ನು ಮಾಡಿದ ಆ ರಾಜೇಂದ್ರನಿಗೆ ಮತ್ತೊಂದು ಯಾಗವನ್ನೂ ಮಾಡಿ ಇಂದ್ರಪದವಿಗೆ ಅರ್ಹತೆಯನ್ನು ಸಂಪಾದಿಸಬೇಕೆಂದು ಅಪೇಕ್ಷೆಯಾಯಿತು. ರಾಜಾಜ್ಞೆಯಿಂದ ಆ ಯಜ್ಞಕ್ಕೆ ಆವಶ್ಯಕವಾದ ಸಾಮಗ್ರಿಗಳೂ ಶೇಖರಿ ಸಲ್ಪಟ್ಟುವು. ಅಶ್ವವು ಭೂಪ್ರದಕ್ಷಿಣೆಗೆಂದು ಬಿಡಲ್ಪಟ್ಟಿತು. ಎಂದಿನಂತೆ ಅದರ ಬೆಂಗಾವಲಿಗೆಂದು ಯುವರಾಜನಾದ ರಘುವೇ ಸೈನ್ಯದೊಂದಿಗೆ ಪ್ರಯಾಣಮಾಡಿದನು. ರಾಜಧಾನಿಯಿಂದ ಸ್ವಲ್ಪದೂರ ಪ್ರಯಾಣಮಾಡು ವುದರೊಳಗಾಗಿಯೇ ಇಂದ್ರನು ಬಂದು ಆ ತುರಗವನ್ನು ಅಪಹರಿಸಿ, ಆತನ ಮಾರ್ಗವನ್ನು ತಡೆಗಟ್ಟಿದನು. ಆಗ ರಾಜಪುತ್ರನು-'ದೇವರಾಜ, ಯಜ್ಞ ದಲ್ಲಿ ಭಾಗವನ್ನು ಕೈಕೊಳ್ಳುವ ದೇವತೆಗಳಲ್ಲೆಲ್ಲ ನೀನೇ ಶ್ರೇಷ್ಠನೆಂದು ಜ್ಞಾನಿಗಳು ಹೇಳುತ್ತಿರುವರು. ಹೀಗಿರಲು ಪೂಜ್ಯನಾದ ನಮ್ಮ ತಂದೆಯು ಕೈಕೊಂಡ ಈ ಯಜ್ಞಕಾರ್ಯಕ್ಕೆ ಹೀಗೆ ವಿಘ್ನವನ್ನಾಚರಿಸುವುದು ನಿನಗೆ ಉಚಿತವೇ ?' ಎಂದು ಮೂದಲಿಸಿದನು.

ಆಗ ಇಂದ್ರನು, ತನ್ನ ರಥವನ್ನು ತಿರುಗಿಸಿ, ಆ ರಾಜಕುಮಾರನನ್ನು ಕುರಿತು-'ರಾಜಪುತ್ರ ನೀನು ಹೇಳುವ ಮಾತು ವಾಸ್ತವ. ಆದರೆ ಲೋಕ ದಲ್ಲಿ ಕೀರ್ತಿಧನರು, ತಮ್ಮ ಯಶಸ್ಸನ್ನು ರಕ್ಷಿಸಿಕೊಳ್ಳಲು ಪ್ರಯತ್ನಿಸು ವುದು ಕರ್ತವ್ಯವಲ್ಲವೆ? ಶ್ರೀಹರಿಗೆ ಪುರುಷೋತ್ತಮನೆಂಬ ಬಿರುದೂ ತ್ರ್ಯಂ ಬಕನಿಗೆ ಮಹೇಶ್ವರನೆಂಬ ಬಿರುದೂ ಹೇಗೆ ಸಾರ್ಥಕವಾಗಿ ಒಪ್ಪುತ್ತಿರು ವುವೋ ಹಾಗೆಯೇ ನನಗೂ ಸಹ ಶತಕ್ರತು ಎಂಬ ಬಿರುದು ಒಪ್ಪುತ್ತಿದೆ. ಅಂತಹ ನನ್ನಾ ಬಿರುದನ್ನು ನೂರು ಯಾಗಗಳನ್ನು ಮಾಡಿ ನಿನ್ನ ಪಿತೃವು ಗಳಿಸಿಬಿಟ್ಟಲ್ಲಿ, ಅದು ನನ್ನ ಕೀರ್ತಿಗೊಂದು ಕಳಂಕವಲ್ಲವೆ! ಅದನ್ನು ಕಾಪಾ ಡಿಕೊಳ್ಳಬೇಕಾದುದು ನನ್ನ ಕರ್ತವ್ಯವಲ್ಲವೆ?' ಎಂದು ಪ್ರತ್ಯುತ್ತರಕೊ ಟ್ಟನು. ದೇವರಾಜನ ಆ ಪ್ರತ್ಯುತ್ತರವು ರಘುರಾಜಕುಮಾರನನ್ನು ಸಮಾ ಧಾನಗೊಳಿಸಲಿಲ್ಲ.—'ಸಾಮವಾಕ್ಯದಿಂದ ನಮ್ಮ ಅಶ್ವರಾಜವನ್ನು ಬಿಡದಿ ದ್ದಲ್ಲಿ, ಯುದ್ಧಕ್ಕೆ ಸಿದ್ಧನಾಗು' ಎಂದು ನುಡಿದು, ವೀರಾಗ್ರಣಿಯಾದ ಆ ರಾಜಸೂನುವು ನಿಶಿತವಾದ ಬಾಣಗಳನ್ನು ಧನುಸ್ಸಿನಲ್ಲಿ ಸಂಧಿಸಿ, ಆ ವಜ್ರ ಹಸ್ತನಾದ ದೇವೇಂದ್ರನಮೇಲೆ ಪ್ರಯೋಗಿಸಿದನು. ಒಡನೆ ಯುದ್ಧವು ಪ್ರಾರಂಭಿಸಿ, ಪರಸ್ಪರ ಬಾಣಪ್ರಯೋಗಗಳಿಗಾರಂಭವಾಯಿತು. ದೇವ

ರಾಜನೂ, ಕುಪಿತನಾಗಿ ಆ ರಾಜಪುತ್ರನಮೇಲೆ ಬಾಣವರ್ಷಗಳನ್ನು ಸುರಿಸಿದನು. ಯುದ್ಧವು ಘೋರಸ್ವರೂಪವನ್ನು ಹೊಂದಿತು ಶಕ್ರನು ತನ್ನ ತೀಕ್ಷ್ಣಬಾಣಪರಂಪರೆಗಳಿಂದ ರಘುವಿನ ಸೈನ್ಯಸಮೂಹವನ್ನು ಉರುಳಿಸುತ್ತಿರಲು, ಆ ತೇಜಸ್ವೀ ರಾಜಪುತ್ರನು ತನ್ನ ಸೈನ್ಯಕ್ಕೆ ಪ್ರಾಪ್ತವಾದ ದೀನದೆಸೆಯನ್ನು ಸಹಿಸಲಾರದೆ, ಅರ್ಧಚಂದ್ರಾಕಾರದ ನಿಶಿತಬಾಣವೊಂದನ್ನು ಪ್ರಯೋಗಿಸಿ ಇಂದ್ರನ ಕೈಯಲ್ಲಿದ್ದ ಬಾಣದ ನಾರಿಯನ್ನು ಕತ್ತರಿಸಿಬಿಟ್ಟನು. ಪರ್ವತಗಳ ಪಕ್ಷಗಳನ್ನೇ ಭೇದಿಸಿದ ವಜ್ರಹಸ್ತನಾದ ತನ್ನ ಧನುಸ್ಸಿನ ಶಿಂಜಿನಿಯು ಭೇದಿಸಲ್ಪಟ್ಟುದನ್ನು ಕಂಡು ದೇವರಾಜನು ವಿಶೇಷ ಕೋಪಗೊಂಡು, ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ತೀಕ್ಷ್ಣವಾದ ಬಾಣವೊಂದನ್ನು ಲಕ್ಷ್ಯಪೂರ್ವಕವಾಗಿ ಪ್ರಯೋಗಿಸಲು ಅದು ರಘುವಿನ ಎದೆಗೆ ತಾಗಿ, ಆ ರಾಜಪುತ್ರನು ಮೂರ್ಛೆಗೊಂಡು ಬಿದ್ದನು. ತನ್ನ ಶತ್ರುವು ಧರೆಗುರುಳಿದನು, ಇನ್ನು ಹೊರಡಬಹುದು ಎಂದು ಇಂದ್ರನು ಯೋಚಿಸುತ್ತಿರುವಷ್ಟರಲ್ಲಿ, ರಘುವು ಒಂದು ನಿಮಿಷದೊಳಗಾಗಿ ಪುನಃ ಎಚ್ಚತ್ತು, ಸಿಂಹನಾದಮಾಡಿ ಆಯುಧಹಸ್ತನಾಗಿ ಇಂದ್ರನಿಗೆ ಎದುರಾದನು. ತಮ್ಮ ಯುವರಾಜನು ಮೂರ್ಛೆತಿಳಿದು ಪುನಃ ಯುದ್ಧಸನ್ನದ್ಧನಾದುದು ಸೈನ್ಯಸಮೂಹಕ್ಕೆಲ್ಲ ಪರಮೋತ್ಸಾಹವನ್ನುಂಟುಮಾಡಿತು.

ಸಾಕ್ಷಾತ್ ತ್ರಿಲೋಕಾಧಿಪತಿಯೂ ದೇವರಾಜನೂ ವಜ್ರಾಯುಧಹಸ್ತನೂ ಆದ ತನ್ನೆದುರಿಗೆ ಧೀರನಾಗಿ ಅಷ್ಟು ಕಾಲನಿಂತು, ಅಸ್ತ್ರಪ್ರತ್ಯಸ್ತ್ರಗಳಿಂದ ಭಯಂಕರಯುದ್ಧಮಾಡಿ, ಪೌರುಷ ಪ್ರಕಾಶಮಾಡಿದ ಆ ಧೀರ ರಾಜಪುತ್ರನನ್ನು ಕಂಡು, ದೇವೇಂದ್ರನು ಮೆಚ್ಚಿಕೊಂಡನು. ಮಹನೀಯ ವ್ಯಕ್ತಿಗಳು ಯಾವಾಗಲೂ ಗುಣಗ್ರಹಣ ಪರಾಯಣರಾಗಿಯೇ ಇರುವರಲ್ಲವೆ! ಇಂದ್ರನು, ಒಡನೆ ಯುದ್ಧವನ್ನು ಸಾಕುಮಾಡಿ, ರಾಜಪುತ್ರನನ್ನು ಕುರಿತು—'ರಾಜನಂದನಾ, ನಿನ್ನ ಪರಾಕ್ರಮಕ್ಕೆ ಮೆಚ್ಚಿದೆನು. ನನ್ನೆದುರಿಗೆ ನಿನ್ನಂತೆ ಧೀರರಾಗಿ ನಿಂತು ಯುದ್ಧಮಾಡಿದ ಪುರುಷಶ್ರೇಷ್ಠನಾವನನ್ನೂ ಕಾಣೆ! ಪರ್ವತಗಳ ಪಕ್ಷಗಳನ್ನು ಭೇದಿಸುವ ನನ್ನ ವಜ್ರಾಯುಧವು ಮತ್ತೆಲ್ಲೂ ಬಂಜೆಯಾದುದಿಲ್ಲ. ನೀನು ವೀರಾಗ್ರೇಸರನೆನ್ನಿಸಿದೆ. ನಿನ್ನ ವಿಷಯದಲ್ಲಿ ಅತಿಶಯ ತೃಪ್ತಿಗೊಂಡಿಪ್ಪೇನೆ. ಯಜ್ಞಾಶ್ವವೊಂದನ್ನು ಬಿಟ್ಟು,

ನಿನಗೆ ಇಷ್ಟವಾದ ಮತ್ತಾವುದಾದರೂ ವರವನ್ನು ಬೇಡು. ಕೊಡಲು ಸಿದ್ಧನಿದ್ದೇನೆ' ಎಂದು ನುಡಿದನು.

ತನ್ನ ವಿಷಯದಲ್ಲಿ ಶತ್ರುಭಾವವನ್ನು ತ್ಯಜಿಸಿ ಪ್ರಿಯವಾರ್ತೆಯನ್ನು ನುಡಿಯುತ್ತಿದ್ದ ದೇವೇಂದ್ರನನ್ನು ಕುರಿತು ರಾಜನಂದನನು -' ವೃತ್ರಾರಿಯೇ, ನೀನು ನನ್ನ ವಿಷಯದಲ್ಲಿ ಸುಪ್ರೀತನಾಗಿದ್ದ ಪಕ್ಷದಲ್ಲಿ-ಈ ಯಜ್ಞಾಶ್ವವನ್ನು ಹೊಂದಿ ಯಜ್ಞಮಾಡದಿದ್ದರೂ ನಮ್ಮ ತಂದೆಗೆ ಅಶ್ವಮೇಧ ಮಹಾಯಾಗದ ಸಂಪೂರ್ಣ ಫಲವು ಪ್ರಾಪ್ತವಾಗುವಂತೆ ವರಪ್ರದಾನ ಮಾಡು. ಈ ಸಂಗತಿಯನ್ನು ನಾನು ಹೋಗಿ ತಿಳಿಸಲು ಬಹು ಸಾವಕಾಶವಾಗುವುದರಿಂದ ನಿನ್ನ ದೂತರ ಮೂಲಕ ಈಗಲೇ ನಮ್ಮ ತಂದೆಗೆ ವರ್ತಮಾನವನ್ನು ಕಳುಹಿಸು' ಎಂದು ನುಡಿದನು. ದೇವರಾಜನು ಆ ಸಲಹೆಗೆ ಒಪ್ಪಿ, ತನ್ನ ಸಾರಥಿಯಾದ ಮಾತಲಿಯೊಂದಿಗೆ ಆ ಸಂಗತಿಯನ್ನೆಲ್ಲ, ಯಾಗ ಶಾಲೆಯಲ್ಲಿದ್ದ ದಿಲೀಪಮಹಾರಾಜನಿಗೆ ಹೇಳಿಕಳುಹಿಸಿದನು. ರಾಜಪುತ್ರನೂ, ದೇವರಾಜನ ಅಜ್ಞೆ ಪಡೆದು, ತನ್ನ ತಂದೆಯನ್ನು ಕಾಣಲು ಆತುರನಾಗಿ ರಾಜಧಾನಿಯ ಕಡೆಗೆ ಪ್ರಯಾಣ ಮಾಡಿದನು.

## ಉ ಪ ಸ ಂ ಹಾ ರ

ಯಜ್ಞಾಶ್ವದ ಬೆಂಗಾವಲಿಗೆಂದು ಪ್ರಯಾಣ ಮಾಡಿದ ತನ್ನ ಮಗನು ಅಷ್ಟು ದಿನಗಳಾದರೂ ಹಿಂದಿರುಗಿ ಬರಲಿಲ್ಲವಲ್ಲ ಎಂದು ಚಿಂತಿಸುತ್ತಿದ್ದ ರಾಜನ ಬಳಿಗೆ, ಮಹೇಂದ್ರ ಸಾರಥಿಯಾದ ಮಾತಲಿಯು ಬಂದು, ದೇವರಾಜನು ತಿಳಿಸಿದ ಸಮಸ್ತ ವೃತ್ತಾಂತವನ್ನೂ ತಿಳಿಸಿದನು. ತನ್ನ ಪುತ್ರನು ದೇವೇಂದ್ರನೊಂದಿಗೆ ಖಾಡಾ ಖಾಡಿ ಯುದ್ಧಮಾಡಿ, ಆತನ ಮೆಚ್ಚುಗೆಗೆ ಪಾತ್ರನಾಗಿ- ಅಮೌಲ್ಯ ವರವನ್ನೂ ಪಡೆದನೆಂಬ ಅಮೃತೋಪಮವಾದ ಆ ವಾರ್ತೆಯು ದಿಲೀಪರಾಜನಿಗೆ ಅತಿಶಯ ಆನಂದವನ್ನೂ ಆಶ್ಚರ್ಯವನ್ನೂ ಉಂಟುಮಾಡಿತು. ತ್ರಿಲೋಕವೀರನಾದ ಅಂತಹ ಸುಕುಮಾರನನ್ನು ಪೆತ್ತ ತಾನು ಧನ್ಯನೆಂದುಕೊಂಡನು. ಸುದಕ್ಷಿಣಾದೇವಿಯು ಗರ್ಭಭಾರವನ್ನು ಸಹಿಸಿ, ಅಸಹನೀಯವಾದ ಪ್ರಸವವೇದನೆಯನ್ನು ಅನುಭವಿಸಿ ಮಗನನ್ನು ಹೆತ್ತುದು ಸಾರ್ಥಕವಾಯಿತೆಂದು ಸಮಾಧಾನಗೊಂಡನು. ತನ್ನಾ ಪುತ್ರನ ಶೌರ್ಯಪರಾಕ್ರಮಾದಿಗಳಿಂದ ಸೂರ್ಯವಂಶವು ಅಂದು ಧನ್ಯತೆಯನ್ನು ಹೊಂದಿತೆಂದು ಹೆಮ್ಮೆಗೊಂಡನು. ಆ ವೇಳೆಗೆ, ಸೈನ್ಯಸ

ಮೇತನಾಗಿ ವಿಜಯಿಯಾಗಿ ಬಂದ ರಘುರಾಜಕುಮಾರನು ಭಕ್ತಿಭರಿತನಾಗಿ ನಮಸ್ಕರಿಸಲು, ರಾಜೇಂದ್ರನು, ತನ್ನ ಆ ಮಗನನ್ನು ಪರಮಪ್ರೇಮವಿಶ್ವಾಸಗಳಿಂದ ಆಲಂಗಿಸಿ, ಶಿರಸ್ಸನ್ನಾಘ್ರಾಣಿಸಿ ಶ್ರೇಯೋವಂತನಾಗೆಂದು ಆಶೀರ್ವದಿಸಿ, ದೇವರಾಜನು ಮಾತಲಿಯೊಂದಿಗೆ ಹೇಳಿ ಕಳುಹಿಸಿದ ಸಂದೇಶದ ಶುಭಕರವಾರ್ತೆಯನ್ನು ಆತನಿಗೆ ತಿಳಿಸಿದನು. ಮುಂದೆ ಅರ್ಧವಾಗಿ ನಿಂತಿದ್ದ ಯಜ್ಞಕಾರ್ಯವು, ಗುರು ವಸಿಷ್ಠರ ಆಜ್ಞೆಯಂತೆ ಯೋಗ್ಯರೀತಿಯಿಂದ ಸಮಾಪ್ತಗೊಳಿಸಲ್ಪಟ್ಟಿತು. ರಾಜನು ನೆರೆದ ಸಮಸ್ತ ಜನರನ್ನೂ, ವಿವಿಧ ದಾನದಕ್ಷಿಣೆಗಳು, ಮೃಷ್ಟಾನ್ನಭೋಜನಾದಿಗಳು ಉಡುಗೆರೆ ಉತ್ಸವಗಳು ಮುಂತಾದುವುಗಳಿಂದ ಆದರಿಸಿ, ಯಜ್ಞಾಂತ ಕ್ರಿಯೆಯಾದ ಅವಭೃತ ಸ್ನಾನಮಾಡಿ, ದೇಹದಾರಿಯಾಗಿದ್ದರೂ ಧರೆಯಲ್ಲೀ - 'ಶತಕ್ರತು' ಎಂಬ ಮಹತ್ವದ ಕೀರ್ತಿಯನ್ನು ಗಳಿಸಿಕೊಂಡನು. ಮುಂದೆ ದಿಲೀಪರಾಜೇಂದ್ರನು, ತನ್ನ ಮಂತ್ರಿಸಾಮಂತರ ಮತ್ತು ಪ್ರಜಾಪ್ರಮುಖರ ಇಚ್ಛಾನುಸಾರ ರಘುಮಹಾರಾಜನಿಗೆ ಪಟ್ಟಾಭಿಷೇಕ ಮಾಡಿ ಶ್ವೇತಚ್ಛತ್ರ ಮುದ್ರೆಯುಂಗುರಗಳನ್ನೊಪ್ಪಿಸಿ ರಾಜಕೋಶಾದಿಗಳ ಸಂಪೂರ್ಣ ಅಧಿಕಾರವನ್ನೂ ವಹಿಸಿ, ತಮ್ಮ ಆ ಸುಕುಮಾರನನ್ನು ಲೋಕದ ಸಕಲ ಸಾಮಂತರಾಜರೂ ಪಾದಾಕ್ರಾಂತರಾಗಿ ಓಲಗಿಸುತ್ತಿರಲು, ನೋಡಿ ಸಂತುಷ್ಟನಾಗಿ ರಾಣಿ ಸುದಕ್ಷಿಣಾ ದೇವಿಯೊಂದಿಗೆ ತಪೋವನವನ್ನು ಕುರಿತು ಪ್ರಯಾಣಮಾಡಿದನು.

ಸೂರ್ಯವಂಶದಲ್ಲಿ ಉದ್ಭವಿಸಿದ ನರಶ್ರೇಷ್ಠರೆಲ್ಲರೂ—

"ಶೈಶವೇಭ್ಯಸ್ತ ವಿದ್ಯಾನಾಂ । ಯೌವನೇ ವಿಷಯೈಷಿಣಾಂ ॥
ವಾರ್ಧಿಕೇ ಮುನಿವೃತ್ತೀನಾಂ । ಯೋಗೇನಾಂತೇತನುತ್ಯಜಾಂ ॥"

ಎಂದು ನುಡಿದ ಕವಿಕುಲಗುರು ಶ್ರೀ ಕಾಳಿದಾಸನ ವಾಕ್ಯದಂತೆ ಸಾರ್ಥಕ ಜೀವಿಗಳಾದವರು. ದಿಲೀಪನರೇಂದ್ರನ ಗುರುಭಕ್ತಿಯೂ, ಶ್ರದ್ಧೆಯೂ ಧಾರ್ಮಿಕಜೀವನವೂ, ಪ್ರಜೆಗಳ ಸಂಪೂರ್ಣ ಪ್ರೀತಿವಿಶ್ವಾಸಗಳಿಗೆ ಪಾತ್ರನಾಗುವಂತೆ ಅವರ ಕ್ಷೇಮವನ್ನೇ ಮುಖ್ಯ ಗುರಿಯನ್ನಾಗಿಟ್ಟುಕೊಂಡು ರಾಜ್ಯಭಾರಮಾಡಿದ ಆತನ ರಾಜನೀತಿಯೂ, ಲೋಕಕ್ಕೇ ಬೋಧಕವೂ ಸುಖಪ್ರದವೂ ಆದುವುಗಳು. ಈ ಸದ್ಗುಣಗಳು, ಕನ್ನಡಿಗರಿಗೆ ಸಕಲ ಭಾಗದಿಂದಲೂ ಆದರ್ಶವಾಗಿದ್ದು ಅವರನ್ನು ಲೋಕದಲ್ಲಿ ಸಾರ್ಥಕಜೀವಿಗಳೆನ್ನಿಸಲು ಸಾಧಕವಾಗಲಿ. ತಥಾಸ್ತು.

|| ಶ್ರೀರಾಮಸಹಾಯಂ ||

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸ ಪುಸ್ತಕಾವಳಿ)

**ಮುನ್ನುಡಿ:—**

ಸಾಧ್ವೀಮಣಿ ಸುಭದ್ರಾದೇವಿಯು ಯದುವಂಶದಲ್ಲಿ ಉದ್ಭವಿಸಿದ ಸ್ತ್ರೀ ರತ್ನವು. ಈಕೆಯು ಮೂಲಕವೇ ಯದುವಂಶಕ್ಕೂ ಪಾಂಡುವಂಶಕ್ಕೂ ನಿಕಟಸಂಬಂಧವೇರ್ಪಟ್ಟಿದು. ಈ ಸಂಬಂಧವೇರ್ಪಡದಿದ್ದಲ್ಲಿ, ಶ್ರೀ ಕೃಷ್ಣನು ಪಾಂಡವರ ವಿಷಯದಲ್ಲಿ ಅಷ್ಟುಮಟ್ಟಿನ ಪಕ್ಷಪಾತವನ್ನು ತೋರಿಸಿ, ಅವರ ಕ್ಷೇಮಕ್ಕಾಗಿಯೂ, ಉನ್ನತಿಗಾಗಿಯೂ ಅಷ್ಟುಮಟ್ಟಿಗೆ ಶ್ರಮಿಸುತ್ತಿದ್ದನೆ ಎಂದು ಸಂದೇಹಿಸಬೇಕಾಗಿದೆ. ಪಾಂಡುಪುತ್ರರು, ಸತ್ಯಸಂಧರು ಧೀರೋದಾರ ಗುಣಯುತರಾದ ಕ್ಷತ್ರಿಯಶ್ರೇಷ್ಠರು ಎಂಬುದನ್ನು ಕಂಡು ಹಿಡಿದ ಶ್ರೀಕೃಷ್ಣನು ಗುಣಗ್ರಹಣಶೀಲನಾಗಿ, ಅವರ ಮೂಲಕವೇ ತಾನು ಇಚ್ಛಿಸಿದ್ದ ದುಷ್ಟಶಿಕ್ಷಣೆ-ಶಿಷ್ಟರಕ್ಷಣೆ ಧರ್ಮಸ್ಥಾಪನೆ ಮುಂತಾದ ಮಹತ್ಕಾರ್ಯಗಳನ್ನು ಸಾಧಿಸುವ ಮನಸ್ಸುಮಾಡಿದನು. ತನ್ನ ಈ ಉದ್ದೇಶಕ್ಕೆ ಬೆಂಬಲ ಕೊಡಲು ಕೇವಲ ಸ್ನೇಹಕ್ಕಿಂತಲೂ ಬಂಧುಪ್ರೇಮದ ಸಹಾಯವಿರತಕ್ಕದು ಹೆಚ್ಚು ಸಾಧಕವೆಂದು ಎಣಿಸಿದನು. ಆದುದರಿಂದಲೇ, ತಮ್ಮಣ್ಣನಾದಬಲರಾಮನ ಇಷ್ಟಾನುಸಾರವಾಗಿ ದುರ್ಯೋಧನನೊಂದಿಗೇ ಆಗಬೇಕಾಗಿದ್ದ ತನ್ನ ತಂಗಿ ಸುಭದ್ರಾದೇವಿಯ ವಿವಾಹವು ಪಾಂಡವಮಧ್ಯನೂ ವೀರಾಗ್ರೇಸರನೂ ಆದ ಪಾರ್ಥನೊಂದಿಗೆ ನಡೆಯಲು ಆವಶ್ಯಕವೆನ್ನಿಸಿದ ಉಪಾಯಗಳನ್ನೆಲ್ಲ ಮಾಡಿದನು.

ಸುಭದ್ರಾದೇವಿಯು ವೀರಪತ್ನಿಯೂ ವೀರಮಾತೆಯೂ ಆದ ಕ್ಷತ್ರಿಯರಮಣಿ. '**ಮೂರುಲೋಕದಗಂಡ**' ನೆಂದು ಹೊಗಳಿಸಿಕೊಂಡ, ಗಾಂಡೀವ ಹಸ್ತನಾದ ಕಿರೀಟಿಯು ಆಕೆಯ ಪತಿ. ಭಾರತಯುದ್ಧರಂಗದಲ್ಲಿ ಅರಿಸೈನಿಕರ-ಕೌರವಪುತ್ರರ ರುಂಡಗಳನ್ನು ಚೆಂಡುಗಳಂತೆ ಎಗರಿಸಿ ರಣನಾಟಕವಾಡಿದ ಅಖಂಡಪ್ರತಾಪಿಯಾದ ಅಭಿಮನ್ಯುವು ಆಕೆಯ ಪುತ್ರ.

ಆಕೆಯು ಧೀರಳಾದ ಕ್ಷತ್ರಿಯ ಕನ್ಯೆಯಂತೆ ಆಚರಿಸಿ, ಅನುರೂಪನಾದ ತನ್ನ ಪತಿಯನ್ನು ವರಿಸಿಕೊಂಡಳು. ಚಿಕ್ಕವಯಸ್ಸಿನ ಲೋಕೈಕವೀರನಾದ ಪುತ್ರನನ್ನು ಕಳೆದುಕೊಂಡು ದುಃಖಕ್ಕೆ ಗುರಿಯಾದಳು. ಪಾಂಡವರ ಪಟ್ಟದರಸಿಯು ದ್ರೌಪದಿಯೇ ಆದರೂ, ಅವರ ವಂಶಾಂಕುರವು, ಸುಭದ್ರಾದೇವಿಯ ಸಂತಾನದ ಮೂಲಕವೇ ಆಗಬೇಕೆಂದು ವಿಧಿನಿಯಮವಿದ್ದಂತೆ ತೋರುತ್ತದೆ. - ತನ್ನ ಪತಿಗೆ ದುರ್ದೈವವಶವಾಗಿ ಪ್ರಾಪ್ತವಾದ ವನವಾಸ ಅಜ್ಞಾತವಾಸಾದಿ ಕಷ್ಟಕಾಲಗಳಲ್ಲಿ ಸಾಧ್ವೀಮಣಿ ಸುಭದ್ರಾದೇವಿಯು ಪುತ್ರ ಕ್ಷೇಮಚಿಂತಕಳಾಗಿ ಪತಿಯ ಅಜ್ಞಾನುಸಾರ ತೌರುಮನೆಯಲ್ಲಿದ್ದು ಕಾಲಯಾಪನೆಮಾಡಿದಳು.

ಆಧ್ಯಾತ್ಮಿಕ ಆಧಿದೈವಿಕ ಆಧಿಭೌತಿಕ ಕಷ್ಟಗಳೆಂಬುವು ಮಹನೀಯರು-ಸಾಮಾನ್ಯರೆನ್ನದೆ ಲೋಕದಲ್ಲಿ ದೇಹಧಾರಣೆ ಮಾಡಿದ ಸರ್ವರಿಗೂ ಒಂದಲ್ಲ ಒಂದು ಕಾಲದಲ್ಲಿ ಪ್ರಾಪ್ತವಾಗುವುವು. ಆದರೆ ಅಂತಹ ಕಷ್ಟಕಾಲದಲ್ಲಿ ತಮ್ಮ ಧೈರ್ಯಸಾಹಸಗಳು, ಕ್ಷಮೆ, ಸತ್ಯ-ಧರ್ಮ ಮಾರ್ಗಾನವರ್ತನೆ ಮುಂತಾದುವುಗಳನ್ನು ಬಿಡದೆ ಮಹನೀಯ ವ್ಯಕ್ತಿಗಳು, ತಮ್ಮ ದಾರ್ಢ್ಯವನ್ನು ಪ್ರಕಟಿಸಿ ಆಚಂದ್ರಾರ್ಕವಾದ ಕೀರ್ತಿಚಂದ್ರಿಕೆಯನ್ನು ಬೆಳಗಿಸುವರು ಸಾಮಾನ್ಯರು ಕಷ್ಟಗಳಿಗಂಜಿ, ಕ್ಷುದ್ರಮಾರ್ಗಗಳಲ್ಲಿ ನಡೆದು ವ್ಯರ್ಥಜೀವಿಗಳೆನ್ನಿಸುವರು.

ಸುಬೋಧ ಕುಸುಮಾಂಜಲಿ ಗ್ರಂಥಮಾಲೆಯು, ಮಹನೀಯವ್ಯಕ್ತಿಗಳ ಜೀವಿತಾದರ್ಶಗಳ ಪ್ರಕಟನೆಗಾಗಿಯೇ ಮೀಸಲಾಗಿರುವುದು. ಕರ್ಣಾಟಕ ಭಾಷಾಬಾಂಧವರು, ಸ್ವಹಸ್ತ ಪರಹಸ್ತ ಇದನ್ನು ಪ್ರೋತ್ಸಾಹಿಸಿ-ಇದರ ಮೂಲಕ ಭಾಷಾಸೇವಾಕಾರ್ಯವು ಸಾರೋದ್ಧಾರವಾಗಿ ನಡೆದು ಬರಲು ಅವಕಾಶ ಕಲ್ಪಿಸಬೇಕೆಂದು ಪ್ರಾರ್ಥನೆ.

ಇತಿ ಸುಜನ ವಿಧೇಯ

ಬೆಂಗಳೂರು ನಗರ
ತಾ. ೩೧—೧೨—೩೨

॥ ಶ್ರೀ ರಾಮಸಹಾಯಂ ॥

ವೀರಮಾತಾ

# ಸುಭದ್ರಾದೇವಿ

**ಅಧ್ಯಾಯ ೧** **'ವರನಾರು?'**

ನಮ್ಮ ಮಾತೃಭೂಮಿ ಭಾರತದೇಶವು ವೀರಶೂರರ ನೆಲೆವೀಡೆನ್ನಿಸಿಕೊಂಡು ಮೆರೆದುದು. ಭಾರತಭೂಮಿಯ ವೀರರು, ಕೇವಲ ಈ ಭಾರತ ಭೂಮಿಯಷ್ಟು ಪ್ರದೇಶಗಳನ್ನು ಮಾತ್ರವಲ್ಲ - ಸಪ್ತಸಾಗರಗಳಿಂದ ಸುತ್ತುವರಿಯಲ್ಪಟ್ಟ ಆದ್ಯಂತ ಪೃಥ್ವಿಯನ್ನೇ ವಶಮಾಡಿಕೊಂಡು ಆಳಿದರೆಂದು ಈ ದೇಶದ ಪೂರ್ವಪುರಾಣಗಳು - ಚರಿತ್ರೆಗಳು ಹೇಳುತ್ತವೆ. ಅಷ್ಟೇ ಅಲ್ಲ - ಲೋಕೈಕವೀರರಾದ ಇಲ್ಲಿಯ ನರೇಶ್ವರರು, ದೇವಲೋಕಕ್ಕೂ ಪ್ರಯಾಣಮಾಡಿ, ದೇವರಾಜನಿಗೆ ಶತ್ರುಗಳಾದ ದಾನವಾದಿಗಳನ್ನು ಜಯಿಸಿ ಸನ್ಮಾನಿತರಾಗುತ್ತಿದ್ದರೆಂಬ ಉಲ್ಲೇಖಗಳೂ ಆ ಪುರಾಣೇತಿಹಾಸಾದಿಗಳಲ್ಲುಂಟು. ದೇಶವು ಅಂತಹ ಉನ್ನತಾವಸ್ಥೆಯಲ್ಲಿದ್ದಾಗ ಅದು ಸ್ವತಂತ್ರವಾಗಿದ್ದಿತು. ಐಶ್ವರ್ಯಸಂಪನ್ನವಾಗಿದ್ದಿತು. ಪರರಿಂದ ಸಕಲ ವಿಚಾರಗಳಲ್ಲೂ ಶ್ರೇಷ್ಠವಾದುದೆಂದು ಗೌರವಿಸಲ್ಪಡುತ್ತಿದ್ದಿತು.—ಅಲ್ಲಲ್ಲ, ಅದನ್ನು ಹಾಗೆ ಹೇಳಲಾಗದು. ಅದು ಉನ್ನತಾವಸ್ಥೆಯಲ್ಲಿದ್ದಾಗ ಸ್ವತಂತ್ರವಾಗಿದ್ದಿತು, ಎಂದು ಹೇಳುವುದಕ್ಕಿಂತಲೂ, ಅದು ಸ್ವಾತಂತ್ರ್ಯವನ್ನುಂಟಾಗಿ ಇದ್ದ ಕಾಲದಲ್ಲಿ, ಮಹೋನ್ನತಸ್ಥಿತಿಯಲ್ಲಿ-ಮಹತ್ಸೌಭಾಗ್ಯ ಸಂಪನ್ನವಾಗಿ, ಸಕಲರ ಗೌರವಪ್ರತಿಷ್ಠೆಗಳಿಗೂ ಪಾತ್ರವಾಗಿ ಇದ್ದಿತು, ಎಂದೆನ್ನುವುದು ಹೆಚ್ಚು ಸಮಂಜಸವಾಗಿದೆ.

ದ್ವಾಪರಯುಗದ ಅಂತ್ಯಭಾಗದಲ್ಲಿ, ಹಸ್ತಿನಾವತಿಯಲ್ಲಿ ಕುರುಪಾಂಡವಂಶಗಳು, ಬೆಳೆದುಪ್ರಬಲಿಸಿದಂತೆಯೇ ದ್ವಾರಕೆಯಲ್ಲಿ ಯಾದವವಂಶವೂ

ಬೆಳೆದು ಕಳೆಗೊಂಡಿತು. ವೃಷ್ಣಿ ಅಂಧಕ ಭೋಜ ಮೊದಲಾದ ಕ್ಷತ್ರಿಯ ವಂಶಗಳು ಮಥುರಾನಗರಿಯಲ್ಲೂ ಅದಕ್ಕೆ ಸಮೀಪದ ದೇಶಗಳಲ್ಲೂ ಹಬ್ಬಿದ್ದುವು. ಕುರುಪಾಂಚಾಲ ವಂಶಗಳಲ್ಲಿ ಸಂಬಂಧ ಬಾಂಧವ್ಯಗಳು ಬೆಳೆದಂತೆಯೇ, ವೃಷ್ಣಿ ಅಂಧಕ ಭೋಜ ಯಾದವ ವಂಶಗಳಲ್ಲೂ ವೈವಾಹಿಕ ಸಂಬಂಧಗಳು ನಡೆದುವು. ಭೋಜವಂಶದ ವಸುದೇವನು ವೃಷ್ಣಿವಂಶದ ದೇವಕೀದೇವಿಯನ್ನೂ,ರೋಹಿಣೀದೇವಿಯೆಂಬ ಮತ್ತೊಬ್ಬ ಕ್ಷತ್ರಿಯ ಕನ್ಯೆಯನ್ನೂ ವಿವಾಹವಾದನು. ದೇವಕೀದೇವಿಯ ವಿವಾಹಕಾಲದಲ್ಲಿ-'ಈಕೆಯ ಎಂಟನೇ ಗರ್ಭವೇ ನಿನಗೆ ಮೃತ್ಯುವಾಗುವುದು' ಎಂದು ನುಡಿದ ಅಶರೀರ ವಾಣಿಯ ವಾಕ್ಯವೊಂದನ್ನು ಕೇಳಿ, ಆಕೆಯ ಅಣ್ಣನಾದ ದುರುಳ ಕಂಸನು ಇನ್ನೂ ಕಂಕಣವಿಸರ್ಜನೆಯನ್ನೂ ಮಾಡಿರದಿದ್ದ ಆ ನೂತನ ದಂಪತಿಗಳನ್ನು ನಿರ್ಬಂಧಿಸಿ ಸೆರೆಮನೆಯಲ್ಲಿಟ್ಟನು. ಆದರೇನು ? ದೈವನಿಯಾಮಕವನ್ನು ತಪ್ಪಿಸುವರಾರು? ಆ ಸಾಧು ದಂಪತಿಗಳು, ಅವನು ಪಡಿಸಿದ ಸಕಲ ಹಿಂಸೆಗಳನ್ನೂ ಸಹಿಸಿಕೊಂಡು, ದೈವವಾಕ್ಯದಲ್ಲಿ ವಿಶ್ವಾಸವಿಟ್ಟು ಕಾಲಯಾಪನೆ ಮಾಡಿಕೊಂಡಿದ್ದರು. ಕಾಲಕ್ರಮದಲ್ಲಿ ಅವರ ಉದರದಲ್ಲಿ ಒಬ್ಬರಾದಮೇಲೊಬ್ಬರಂತೆ ಆರು ಮಂದಿ ಮಕ್ಕಳು ಜನಿಸಿದರು. ದುರುಳ ಕಂಸನು, ಆ ಶಿಶುಗಳನ್ನೂ ತನ್ನ ಪ್ರಾಣಾಪಹರಣಮಾಡುವ ಶತ್ರುಗಳಂತೆಯೇ ಎಣಿಸಿ, ಕತ್ತಿಯ ಮೊನೆಯಿಂದಿರಿದು,-ಆ ಹಸುಕಂದಗಳನ್ನು ಸಂಹರಿಸಿದನು ತರುವಾಯ ದೇವಕಿಯ ಏಳನೆಯ ಗರ್ಭವು ಕಾರಣಾಂತರದಿಂದ ನಷ್ಟವಾಯಿತು. ಅದೇ ಕಾಲದಲ್ಲೇ ಅತ್ತ ರೋಹಿಣೀದೇವಿಯ ಉದರದಲ್ಲಿ ಒಂದು ಪುರುಷ ಶಿಶು ಜನ್ಮಿಸಿತು. ಮುಂದೆ ಎಂಟನೆಯ ಗರ್ಭದಲ್ಲೇ ಶ್ರೀಕೃಷ್ಣಪರಮಾತ್ಮನು, ಶಂಖಚಕ್ರಗದಾಧಾರಿಯೂ, ಪೀತಾಂಬರಾಲಂಕೃತನೂ ಆಗಿ ದುಷ್ಟದಮನ ಕಾರ್ಯಕ್ಕೆ ದೀಕ್ಷಿತನೋ ಎಂಬಂತೆ ದೇವಕೀದೇವಿಯ ಗರ್ಭದಿಂದ ಅವತರಿಸಿದನು.

ಸೆರೆಮನೆಯಲ್ಲಿ ಜನಿಸಿದ ಆ ಪುರುಷಶಿಶುವೇ ಕಂಸನಿಗೆ ಮೃತ್ಯುವೆಂದು ಅಶರೀರವಾಣಿಯ ಭವಿಷ್ಯವಿದ್ದುದರಿಂದ ಅದನ್ನು ಜನಿಸಿದೊಡನೆಯೇ ಹಿಡಿದು ಸಂಹರಿಸಲು ಕಂಸನು ಬಹು ಜಾಗರೂಕನಾಗಿದ್ದನು. ಆದರೆ ದೈವಮಾಯೆಯಿಂದ ಸಕಲ ಕಾರ್ಯಗಳೂ ಅವನಿಗೆ ವ್ಯತಿರಿಕ್ತವಾ

ಗಿಯೇ ನಡೆದುಹೋದುವು. ವಸುದೇವನ ಸಂಕಲೆಗಳ ನಿರ್ಬಂಧವು ತಾನೇ ಕಳಚಿ ಬಿದ್ದುಹೋಗಲಾಗಿ, ಆತನು ಆ ಶಿಶುಸಾರ್ವಭೌಮನನ್ನು ಎತ್ತಿಕೊಂಡು ಮಧ್ಯರಾತ್ರಿಯಲ್ಲಿ ಯಮುನೆಯನ್ನು ದಾಟಿ, ನದಿಯ ಆಚೆಯಲ್ಲಿದ್ದ ನಂದ ಗೋಕುಲದ ಗೊಲ್ಲರಪಾಳ್ಯದಲ್ಲಿ, ನಂದಗೋಪನ ಪತ್ನಿ ಯಶೋದೆಯ ಮಗ್ಗುಲಲ್ಲಿ ಆ ಕಂದನನ್ನು ಮಲಗಿಸಿ, ಅಲ್ಲಿ ಆಗತಾನೇ ಜನಿಸಿದ್ದ ಸ್ತ್ರೀ ಶಿಶುವನ್ನು ಎತ್ತಿತಂದು, ಸೆರೆಮನೆಯನ್ನು ಪ್ರವೇಶಿಸಿ ಅದನ್ನು ತನ್ನ ಪತ್ನಿಯ ಕೈಯಲ್ಲಿ ಕೊಟ್ಟನು. ಭಗವದಿಚ್ಛಾನುಸಾರವಾಗಿ ಇಷ್ಟು ಕಾರ್ಯ ನಡೆದೊಡನೆಯೇ ಸೆರೆಮನೆಯ ಬಾಗಿಲುಗಳು ಬಂಧಿಸಿಕೊಂಡು ಮೊದಲಿನಂತೆಯೇ ಬೀಗಮುದ್ರೆಗಳಿಂದ ಮೊದಲಿನಂತೆಯೇ ಕೂಡಿಕೊಂಡುವು. ವಸುದೇವದೇವಕಿಯರ ಕೈಕಾಲುಗಳಿಗೆ ಸರಪಳಿಗಳು ಏರಿಬಂಧಿಸಿದುವು. ಎಲ್ಲವೂ ಮೊದಲಿದ್ದಂತೆಯೇ ನಿರ್ಬಂಧಿತವಾಗಿ, ಕಂಸನಿಗೆ ಲೇಶಮಾತ್ರವೂ ಸಂದೇಹಕ್ಕೆ ಆಸ್ಪದವಿಲ್ಲದಂತೆ ನಡೆದುಹೋಯಿತು.

ಇಷ್ಟಾದ ತರುವಾಯ ಕಂಸನು ಎಚ್ಚರಗೊಂಡು ಬಂದು, ಶಿಶುವಿನ ರೋದನಧ್ವನಿಯನ್ನು ಕೇಳಿ ತನ್ನ ಮೃತ್ಯುವೇ ಆ ಶಿಶುರೂಪವನ್ನು ತಾಳಿ ಬಂದಿದೆಯೆಂದು ರೋಷಾಕ್ರಾಂತನಾಗಿ ಅದನ್ನು ಸೆಳೆದುಕೊಂಡು ಸಂಹರಿಸಲು ಉದ್ಯುಕ್ತನಾದನು. ಆದರೆ ಆ ಶಿಶುವು ಅವನ ಕೈಯಿಂದ ನುಸುಳಿಕೊಂಡು ಅಂತರಿಕ್ಷಕ್ಕೆ ಹಾರಿ, ಅಲ್ಲಿ ಅಷ್ಟಭುಜಗಳಿಂದ ಭಯಂಕರವಾದ ದುರ್ಗಿಯ ಸ್ವರೂಪದಿಂದ ಕಾಣಿಸಿಕೊಂಡು, ಕಂಸನನ್ನು ಕುರಿತು, ನಿನ್ನನ್ನು ಕೊಲ್ಲುವ ಶತ್ರುವು ಲೋಕದಲ್ಲಿ ಬೆಳೆಯುತ್ತಿರುವನೆಂದು ತಿಳಿಸಿ, ಅದೃಶ್ಯವಾಯಿತು. ಕಂಸನಿಗೆ ತಾನು ಹಾಗೆ ಆರೇಳು ಶಿಶುಗಳನ್ನು ಕೊಂದರೂ ತನ್ನ ಶತ್ರುವು ನಾಶವಾಗದೆ ಉಳಿದನಲ್ಲಾ ಎಂಬ ವ್ಯಸನವೂ ರೋಷವೂ ಅಧಿಕವಾಗಲು, ತನ್ನ ರಾಜಧಾನಿಯ ಸುತ್ತಲೂ ಹುಟ್ಟಿದ ಸಕಲ ಶಿಶುಗಳನ್ನೂ ಕೊಂದುಬಿಡಿರೆಂದು ತನ್ನ ದುರುಳ ಪರಿವಾರಕ್ಕೆ ಆಜ್ಞೆಮಾಡಿದನು. ಅವನ ಅಪ್ಪಣೆಯಂತೆಯೇ ಪೂತಣಿ, ಶಕಟಾಸುರ, ಧೇನುಕಾಸುರ, ಬಕಾಸುರ ಮುಂತಾದವರು ವಿವಿಧ ರೂಪಗಳಿಂದ ಗೋಕುಲದ ಪ್ರಾಂತದಲ್ಲಿ ಸಂಚರಿಸಿ ಅನೇಕ ಮಕ್ಕಳನ್ನು ಸಂಹರಿಸಿ ಕೊನೆಗೆ ಶಿಶುರೂಪೀ ಶ್ರೀ ಕೃಷ್ಣನಿಂದ ವಿವಿಧರೀತಿಗಳಿಂದ ವಧ್ಯರಾದರು.

ನಂದಗೋಕುಲದಲ್ಲಿ ಶ್ರೀ ಕೃಷ್ಣನೂ ಬಲರಾಮನೂ ಮಹಾತೇಜಸ್ವಿಗಳಾಗಿ, ಗೋಪಾಲಕರೊಂದಿಗೆ ಹಲವು ಬಗೆಯ ಆಟಪಾಟಗಳನ್ನಾಡುತ್ತ, ಬೆಳೆದರು. ತನ್ನ ಕಡೆಯಿಂದ ಹೋದ ಪೂತಣಿ ಶಕಟ ಮುಂತಾದವರೆಲ್ಲರೂ ನಿರ್ನಾಮವಾದ ಸಂಗತಿಯು ಕಂಸನಿಗೆ ತಿಳಿದು, ಅವನು ಉಪಾಯತೋರದವನಾದನು. ಇತ್ತ ದಿನದಿನಕ್ಕೆ ಶ್ರೀ ಕೃಷ್ಣಾದಿಗಳು ಪ್ರವರ್ಧಮಾನರಾಗುತ್ತ ಬಲ ಶೌರ್ಯತೇಜಸ್ವಿತೆಗಳಲ್ಲಿ ಅದ್ವಿತೀಯರಾಗಿ ಶೋಭಿಸುತ್ತಿದ್ದರು. ಕಂಸನು ಬಿಲ್ಲು ಹಬ್ಬದ ನೆಪದಿಂದ ಅವರನ್ನು ಕರೆಸಿಕೊಂಡು ಸಂಹರಿಸಬೇಕೆಂದು ಉದ್ಯುಕ್ತನಾಗಲು, ಹಾಗೆ ಬಂದ ಬಲರಾಮ ಶ್ರೀ ಕೃಷ್ಣರು, ಬಲಶೌರ್ಯ ವಿಜೃಂಭಿತರಾಗಿ, ಅವನ ಕಡೆಯ ಪರಿವಾರವನ್ನು ಅವನೆದುರಿಗೇ ಧ್ವಂಸಮಾಡಿದರು. ಶ್ರೀ ಕೃಷ್ಣನು ಸಿಂಹಾಸನದಲ್ಲಿ ಮಂಡಿಸಿದ್ದ ಕಂಸನನ್ನು ಮುಂದಲೆ ಹಿಡಿದೆಳೆದು ಸಭಾಂಗಣದಲ್ಲಿ ಕೆಡೆಹಿ ಮುಷ್ಟಿಪ್ರಹಾರಗಳಿಂದಲೇ ಗತಪ್ರಾಣನನ್ನಾಗಿಸಿ-ಜಗತ್ತನ್ನು ನಿಷ್ಕಂಟಕಗೊಳಿಸಿದನು.

ಕಂಸವಧಾನಂತರ ಶ್ರೀ ಕೃಷ್ಣನು ವೃದ್ಧನಾದ ಉಗ್ರಸೇನನಿಗೇ ಪಟ್ಟಾಭಿಷೇಕಮಾಡಿ ವೃಷ್ಣಿವಂಶವನ್ನು ಗೌರವಿಸಿದನು. ಬಹುಕಾಲ ಸೆರೆಮನೆಯ ನಿರ್ಬಂಧವನ್ನು ಅನುಭವಿಸಿ ನರಳಿದ ದೇವಕೀ ವಸುದೇವಾದಿಗಳು ಬಿಡುಗಡೆಹೊಂದಿ ತಮ್ಮ ಮಕ್ಕಳ ಪ್ರಾದುರ್ಭಾವವನ್ನು ಕಂಡು ಆನಂದಿಸಿದರು. ಆಮೇಲೆ ವಸುದೇವ ರೋಹಿಣೀದೇವಿಯರ ಗರ್ಭದಲ್ಲಿ ಒಂದು ಸ್ತ್ರೀ ಶಿಶು ಜನಿಸಿತು. ಆ ಶಿಶುವಿಗೆ ಸುಭದ್ರಾದೇವಿಯೆಂದು ನಾಮಕರಣ ಮಾಡಿದರು. ಬಹುದಿನಗಳಿಂದಲೂ, ಮಕ್ಕಳನ್ನು ಹಡೆದುಹಡೆದು ದುರುಳ ಕಂಸನ ಕತ್ತಿಯಬಾಯಿಗೆ ಆಹುತಿಯಾಗಿ ಅರ್ಪಿಸಿದ್ದ ದೇವಕೀ ವಸುದೇವರು, ಅಂದು ನಿರಾತಂಕವಾಗಿ, ತಮ್ಮ ಆ ಕಂದನ ಬಾಲಲೀಲಾ ವಿನೋದಗಳಿಂದ ಆನಂದಿಸತೊಡಗಿದರು. ಸುಭದ್ರೆಯು ರೂಪಲಾವಣ್ಯಾದಿಗಳಲ್ಲಿ ಅದ್ವಿತೀಯೆ! ನಿಷ್ಕಲಂಕ ಚಂದ್ರಮಂಡಲದಂತೆ ಶೋಭಿಸುತ್ತಿದ್ದ ಆ ಕನ್ಯೆಯ ಮುಖವನ್ನು ನೋಡಿ ಮಾತಾಪಿತೃಗಳು ದಣಿಯಲಾರದಾದರು. ಗಂಧರ್ವ ಅಪ್ಸರ ನಾಗಕನ್ನಿಕೆಯರೂ, ಆ ಸುಭದ್ರಾದೇವಿಯ ರೂಪರಾಶಿಯ ಮುಂದೆ ಲಜ್ಜಿತರಾಗುವಂತೆ, ಆಕೆಯು ತ್ರಿಭುವನದಲ್ಲೇ ಅದ್ವಿತೀಯ ಸೌಂದರ್ಯಶಾಲಿನಿಯೆನಿಸಿಕೊಂಡಳು.

ಕೇವಲ ಸೌಂದರ್ಯಮಾತ್ರವಲ್ಲ-ಆಕೆಯಲ್ಲಿ ಸಮಸ್ತ ಸದ್ಗುಣಗಳೂ ಮನೆಮಾಡಿಕೊಂಡಿದ್ದುವು. ಶಾಂತತೆ ವಿನಯ ನಮ್ರಭಾವ ಸದಾಚಾರವಿಚಾರಗಳು ಮುಂತಾದ ಸಕಲ ವಿಷಯಗಳಲ್ಲೂ ಸುಭದ್ರಾದೇವಿಯು ಆದರ್ಶಕನ್ಯೆಯೆನ್ನಿಸಿಕೊಂಡಳು. ಆಕೆಯ ಈ ಗುಣಗಳು ಅಣ್ಣನಾದ ಶ್ರೀ ಕೃಷ್ಣಮೂರ್ತಿಗೆ ಬಹು ಮೆಚ್ಚುಗೆಯಾಗಿದ್ದುವು ಇಂತಹ ಸದ್ಗುಣಮಂಡಿತಳಾದ ಕನ್ಯಾಮಣಿಗೆ ವಿದ್ಯಾಬುದ್ಧಿಗಳೂ ಬಂದರೆ ಸುವರ್ಣದಿಂದ ರಚಿತವಾದ ಪುಷ್ಪಕ್ಕೆ ಸುಗಂಧವೂ ಇದ್ದಲ್ಲಿ ಅದು ಹೇಗೆ ಮಾನನೀಯವಾಗುವುದೋ ಹಾಗೆಯೇ, ತನ್ನ ತಂಗಿಯೂ ಶ್ರೇಷ್ಠಳೆನ್ನಿಸುವಳೆಂದು ಶ್ರೀಕೃಷ್ಣನು ಆಕೆಯ ಶಿಕ್ಷಣ ವಿಚಾರವನ್ನು ಸ್ವತಃ ಗಮನಿಸತೊಡಗಿದನು. ಆ ರಾಜಕನ್ನಿಕೆಯ ಹೃದಯದಲ್ಲಿ, ಪ್ರಾಜ್ಞನಾದ ಶ್ರೀಕೃಷ್ಣನು ಬಾಲ್ಯಾವಸ್ಥೆಯಿಂದಲೇ ಭೋಗ ವಿಲಾಸಾದಿ ಅಪೇಕ್ಷೆಗಳಿಗೆ ಬದಲಾಗಿ ನಿಷ್ಕಾಮಕರ್ಮದ ಪವಿತ್ರೋದ್ದೇಶವೆಂಬ ಬೀಜವನ್ನು ಬಿತ್ತಿದನು. ಸ್ತ್ರೀಯರಿಗೆ ಆವಶ್ಯಕವಿರುವಷ್ಟುಮಟ್ಟಿಗೆ ಶಾಸ್ತ್ರಾದಿಗಳ ಪರಿಚಯವನ್ನೂ ಮಾಡಿಕೊಟ್ಟನು. ಮಾತ್ರವಲ್ಲ-ಕ್ಷತ್ರಿಯ ಕನ್ನಿಕೆಯಾದ ಆ ತನ್ನ ತಂಗಿಯು ರಣವಿದ್ಯೆಯಲ್ಲೂ ಪರಿಚಯಗೊಂಡಿರಬೇಕಾದುದು ಆವಶ್ಯಕವೆಂದು ಭಾವಿಸಿ, ಆಕೆಗೆ ಅಶ್ವಾರೋಹಣ, ಶರಸಂಧಾನ, ಲಕ್ಷ್ಯಭೇದನ, ಸಾರಥಿತ್ವ ಮುಂತಾದ ಅಲ್ಪಸ್ವಲ್ಪ ವಿಚಾರಗಳಲ್ಲೂ ತಿಳಿವಳಿಕೆಯನ್ನುಂಟುಮಾಡಿದನು. ಕುಶಾಗ್ರಮತಿಯಾದ ಆ ಕನ್ಯೆಯು ಸ್ವಲ್ಪವಾಗಿ ಹೇಳಲ್ಪಟ್ಟ ವಿಚಾರವನ್ನು ಅತಿಶಯವಾಗಿ ಗ್ರಹಿಸುತ್ತ, ಹಲವು ವಿಷಯಗಳಲ್ಲಿ ನಿಪುಣೆಯಾದಳು. ಪ್ರಕೃತ್ಯುಪಾಸನೆಯೆಂದರೆ ಆಕೆಗೆ ಪರಮ ಪ್ರೇಮಾಸ್ಪದ ವಿಚಾರವದು. ತಮ್ಮ ರಾಜಧಾನಿಗೆ ಸಮೀಪವಾಗಿದ್ದ ರೈವತಕಪರ್ವತದ ಉನ್ನತಪ್ರದೇಶದಲ್ಲಿ ಹೋಗಿ ಕುಳಿತು, ಸುತ್ತಲಿನ ಸಾನುಪ್ರದೇಶದ ಸೌಂದರ್ಯವನ್ನೂ, ಸೂರ್ಯೋದಯ ಸೂರ್ಯಾಸ್ತಮಯಾದಿಗಳಲ್ಲಿ ಅಂತರಿಕ್ಷದಲ್ಲಿ ಕಂಡು ಬರುತ್ತಿದ್ದ ಅಲೌಕಿಕ ಶೋಭೆಯನ್ನೂ ನೋಡಿ ಉಬ್ಬಿಹೋಗುವಳು. ಇಂತಹ ಉನ್ನತಭಾವಗಳೇ ಆಕೆಯ ಚಿಕ್ಕ ಹೃದಯವನ್ನು ತುಂಬಿಬಿಟ್ಟಿದ್ದುದರಿಂದ ಅಲ್ಲಿ ಸ್ವಾರ್ಥ, ಕುಟಿಲತೆ, ಅಲ್ಪತನ ಮುಂತಾದುವುಗಳ ಪ್ರವೇಶಕ್ಕೆ ಆಸ್ಪದವೇ ಇರಲಿಲ್ಲ. ಆಕೆಯ ಹೃದಯವು ನಿರ್ಮಲವಾಗಿ, ನಿಷ್ಕಲ್ಮಷವಾಗಿ, ದೀನರ-ದುಃಖಿಗಳ

ಮತ್ತು ದರಿದ್ರರ ಕಷ್ಟಸಂಕಟಗಳನ್ನು ಕಂಡೊಡನೆ ದ್ರವಿಸಿಹೋಗುವುದು. ಹತಜೀವಿಗಳಿಗೆ ತನ್ನ ಶಕ್ತಿ ಲೋಪವಿಲ್ಲದೆ ದೇಹಮನೋಬುದ್ಧಿಗಳ ಸಹಾಯವನ್ನಿತ್ತು, ಸೇವೆಮಾಡುವ ಅವಕಾಶವೊದಗುವುದನ್ನು ಆ ರಾಜಕನ್ನಿಕೆಯು ತನ್ನ ಜನ್ಮದಲ್ಲೇ ಅಲಭ್ಯಲಾಭವೆಂದು ಭಾವಿಸುವಳು. ಇದಲ್ಲದೆ, ಸಾಧುಗಳು, ಸನ್ಯಾಸಿಗಳು, ಭಗವದ್ಭಕ್ತರು ಮುಂತಾದ ಧಾರ್ಮಿಕ ಪುರುಷರ ಸೇವೆಯಲ್ಲೂ ಆಕೆಯು ವಿಶೇಷ ಶ್ರದ್ಧಾಭಕ್ತಿಗಳನ್ನು ಪ್ರಕಟಿಸುವಳು. ಮಹಸೀಯರ ಸೇವಾಶುಶ್ರೂಷೆಗಳನ್ನು ಕೈಮುಟ್ಟಿ ಮಾಡುವುದೆಂದರೆ ಆಕೆಗೆ ವಿಶೇಷ ಉತ್ಸಾಹವುಂಟಾಗುವುದು. ಮುಖ್ಯವೇನು, ಆಗ ಯದುಕುಲದಲ್ಲೇ ವಿದ್ಯೆಯಲ್ಲಿ, ಸೌಂದರ್ಯದಲ್ಲಿ, ಸುಗುಣ ಸಂಪತ್ತಿನಲ್ಲಿ, ವಿನಯವಿಧೇಯತೆಗಳಲ್ಲಿ, ಹೆಚ್ಚೇನು ಮತ್ತಾವ ವಿಚಾರದಲ್ಲೂ ಸುಭದ್ರೆಯನ್ನು ಮೀರಿಸುವ ಕನ್ಯೆಯು ಮತ್ತೊಬ್ಬಳಿರಲಿಲ್ಲ. ಶ್ರೀ ಕೃಷ್ಣ ಬಲರಾಮರು ತಮ್ಮ ತಂಗಿಯನ್ನೂ, ರೋಹಿಣೀ-ದೇವಕೀ ವಸುದೇವರು ತಮ್ಮ ಮಗಳನ್ನೂ ನೋಡಿ, ಕುಲಕ್ಕೆ ಕೀರ್ತಿತರುವ ಕನ್ಯೆಯಿವಳೆಂಬು ಸಮಾಧಾನಗೊಂಡಿದ್ದರು.

ಕ್ಷತ್ರಿಯ ಕನ್ಯೆಯಾದ ಸುಭದ್ರೆಯು ವಿದ್ಯಾಬುದ್ಧಿಗಳಲ್ಲಿ ಮಾತ್ರವೇ ಅಲ್ಲ- ವಯಸ್ಸಿನಲ್ಲೂ ಪ್ರೌಢಳಾದಳು. ಅಂತಹ ರಾಜಕುಮಾರಿಯು ಅವಿವಾಹಿತಳಾಗಿಯೇ ಎಷ್ಟುಕಾಲವಿರಲು ಸಾಧ್ಯವಾದೀತು! ಆಕೆಗೆ ರೂಪ ವಯಸ್ಸು ವಿದ್ಯಾಬುದ್ಧಿಗಳಲ್ಲಿ ಅನುರೂಪನಾದ ವರನನ್ನು ಹುಡುಕಿ ಲಗ್ನ ಮಾಡಬೇಕಾದುದು, ಅನುಬಂಧಿಗಳಮೇಲೆ ಬಿದ್ದ ಭಾರವಾಗಿದ್ದಿತು. ಆಕೆಯಮೇಲೆ ವಿಶೇಷ ಪ್ರೇಮವನ್ನಿಟ್ಟುಕೊಂಡಿದ್ದ ಶ್ರೀ ಕೃಷ್ಣನು, ಆಕೆಯನ್ನು ಅರ್ಜುನನಿಗೆ ಕೊಟ್ಟು ವಿವಾಹ ಮಾಡಬೇಕೆಂದು ಇಚ್ಛೆಗೊಂಡಿದ್ದನು. ಆದರೆ ಆತನ ಅಣ್ಣನಾದ ಬಲರಾಮನಿಗೆ, ತನ್ನ ಆ ತಂಗಿಯನ್ನು ಧೃತರಾಷ್ಟ್ರಪುತ್ರನಾದ ದುರ್ಯೋಧನನಿಗೆ ಕೊಟ್ಟು ಲಗ್ನಮಾಡಬೇಕೆಂದು ಯೋಚನೆಯಿದ್ದಿತು. ಸುಭದ್ರೆಯ ತಂದೆತಾಯಿಗಳಾದರೋ ಮೂರ್ಧನ್ಯರಾದ ಶ್ರೀ ಕೃಷ್ಣಬಲರಾಮರು ಒಮ್ಮನಸ್ಕತೆಯಿಂದ ಯಾರನ್ನು ಒಪ್ಪುತ್ತಾರೆಯೋ, ಅವರೇ ತಮಗೆ ಸಮ್ಮತವೆಂಬಂತಹ ಅಭಿಪ್ರಾಯದಲ್ಲಿದ್ದರು. -'ಕನ್ನಿಕೆಗೆ ವಯಸ್ಸಾಯಿತು-ವಯಸ್ಸಾಯಿತು, ಇನ್ನು ವಿವಾಹವಾಗಬೇಕು'

ಎಂದು ಎಲ್ಲರೂ ಹೇಳುತ್ತಿದ್ದರಾದರೂ, ತಮ್ಮ ಮನಸ್ಸಿನ ಅಭಿಪ್ರಾಯವಿಂಥ ದೆಂದು ಶ್ರೀ ಕೃಷ್ಣ ಬಲರಾಮರಲ್ಲಿ ಯಾರೂ ಬಾಯಿಬಿಟ್ಟು ನುಡಿಯಲಿಲ್ಲ.— 'ವರನಾರು?' ಎಂಬ ಪ್ರಶ್ನೆಯನ್ನು ಎಲ್ಲರಂತೆಯೇ ಅವರೂ ಕೇಳುತ್ತಿದ್ದರು. ಹೀಗೆ ಕೆಲವು ದಿನಗಳು ಸಾಗಿದುವು.



## ಅಧ್ಯಾಯ ೨ 'ತೀರ್ಥಯಾತ್ರಾ'

'ವರನಾರು - ವರನಾರು' ಎಂಬ ಪ್ರಶ್ನೆಯು, ಕನ್ಯೆಯ ಮಾತಾಪಿತೃಗಳಿಂದ ಮಾತ್ರವಲ್ಲ - ಬಂಧುಬಳಗದವರಿಂದಲೂ ಕೇಳಲ್ಪಟ್ಟಿತು. 'ಸುಭದ್ರೆಯು ಪ್ರಬುದ್ಧಳಾಗಿದ್ದಾಳೆಯಲ್ಲ - ಅವಳಿಗೆ ವಿವಾಹಯೋಗ್ಯ ವಯಸ್ಸಾಗಲಿಲ್ಲವೆ ? ಅವಳಿಗೆ ವರಾನ್ವೇಷಣೆಯಾಗಿಲ್ಲವೆ ? ವರನಾರು ?' ಎಂದು ಹತ್ತಿರದವರು ದೂರದವರು ಹೀಗೆ ಎಲ್ಲರೂ ಕೇಳಲಾರಂಭಿಸಿದರು. ವಸುದೇವನೂ ಆತನ ಪತ್ನಿಯರೂ,-'ಸಕಲ ವಿಷಯಗಳನ್ನೂ ತಿಳಿದ ಬಲರಾಮ ಕೃಷ್ಣರಿದ್ದಾರಲ್ಲ-ಇದೇನು ಅವರಿಗೆ ಅಗತ್ಯವಿಲ್ಲದ ವಿಷಯವೇ? ಅವರೇ ಯೋಗ್ಯ ವರನನ್ನು ಹುಡುಕಿ ತಮ್ಮ ತಂಗಿಗೆ ಲಗ್ನಮಾಡುತ್ತಾರೆ' - ಎಂದು ಹೇಳುತ್ತಾ ನಿಶ್ಚಿಂತರಾಗಿದ್ದರು. ಕೊನೆಗೆ ಒಂದುದಿನ ಭೋಜನೋತ್ತರ ಎಲ್ಲರೂ ಕುಳಿತು ಮಾತನಾಡುತ್ತಲಿದ್ದ ಸಮಯದಲ್ಲಿ ಈ ಪ್ರಶ್ನೆ ಬಂತು. ಅಂದು ಬಲರಾಮನು ತನ್ನ ಮನಸ್ಸಿನಲ್ಲಿದ್ದ ವಿಚಾರವನ್ನು ಸ್ಪಷ್ಟವಾಗಿ ನುಡಿದು ಬಿಟ್ಟನು.-'ನನ್ನ ತಂಗಿಯು ಚಕ್ರಾಧೀಶನ ಪತ್ನಿಯಾಗಿ ಸಿಂಹಾಸನದ ಮೇಲೆ ಕಿರೀಟಧಾರಣ ಮಾಡಿಕೊಂಡು ಶ್ವೇತಚ್ಛತ್ರದ ನೆಳಲಿನಲ್ಲಿ ಕುಳ್ಳಿರಬೇಕೆಂದು ನನ್ನ ಅಪೇಕ್ಷೆಯಿದೆ. ಇಂದು ಹಸ್ತಿನಾಪುರದಲ್ಲಿ ಕುರುವಂಶ ಶ್ರೇಷ್ಠನಾಗಿರುವ ಧೃತರಾಷ್ಟ್ರ ಮಹಾರಾಜನ ಮಗ ದುರ್ಯೋಧನ ರಾಜಕುಮಾರನು ಸಕಲ ವಿಧಗಳಿಂದ ಸುಭದ್ರೆಗೆ ಯೋಗ್ಯವರನೆಂದು ನನ್ನ ಭಾವನೆಯಿದೆ. ವಿಸ್ತಾರವಾದ ಹಸ್ತಿನಾಪುರದ ರಾಜ್ಯಭಾರಕ್ಕೆ ಆತನೇ ಉತ್ತರಾಧಿಕಾರಿಯು. ದುರ್ಯೋಧನನು, ವೀರನು, ಸುಂದರನು, ವಿದ್ಯಾ

ವಂತನು. ಪ್ರಭು ಮಂತ್ರೋತ್ಸಾಹ ಶಕ್ತಿಸಂಪನ್ನನು. ಯುದ್ಧವಿದ್ಯೆಯಲ್ಲಿ ಪ್ರೌಢನು. ಉತ್ತಮ ಕ್ಷತ್ರಿಯವಂಶ ಸಂಭೂತನು. ಇನ್ನು ಅವನಿಗಿಂತಲೂ ಶ್ರೇಷ್ಠವರನು, ಇಂದಿನ ರಾಜಲೋಕದಲ್ಲಿ ನನ್ನ ದೃಷ್ಟಿಗೆ ಯಾರೂ ಕಾಣಿಸುವುದಿಲ್ಲ' ಎಂದು ನುಡಿದನು. ಬಲರಾಮನ ಆ ಮಾತನ್ನು ಕೇಳಿ, ಎಲ್ಲರೂ,-'ಸಾಧುಸಾಧು, ವರಸಾಮ್ಯವು ಚೆನ್ನಾಗಿದೆ. ಸುಭದ್ರೆಯಂತಹ ಸುಗುಣೆಯೂ, ಸುಂದರಿಯೂ ಮಹಾರಾಜಾಧಿರಾಜನ ಪಾಣಿಗ್ರಹಣ ಮಾಡಬೇಕಲ್ಲದೆ-ಯಃಕಶ್ಚಿತನೊಬ್ಬನನ್ನು ಪತಿಯನ್ನಾಗಿ ವರಿಸುವುದು ಅಯುಕ್ತವಲ್ಲವೆ? ನ್ಯಾಯವಾಗಿದೆ. ಬಲರಾಮನು ಚೆನ್ನಾಗಿ ಯೋಚಿಸಿ ನಿರ್ಧರಿಸಿರುವ ಈ ವಿಚಾರವು ಸರ್ವ ಸಮ್ಮತವಾಗಿದೆ' ಎಂದು ನುಡಿದರು.

ತನ್ನ ಅಭಿಪ್ರಾಯವನ್ನು ಒಪ್ಪಿಕೊಂಡು ಎಲ್ಲರೂ ತಮ್ಮ ಸಮ್ಮತಿಯನ್ನು ಕೊಟ್ಟರಾದರೂ, ಶ್ರೀಕೃಷ್ಣನು ಯಾವ ಅಭಿಪ್ರಾಯವನ್ನೂ ಸೂಚಿಸದಿದ್ದುದು ಬಲರಾಮನ ಗಮನಕ್ಕೆ ಬರದಿರಲಿಲ್ಲ. ಕೃಷ್ಣನು ತನ್ನ ಮನಸ್ಸಿನಲ್ಲಿ ಏನೋ ಬೇರೊಂದು ಅಭಿಪ್ರಾಯವನ್ನಿಟ್ಟುಕೊಂಡಿರಬಹುದು - ಮತ್ತಾವನೋ ಒಬ್ಬ ರಾಜಕುಮಾರನು ಆತನ ಗಮನದಲ್ಲಿರಬಹುದು ಎಂದು ಆತನು ಶಂಕಿಸಿದನು. ಆತನ ಸಂದೇಹವು ನಿಶ್ಚಯವಾದುದು. ಶ್ರೀಕೃಷ್ಣನಿಗೆ, ಬಲರಾಮನು ಅಷ್ಟುಮಟ್ಟಿಗೆ ಮೆಚ್ಚಿಕೊಂಡಿದ್ದ ದುರ್ಯೋಧನನ ವಿಷಯದಲ್ಲಿ ಲೇಶಮಾತ್ರವೂ ಒಳ್ಳೆಯ ಅಭಿಪ್ರಾಯವಿರಲಿಲ್ಲ — 'ದುರ್ಯೋಧನನು ಮಹಾ ದುರಭಿಮಾನಿ, ವಂಚಕ, ಕ್ರೂರಿ, ಅಲ್ಲದೆ ಯಾವ ಬಗೆಯ ಪಾಪಕಾರ್ಯಕ್ಕೂ ಹಿಂದೆಗೆಯದ ದೈತ್ಯಸ್ವಭಾವದವನು, ನಿಷ್ಠುರಿ' ಎಂಬ ಈ ಎಲ್ಲಾ ವಿಚಾರಗಳಲ್ಲೂ ಶ್ರೀಕೃಷ್ಣನಿಗೆ ವಿಶೇಷ ಪರಿಚಯವಿದ್ದಿತು. ತನ್ನ ತಂಗಿಯು ಆತನ ಪಾಣಿಗ್ರಹಣ ಮಾಡಿದರೆ, ಎರಡು ದಿನ ಸಿಂಹಾಸನದಮೇಲೆ ಶ್ವೇತಚ್ಛತ್ರದ ಕೆಳಗೆ ಕುಳಿತಿದ್ದು - ಮಹಾರಾಣಿ ಎನಿಸಿಕೊಳ್ಳಬಹುದಾದರೂ, ಅದು ಕೇವಲ ಎರಡುದಿನದ - ಅನಿತ್ಯದ ವೈಭವವೆಂದು ಆತನು ತಿಳಿದಿದ್ದನು. ಅಷ್ಟೇ ಅಲ್ಲ, ಆ ದುರುಳನ ಕೈಹಿಡಿದರೆ ತನ್ನ ತಂಗಿಯು ಭೌತಿಕಸೌಭಾಗ್ಯಕ್ಕೆ ಮಾತ್ರವಲ್ಲ - ಮಾಂಗಲ್ಯಸೌಭಾಗ್ಯಕ್ಕೂ ಶೀಘ್ರದಲ್ಲೇ ಲೋಪಬರುವುದೆಂದೂ, ಅವನು ತನ್ನ ದೌರಾತ್ಮ್ಯಕ್ಕಾಗಿ ಒಂದಿಲ್ಲೊಂದು ದಿನ ಪ್ರಬಲ ಜ್ಞಾತಿಗಳಾದ ಪಾಂಡವರಿಂದ ವಧ್ಯ

ಸಾಗದೆ ಉಳಿಯಲಾರನೆಂದೂ ಆತನು ತಿಳಿದಿದ್ದನು. ದೈತ್ಯಾವೇಶವುಳ್ಳ ದುರ್ಯೋಧನನ ಕೈಹಿಡಿದು, ತನ್ನ ತಂಗಿಯು ಆತ್ಮನಾಶಮಾಡಿಕೊಳ್ಳು ವಿಕೆಯನ್ನು ಆತನು ಎಷ್ಟುಮಾತ್ರಕ್ಕೂ ಒಪ್ಪಿರಲಿಲ್ಲ. ಆದರೆ, ತನ್ನ ಮನಸ್ಸಿನಲ್ಲಿ ತನ್ನ ತಂಗಿಯನ್ನು ಯಾರಿಗೆ ಕೊಟ್ಟು ಲಗ್ನಮಾಡಬೇಕೆಂದಿದೆ ಯೆಂಬ ವಿಚಾರವನ್ನು ಯಾರಿಗೂ ತಿಳಿಸಲಿಲ್ಲ,—'ನಿನ್ನ ಅಭಿಪ್ರಾಯವೇ ನೆಂದು ಪ್ರಶ್ನೆಮಾಡಿದಾಗ-'ನನ್ನ ಅಭಿಪ್ರಾಯವೆಂದರೆ ಬೇರೇನು, ಹಿರಿಯರು ಹೇಗೆ ಹೇಳಿದರೆ ಹಾಗೆ' - ಎಂದು ಸೂಕ್ಷ್ಮವಾಗಿ ನುಡಿದು ಸುಮ್ಮನಿದ್ದನು.

'ಹಿರಿಯರು ಹೇಗೆ ಹೇಳಿದರೆ ಹಾಗೆ' ಎಂದು ಕೃಷ್ಣನು ಹೇಳಿದನಾದರೂ ಅದು ಆತನ, ಆಂತರ್ಯ ಅಭಿಲಾಷೆ ಅಲ್ಲವೆಂದು ಬಲರಾಮನಿಗೆ ಹೊಳೆಯು ದಿರಲಿಲ್ಲ. ಬಲರಾಮನ ಸಂದೇಹಕ್ಕೆ ಬಿಡವಿಲ್ಲದಿರಲಿಲ್ಲ. ಶ್ರೀ ಕೃಷ್ಣ ಸ್ವಾಮಿಯು, ತನ್ನ ಮನಸ್ಸಿನಲ್ಲಿ- ಸುಭದ್ರೆಗೆ ಬೇರೊಬ್ಬ ರಾಜಪುತ್ರನನ್ನು ಯೋಗ್ಯವರನೆಂದು ಈ ಮೊದಲೇ ಯೋಚಿಸಿಕೊಂಡಿದ್ದನು. ಹಸ್ತಿನಾಪುರದ ರಾಜಮನೆತನದಲ್ಲಿನ ಪಾಂಡುರಾಜನ ಭಾರ್ಯೆಯಾದ ಕುಂತೀದೇವಿಯು ಶ್ರೀ ಕೃಷ್ಣಬಲರಾಮರಿಗೆ ಸೋದರತ್ತೆಯಾಗಬೇಕು. ವಸುದೇವನು ಕುಂತೀದೇವಿಯ ಅಣ್ಣ. ಸೋದರತ್ತೆಯ ಮಕ್ಕಳಾದ ಪಾಂಡುಪುತ್ರರು ಈ ವಾವೆಯಿಂದ ಸುಭದ್ರೆಯ ಪಾಣಿಗ್ರಹಣಮಾಡಲು ಯಾವ ಅಭ್ಯಂತ ರವೂ ಇರಲಿಲ್ಲವೆಂಬುದು ಮಾತ್ರವಲ್ಲ- ಬಾಧ್ಯಸ್ಥರೂ ಆಗಿದ್ದರು. ಶ್ರೀ ಕೃಷ್ಣನು ಈ ಪಂಚಪಾಂಡವರಲ್ಲಿ ಮಧ್ಯದವನಾದ ಅರ್ಜುನನನ್ನು ತನ್ನ ತಂಗಿಗೆ ಯೋಗ್ಯವರನೆಂದು ಆರಿಸಿದ್ದನು. ಅರ್ಜುನನು ಧೀರೋದಾತ್ತ ನಾಯಕನು, ಚಂಡಪರಾಕ್ರಮಿ, ಮತ್ಸ್ಯರಾಜಧಾನಿಯಲ್ಲಿ ಸಕಲ ರಾಜ ಲೋಕವನ್ನೂ ಪರಾಜಯಗೊಳಿಸಿದ ಮತ್ಸ್ಯಯಂತ್ರವನ್ನು ಒಂದೇ ಬಾಣ ದಿಂದ ಭೇದಿಸಿ, ದ್ರೌಪದಾದೇವಿಯ ಪುಷ್ಪಮಾಲಿಕೆಗೆ ಪಾತ್ರನಾದ ಶೂರ ವರೇಣ್ಯನು. ಆತನ ಶೌರ್ಯ ವಿನಯ ಗಾಂಭೀರ್ಯ ತೇಜಸ್ಸು ಮುಂತಾ ದುವನ್ನು ಕುರಿತು ದೇಶ ದೇಶಗಳಲ್ಲಿ ಜನರು ಕಥೆಗಳಾಗಿ ಹೇಳಿಕೊಳ್ಳುತ್ತಿ ದ್ದರು. ಕೇವಲ ಬಿಲ್ಲುವಿದ್ಯೆಯಲ್ಲಿ ಪೌಢನೆಂಬ ಆತನ ಆ ಒಂದು ಯೋಗ್ಯತೆ ಮಾತ್ರವಲ್ಲ - ಶ್ರೀಕೃಷ್ಣನ ಗಮನವನ್ನು ಆಕರ್ಷಿಸಿದುದು ! ಅರ್ಜುನನು ಧರ್ಮಾಭಿಮಾನಿ, ದೈವಭಕ್ತನು. ಗುರುಜನ ವಿಧೇಯತೆಯೂ, ಆರ್ತ

ಜನರಲ್ಲಿ ದಯೆಯೂ ಆತನಿಗೆ ಹುಟ್ಟುಗುಣಗಳಾಗಿದ್ದುವು. ಪರೋಪಕಾರವೆಂದರೆ ಒಂಟಿಗಾಲಿನಲ್ಲಿ ನಿಂತು, ತನ್ನ ಸರ್ವಸ್ವವನ್ನೂ ತ್ಯಜಿಸಿಯಾದರೂ ಹೆಣಗತಕ್ಕ ಉದಾರ ಸ್ವಭಾವವಾತನದು. ಅಲ್ಲದೆ ಸತ್ಯವಾದಿಯು, ಯಾರಿಗೂ ಮನಸ್ಸಿನಲ್ಲಾದರೂ ದ್ರೋಹವನ್ನು ಎಣಿಸಿ ಅರಿಯದ ನಿಷ್ಕಪಟಿಯು ಆತನು. ಭ್ರಾತೃಸ್ನೇಹವೂ, ಮಾತೃಭಕ್ತಿಯೂ, ಸ್ವಕುಲಾಭಿಮಾನ - ಸ್ವಧರ್ಮಾಭಿಮಾನವೂ ಆತನಿಗೆ ಸಹಜಧರ್ಮವಾಗಿದ್ದುವು. ಈ ಕಲ್ಯಾಣಗುಣಗಳೇ ಶ್ರೀಕೃಷ್ಣನಿಗೆ ಆತನಲ್ಲಿ ಪ್ರೇಮವನ್ನುಂಟುಮಾಡಲು ಕಾರಣವಾದುವು. ಆದುದರಿಂದಲೇ ಆ ಪುರುಷಶ್ರೇಷ್ಠನಿಗೆ ತನ್ನ ತಂಗಿಯನ್ನು ಸಮರ್ಪಿಸಿ ಆಕೆಯ ಜನ್ಮಕ್ಕೆ ಸಾರ್ಥಕ್ಯವನ್ನುಂಟುಮಾಡಬೇಕೆಂದು ಆತನು ಯೋಚಿಸಿಕೊಂಡಿದ್ದುದು. ಆದರೆ ತನ್ನ ಉದ್ದೇಶವಿಂಥದೆಂದು - ಬಲರಾಮನಂತೆ ಬಹಿರಂಗವಾಗಿ ಆತನು ಯಾರೊಂದಿಗೂ ಹೇಳಿರಲಿಲ್ಲ. ದೀರ್ಘದರ್ಶಿಯಾದ ಆತನು ಆ ಸಂಗತಿಯು ಕೆಲಕಾಲ ಗೋಪ್ಯವಾಗಿರಬೇಕಾದುದು ಆವಶ್ಯಕವೆಂದು ತಿಳಿದಿದ್ದನು.

ಅರ್ಜುನನ ಸದ್ಗುಣಸನ್ನಡತೆಗಳಿಗಾಗಿ ಮೆಚ್ಚಿಕೊಂಡಿದ್ದುದು ಶ್ರೀಕೃಷ್ಣನು ಮಾತ್ರವಲ್ಲ - ಆ ಪಾಂಡುಪುತ್ರನ ವಿಚಾರವು ಸುಭದ್ರೆಗೂ ತಿಳಿದಿದ್ದಿತು. ಆಕೆಯೂ ಆತನ ಯಶೋಗಾನವನ್ನು ಕೇಳಿದ್ದಳು. ಅಸ್ತ್ರವಿದ್ಯಾಭ್ಯಾಸಮಾಡುತ್ತಿದ್ದಾಗ, ಆತನು ನಡೆಸಿದ ಅನೇಕ ವಿಚಿತ್ರಸಾಧನೆಗಳನ್ನು ಕಥೆಯಾಗಿ ಕೇಳಿ, ಆ ಕ್ಷತ್ರಿಯ ಕನ್ಯೆಯ ಹೃದಯವು ಉಬ್ಬಿಹೋಗಿದ್ದಿತು. ಅರ್ಜುನನು ಏಕಾಂಗಿಯಾಗಿ ದ್ರುಪದರಾಜನೊಂದಿಗೆ ಹೋರಾಡಿ ಅವನನ್ನು ಸೋಲಿಸಿ ದ್ರೋಣಾಚಾರ್ಯರ ಪ್ರೀತ್ಯರ್ಥವಾಗಿ ರಥದ ಕಂಭಕ್ಕೆ ಕಟ್ಟಿ ಹಿಡಿತಂದನಂತೆ, ತನ್ನ ತಾಯಿಗೆ ಗಜಗೌರಿಯ ಪೂಜೆಗಾಗಿ ಸ್ವರ್ಗದಿಂದ ಇಂದ್ರನ ಐರಾವತವನ್ನು ತಂದನಂತೆ, ಪಾಂಚಾಲರಾಜಧಾನಿಯಲ್ಲಿ ಮತ್ಸ್ಯಯಂತ್ರವನ್ನು ಭೇದಿಸಿ ಸಕಲ ರಾಜಪುತ್ರರನ್ನೂ ತಲೆತಗ್ಗಿಸುವಂತೆ ಮಾಡಿ ದ್ರೌಪದಾದೇವಿಯನ್ನು ವರಿಸಿದನಂತೆ ಎಂಬ ಮುಂತಾದ ಹಲವು ವಿಚಾರಗಳು ಆಕೆಗೆ ಪರಮಾಶ್ಚರ್ಯವನ್ನುಂಟುಮಾಡುವುವು. ವೀರೋಪಾಸಕಳಾಗಿದ್ದ ಆ ಕ್ಷತ್ರಿಯ ಯುವತಿಯು ಆತನ ಶೌರ್ಯ ವೀರ್ಯ ತೇಜಸ್ಸು ಮುಂತಾದುವುಗಳೊಂದಿಗೆ ಬೆರೆತಿದ್ದ ವಿನಯ ಮೃದುಭಾಷಣ

ಭ್ರಾತೃಪ್ರೇಮ, ಮಾತೃಭಕ್ತಿ ಮುಂತಾದ ಸದ್ಗುಣಗಳ ಕಥೆಯನ್ನೂ ಕೇಳಿ, ಆ ಮಹಾನುಭಾವನನ್ನು ಒಮ್ಮೆ ಕಣ್ಣಾರೆ ನೋಡಬೇಕಲ್ಲ - ಎಂದು ಅನೇಕವೇಳೆ ಹಂಬಲಿಸಿದ್ದಳು. ತಾನು ಯಾವ ಪುರುಷನನ್ನಾದರೂ ಮದುವೆಯಾಗುವುದಿದ್ದರೆ, ಪಾರ್ಥನೇ ತನಗೆ ಪತಿಯಾಗುವಂತೆ ಕರುಣಿಸೆಂದು ತನ್ನ ಇಷ್ಟದೈವವನ್ನು ಪ್ರಾರ್ಥಿಸಿಕೊಳ್ಳುತ್ತಿದ್ದಳು. ತನ್ನ ತಂಗಿಯು ಅರ್ಜುನನ ಗುಣಗಳಿಗಾಗಿ ಮೋಹಿತಳಾಗಿ ಆತನಲ್ಲಿ ಅನುರಕ್ತಳಾಗಿರುವಳೆಂಬ ವಿಚಾರವು ಶ್ರೀ ಕೃಷ್ಣನಿಗೆ ತಿಳಿದಿದ್ದಿತು. ಕನ್ಯೆಯು ಸಕಲ ಗುಣಗಣಾಲಂಕೃತನೂ, ಶ್ರೇಷ್ಠವಂಶಸಂಭೂತನೂ ಆಗಿರುವಾತನನ್ನು ಮೆಚ್ಚಿಕೊಂಡಿರುವಾಗ, ಅದಕ್ಕೆ ವಿರೋಧವಾಗಿ ಮತ್ತಾವುದೋ ನಮ್ಮ ಮನವೆಚ್ಚದ ಒಂದು ಕೋಡಗವನ್ನು ವರಿಸೆಂದು ಆಕೆಯನ್ನು ಪೀಡಿಸುವುದು ಶ್ರೇಯಸ್ಕರವಲ್ಲವೆಂದು ಆತನು ಯೋಚಿಸಿ- ಸುಭದ್ರೆಗೆ ಅರ್ಜುನನೇ ತಕ್ಕ ವರನೆಂದು ನಿರ್ಧರಿಸಿದ್ದನು.

ಹೀಗೆ, ಇತ್ತ ದ್ವಾರಕಿಯಲ್ಲಿ ಸುಭದ್ರೆಯು ವರಾರ್ಥಿಯಾಗಿ ಬೆಳೆಯುತ್ತಿದ್ದಾಗ, ಅತ್ತ ಹಸ್ತಿನಾವತಿಯಲ್ಲಿ ಪಾಂಡವರ ವಿಚಾರವೇನಾಗಿದ್ದಿತೆಂದೂ ತಿಳಿಯಬೇಕಲ್ಲವೆ ! ಪಾಂಡುಪುತ್ರರು, ಚಿಕ್ಕಂದಿನಲ್ಲೇ ತಂದೆಯನ್ನು ಕಳೆದುಕೊಂಡರೂ, ಮಹಾಮತಿಯೂ ಕರ್ತೃತ್ವಶಾಲಿನಿಯೂ ಆದ ಕುಂತೀದೇವಿಯ ಪೋಷಣೆಯಿಂದ ಸುರಕ್ಷಿತರಾಗಿ, ಭೀಷ್ಮದ್ರೋಣಾದಿ ವೃದ್ಧರ ಪರಾಮರಿಕೆಯಿಂದ ಸಕಲ ವಿದ್ಯಾಪಾರಂಗತರೂ ವಿನಯಾದಿ ಸದ್ಗುಣವಿಭೂಷಿತರೂ ಆಗಿ ಎಲ್ಲರ ಪ್ರೀತಿಪಾತ್ರರಾದರು. ಅವರಲ್ಲೊಬ್ಬೊಬ್ಬನ ವೀರ್ಯ ಶೌರ್ಯ ಪರಾಕ್ರಮಾದಿಗಳೂ ನೂರುಮಂದಿ ಕೌರವರ ಬಲ ಶೌರ್ಯಗಳನ್ನು ಮೀರಿಹೋದುವು. ಅವರು ಅದ್ವಿತೀಯ ತೇಜಸ್ಸಂಪನ್ನರಾಗಿ ಭೂಮಿಗೆ ಅವತರಿಸಿ ಬಂದ ದೇವತೆಗಳೋ ಎಂಬಂತೆ ಸಕಲರ ಗೌರವ- ಆದರಗಳಿಗೂ ಪಾತ್ರರಾದರು. ತನ್ನ ಜ್ಞಾತಿಗಳಾದ ಪಾಂಡುಪುತ್ರರ ಈ ಬಗೆಯ ಅಭಿವೃದ್ಧಿಯು ದುರ್ಯೋಧನನ ಕಣ್ಣುಗಳನ್ನು ಕುಕ್ಕದಿದ್ದೀತೆ? ಅವರನ್ನು ಹಾಗೆಯೇ ಬೆಳೆಯಲಿತ್ತರೆ ಮುಂದೆ ತನಗೂ ತನ್ನ ರಾಜ್ಯಕ್ಕೂ ಮಹತ್ತಾದ ಅಪಾಯವುಂಟಾಗದಿರದು, ಎಂದು ಆ ದುರುಳನು, ತನ್ನ ಸಹಾಯಕರಾದ ದುಶ್ಯಾಸನ ಕರ್ಣ ಶಕುನಿ ಮುಂತಾದವ

ರೊಂದಿಗೆ ಯೋಚಿಸಿ, ಅವರನ್ನು ನಿರ್ನಾಮವಾಗಿಸಲು ಗುಪ್ತವಾಗಿ ಪ್ರಯತ್ನ ನಡೆಸಿದನು. ಅವರಿಗೆ ವಿಷದನ್ನವನ್ನಿಡಿಸಿದನು, ಭಯಂಕರವಾದ ಮಡುವುಗಳಲ್ಲಿ ಮುಳುಗಿಸಿದನು. ಮಲಗಿದ್ದಾಗ ಮನೆಗೆ ಬೆಂಕಿಹತ್ತಿಸಿ, ಜೀವಸಹಿತ ದಹಿಸಿಬಿಡಲು ಪ್ರಯತ್ನಮಾಡಿದನು. ಅವನ ಮನಸ್ಸಿನಲ್ಲಿ- ಪಾಂಡವರಲ್ಲೊಬ್ಬನಾದ ಭೀಮಸೇನನೊಬ್ಬ ಸತ್ತರೆ ಬದುಕೇನಲ್ಲ, ಎಂಬ ಹಂಬಲು ವಿಶೇಷವಾಗಿತ್ತು. ಆದರೆ ದೈವಬಲದಿಂದ ಸುರಕ್ಷಿತರಾಗಿದ್ದ ಪಾಂಡವರಿಗೆ ಅವನು ಕಲ್ಪಿಸಿದ್ದ ಆ ಯಾವ ಆಪದಗಳೂ ನಾಟದೆ ಅವರು ಜೀವಂತರಾಗಿ ಉಳಿದರು. ಮಾತ್ರವಲ್ಲ, ದಿನದಿನಕ್ಕೆ ಮಹೋನ್ನತರಾಗಿ ಅಭಿವೃದ್ಧಿಗೂ ಬರುತ್ತಿದ್ದರು.

ದುರ್ಯೋಧನನು ಕೊನೆಯದಾಗಿ ಕಲ್ಪಿಸಿದ್ದ ಅರಗಿನಮನೆಯ ಅಗ್ನಿ ಅನಾಹುತದಿಂದ ತಪ್ಪಿಸಿಕೊಂಡು ಬದುಕಿದ ಪಾಂಡವರು, ಹಿಡಿಂಬಾಸುರನಿಗೆ ಆಹಾರವಾಗದೆ ಉಳಿದು, ಏಕಚಕ್ರನಗರಿ ಎಂಬಲ್ಲಿ ಬ್ರಾಹ್ಮಣ ವೇಷದಿಂದ ಭಿಕ್ಷೆಬೇಡಿ ಬಹು ಕಷ್ಟಾನುಭವಮಾಡಿದರು. ತರುವಾಯ ಪಾಂಚಾಲ ನಗರಿಯಲ್ಲಿ ದ್ರೌಪದೀಸ್ವಯಂವರವಾಗುವುದೆಂದು ಕೇಳಿ ಅಲ್ಲಿಗೆ ಪ್ರಯಾಣ ಮಾಡಿದರು. ಅಲ್ಲಿ ಪಾರ್ಥನು, ಮತ್ಸ್ಯಯಂತ್ರವನ್ನು ಭೇದಿಸಿ ದ್ರೌಪದಿಯನ್ನು ವರಿಸಿ, ಅಣ್ಣತಮ್ಮಂದಿರೊಂದಿಗೆ ಮನೆಗೆಬಂದು, ತಮ್ಮ ತಾಯಿಯಾದ ಕುಂತೀದೇವಿಯನ್ನು ಕುರಿತು -' ಅಮ್ಮಾ ಹೆಣ್ಣನ್ನು ಗೆದ್ದು ತಂದೆವು' ಎಂದು ನುಡಿಯಲು, ಆ ವೃದ್ಧೆಯು- ಹಣ್ಣೆಂದು ತಿಳಿದು-ವಿರೋಧವಿಲ್ಲದೆ ನೀವೈವರೂ ಅದನ್ನು ಅನುಭವಿಸಿರಪ್ಪ' ಎಂದು ನುಡಿದುಬಿಟ್ಟಳು. ಮಾತೃವಾಕ್ಯದಂತೆ ದ್ರೌಪದಾದೇವಿಯನ್ನು ಅಣ್ಣತಮ್ಮಂದಿರೈವರೂ ವಿವಾಹವಾಗಬೇಕೆಂದು ನಿರ್ಧರವಾಯಿತು. ಆದರೆ ಕನ್ಯಾಪಿತೃವಾದ ದ್ರುಪದ ರಾಜನು ಆ ಅಭಿಪ್ರಾಯವನ್ನು ವಿರೋಧಿಸಲು, ಆಗ್ಗೆ ಶ್ರೀ ವೇದವ್ಯಾಸ ಮಹರ್ಷಿಗಳು ಪ್ರತ್ಯಕ್ಷರಾಗಿ, ದ್ರೌಪದಿಯ ಮತ್ತು ಪಾಂಡವರ ಪೂರ್ವ ವೃತ್ತಾಂತವನ್ನೆಲ್ಲ ಸಾಂಗವಾಗಿ ತಿಳಿಸಿ, ಸಂಶಯಪಡಬೇಡವೆಂದು ಆತನನ್ನು ಸಮ್ಮತಗೊಳಿಸಿದರು. ಮುಂದೆ ಪಾಂಡುಪುತ್ರರೊಂದಿಗೆ ದ್ರೌಪದಿಯ ವಿವಾಹವು ವಿಶೇಷ ಸಂಭ್ರಮದಿಂದ ನಡೆದುಹೋಯಿತು.

ವಿವಾಹಮಹೋತ್ಸವವು ನಡೆದ ತರುವಾಯ, ಪಾಂಡವರು ಕೆಲವು

ದಿನಗಳವರೆಗೆ ಮಾವನ ಮನೆಯಲ್ಲಿದ್ದು - ನಂತರ ತಮ್ಮ ರಾಜ್ಯಕ್ಕೆ ಹೊರಡ ಲನುವಾದರು. ಸತ್ತರೆಂದು ತಾವು ತಿಳಿದಿದ್ದ ಪಾಂಡವರು ಬದುಕಿರುವುದು ಮಾತ್ರವಲ್ಲ, ವಿವಾಹಮಾಡಿಕೊಂಡು ವೈಭವಸಂಪನ್ನರಾಗಿ ಸ್ವರಾಜ್ಯಾಭಿ ಮುಖರಾಗಿ ಬರುತ್ತಿದ್ದಾರೆಂಬ ವಾರ್ತೆಯನ್ನು ಕೇಳಿ, ಭೀಷ್ಮ ದ್ರೋಣಾ ದಿಗಳು ಬಹು ಸಂಭ್ರಮಗೊಂಡು, ಅವರನ್ನು ಸ್ವಾಗತೀಕರಿಸಿ ಉಚಿತರೀತಿ ಯಿಂದ ಆದರಿಸಿದರು. ತರುವಾಯ ಪಿತೃಪಾರಂಪರ್ಯವಾಗಿ ನಡೆದುಬಂದ ವಾರಣಾವತ ರಾಜ್ಯದಲ್ಲಿ ಅವರ ಭಾಗವೆಂದು ಇಂದ್ರಪ್ರಸ್ಥರಾಜಧಾನಿ ಯನ್ನು ಬಿಡಿಸಿಕೊಟ್ಟು, ಅಲ್ಲಿ ಯುಧಿಷ್ಠಿರನು ತನ್ನ ತಮ್ಮಂದಿರೊಂದಿಗೆ ರಾಜ್ಯವಾಳಿಕೊಂಡಿರಲೆಂದು ಕಳುಹಿಸಿದರು. ಅಲ್ಲಿ ಧರ್ಮಜನು ಧರ್ಮ ದಿಂದ ರಾಜ್ಯಪರಿಪಾಲನೆಮಾಡುತ್ತ ಪ್ರಜಾರಂಜಕನಾಗಿದ್ದನು.

ಹೀಗಿರುತ್ತಿರಲು ಒಂದು ದಿನ, ನಾರದಮಹರ್ಷಿಗಳು ಧರ್ಮಜನ ಸಭಾಸ್ಥಾನಕ್ಕೆ ಬಂದು ಸತ್ಕೃತರಾಗಿ ಆತನ ಯೋಗಕ್ಷೇಮ ವಿಚಾರಮಾ ಡಿದ ತರುವಾಯ- 'ಮಗೂ ಧರ್ಮಜಾ, ಯುವಕರೂ ತೇಜಸ್ವಿಗಳೂ ಆದ ನೀವೈವರೂ ದ್ರೌಪದಿಯೊಬ್ಬಳನ್ನು ವಿವಾಹಮಾಡಿಕೊಂಡಿರುವಿರಿ. ಮನು ಷ್ಯನ ಮನಸ್ಸನ್ನು ಕೆಡಿಸಲು ಲೋಕದಲ್ಲಿ ಹೊನ್ನು ಹೆಣ್ಣು ಮಣ್ಣುಗಳೆಂಬ ಮೂರು ವಸ್ತುಗಳು ಪ್ರಬಲ ಸಾಧನಗಳು. ಅವುಗಳಲ್ಲೂ ಹೆಣ್ಣಿನ ಸಂ ಬಂಧದಿಂದ ಹಿಂದೆ ಬಹುಮಂದಿ ಶೂರರು ನಿರ್ನಾಮವಾಗಿದ್ದಾರೆ. ಆದುದ ರಿಂದ ಧರ್ಮಮಾರ್ಗಾನುವರ್ತಿಗಳಾದ ನೀವು ಆಕೆಯ ಉಪಭೋಗಕ್ಕೆ ಒಂದು ಗೊತ್ತಾದ ನಿಬಂಧನೆಯನ್ನು ಮಾಡಿಕೊಂಡು ಅದರಂತೆ ನಡೆಯಲು ಏರ್ಪಡಿಸಿಕೊಳ್ಳುವುದು ಮೇಲು' ಎಂದು ಸೂಚಿಸಿದರು. ವಿಚಾರಪರರೂ, ಗುರಜನ ವಿಧೇಯರೂ ಆದ ಪಾಂಡುಪುತ್ರರು ಅವರ ಆ ಸಲಹೆಯು ಸೂಕ್ತ ವಾದುದೆಂದು ಒಪ್ಪಿ, -'ತಮ್ಮಲ್ಲಿ ಒಬ್ಬೊಬ್ಬರೂ ದ್ರೌಪದಾದೇವಿಯಲ್ಲಿ ಒಂದೊಂದು ವರ್ಷಕಾಲ ಪತ್ನೀಭಾವದಿಂದ ವ್ಯವಹಾರವನ್ನಿಟ್ಟುಕೊಳ್ಳ ಬೇಕೆಂತಲೂ, ಆಕೆಯು ಯಾರೊಬ್ಬರ ಸರದಿಯಲ್ಲಿದ್ದು- ಪತಿಪತ್ನಿಯರು ರಹಸ್ಯದಲ್ಲಿದ್ದ ಕಾಲದಲ್ಲಿ ತಮ್ಮಲ್ಲೇ ಬೇರೊಬ್ಬರು ಅಂತಹ ರಹಸ್ಯಸ್ಥಾ ನಕ್ಕೆ ಪ್ರವೇಶಿಸಿದರೆ ಅಂಥವರು ಹನ್ನೆರಡು ವರ್ಷಕಾಲ ದೇಶಾಂತರವಾಸ ಮಾಡಬೇಕೆಂದೂ ನಿಬಂಧನೆ ಮಾಡಿಕೊಂಡರು. ಇದು ಪಾಂಡುಪುತ್ರರೆಲ್ಲ

ರಿಗೂ ಸಮ್ಮತವಾಗಿ ಯುಧಿಷ್ಠಿರನು ಮೊದಲನೆಯ ವರ್ಷದಲ್ಲಿ ಆಕೆಯೊಂದಿಗಿರಬೇಕೆಂದು ನಿರ್ಣಯವಾಯಿತು.

ಹೀಗಿರುತ್ತಿರಲು ಮುಂದೊಂದು ದಿನ ಒಂದು ಪರಿಸ್ಥಿತಿಯೊದಗಿತು: ಒಬ್ಬಾನೊಬ್ಬ ಬ್ರಾಹ್ಮಣನ ಗೋಧನವನ್ನು ಚೋರರು ಅಪಹರಿಸಿಕೊಂಡೊಯ್ದರೆಂದು ಅವನು ರಾಜಾಸ್ಥಾನದಲ್ಲಿ ಬಂದು ಮೊರೆಯಿಟ್ಟನು. ಅರ್ಜುನನು ಬ್ರಾಹ್ಮಣನ ಮೊರೆಯನ್ನು ಲಾಲಿಸಿ ಆತನಿಗೆ ಸಮಾಧಾನವಾಗುವಂತೆ ಹೇಳಿ, ಕಳ್ಳರನ್ನು ದಂಡಿಸಿ ಆತನ ಹಸುಗಳನ್ನು ತಂದುಕೊಡುತ್ತೇನೆಂದು ಅಭಯಪ್ರದಾನಮಾಡಿದನು. ಆದರೆ ತನ್ನ ಆಯುಧಗಳೆಲ್ಲವೂ ಧರ್ಮರಾಜನೂ ದ್ರೌಪದಿಯೂ ಏಕಾಂತದಲ್ಲಿ ಶಯನಿಸಿದ್ದ ಮನೆಗೆ ಹೊಂದಿದಂತಿದ್ದ ಆಯುಧಶಾಲೆಯೊಂದರಲ್ಲಿ ಇಡಲ್ಪಟ್ಟಿದ್ದುವೆಂಬ ವಿಚಾರವು ತರುವಾಯ ಆತನ ಗಮನಕ್ಕೆ ಬಂದು ಕ್ಷಣಮಾತ್ರ ಆತನನ್ನು ಅಧೀರನನ್ನಾಗಿಸಿದುವು. ಆದರೆ ಆ ಕಾರಣಕ್ಕಾಗಿ ಸಾವಕಾಶಮಾಡುವಂತಿರಲಿಲ್ಲ. ಬ್ರಾಹ್ಮಣನು ತನ್ನ ಸರ್ವನಾಶವಾಯಿತೆಂದು ಬೊಬ್ಬೆ ಹೊಡೆಯುತ್ತಿದ್ದನು. ಚೋರರು ಪಶುಗಳೊಂದಿಗೆ ಅಜ್ಞಾತಸ್ಥಳಕ್ಕೆ ಹೊರಟುಹೋದ ತರುವಾಯ ಅವರನ್ನು ಹುಡುಕುವ ಕಾರ್ಯವು ಮಹತ್ಪ್ರಯಾಸ ಸಾಧ್ಯವಾಗುವುದೆಂದು ತೋರಿತು. ಆಗಲಾತನು ಏನಾದರಾಗಲಿ ಎಂದುಕೊಂಡು ಪ್ರಯತ್ನಪೂರ್ವಕವಾಗಿ, ತಮ್ಮಣ್ಣನು ಶಯನಿಸಿದ್ದ ಏಕಾಂತಗೃಹಕ್ಕೆ ಪ್ರವೇಶಿಸಿ ತನ್ನ ಆಯುಧಾದಿಗಳನ್ನು ತೆಗೆದುಕೊಂಡು, ಚೋರರನ್ನು ಬೆನ್ನಟ್ಟಿಹೊರಟು, ಅವರನ್ನು ಪರಾಜಯಗೊಳಿಸಿ ಗೋವುಗಳೊಂದಿಗೆ ಹಿಂದಿರುಗಿ ರಾಜಧಾನಿಯನ್ನು ಸೇರಿ, ಆ ದುಷ್ಟರನ್ನು ಸೆರೆಗೊಳಿಸಿ ಶಿಕ್ಷಿಸಿದನು. ಬ್ರಾಹ್ಮಣನು ತನ್ನ ಗೋಧನವನ್ನು ಪಡೆದು ಸಂತುಷ್ಟನಾಗಿ, ಅರ್ಜುನನನ್ನು ಶ್ರೇಯೋವಂತನಾಗೆಂದು ಆಶೀರ್ವದಿಸಿದನು.

ಇಷ್ಟೆಲ್ಲ ಆದ ತರುವಾಯ ಅರ್ಜುನನು ಯುಧಿಷ್ಠಿರನಲ್ಲಿಗೆ ಬಂದು ನಮಸ್ಕರಿಸಿ, ಆ ಸಮಾಚಾರವನ್ನು ಆದ್ಯಂತವಾಗಿ ತಿಳಿಸಿ ತನ್ನ ತಪ್ಪಿತಕ್ಕಾಗಿ ದೇಶಾಂತರವಾಸಕ್ಕೆ ಅನುಮತಿಕೊಡಬೇಕೆಂದು ಪ್ರಾರ್ಥಿಸಿದನು. ಧರ್ಮರಾಜನು ತಮ್ಮನ ಋಜುಗುಣಕ್ಕಾಗಿ ಸಂತೋಷಪಟ್ಟನಾದರೂ, ಹನ್ನೆರಡು ವರ್ಷಕಾಲ ಆತನನ್ನು ಬಿಟ್ಟಿರಲು ಒಪ್ಪದೆ, ಆ ವಿಚಾರವನ್ನು ಮಾನಸಿಕ

ಮಾಡೆಂದು ಹೇಳಿದನು. ಭೀಮ ನಕುಲ ಸಹದೇವರೂ ಕುಂತೀದೇವಿಯೂ, ದುರುದ್ದೇಶದಿಂದಲ್ಲದೆ ಕೇವಲ ಪರೋಪಕಾರ ನಿಮಿತ್ತವಾಗಿ ಮಾಡಿದ ಆ ಕಾರ್ಯಕ್ಕಾಗಿ ಹನ್ನೆರಡು ವರ್ಷಕಾಲ ದೇಶಾಂತರವಾಸವು ಅನಾವಶ್ಯಕ ವೆಂದು ಸಲಹೆಕೊಟ್ಟರು. ಆದರೆ ಧೀರೋದಾತ್ತನಾಯಕನಾದ ಅರ್ಜುನನ ಅಭಿಪ್ರಾಯವು ಅದರಿಂದ ಕುಂದಲಿಲ್ಲ. ಸದುದ್ದೇಶದಿಂದಾಗಲೀ-ದುರುದ್ದೇಶ ದಿಂದಾಗಲೀ ಮಾಡಬಾರದ ಒಂದು ಕೃತ್ಯವನ್ನು ಮಾಡುವುದು ತಪ್ಪೇ ಎಂದೂ ತಪ್ಪಿತಕ್ಕೆ ತಕ್ಕ ಶಿಕ್ಷೆಯನ್ನು ಅನುಭವಿಸುವುದೇ ನ್ಯಾಯಸಮ್ಮತವೆಂದೂ ನಿರ್ಧರಿಸಿ, ತಾನು ಆ ತನ್ನ ತಪ್ಪಿತಕ್ಕಾಗಿ - ತೀರ್ಥಯಾತ್ರಾರೂಪದಿಂದ ದೇಶಾಂತರವಾಸಮಾಡುವುದೇ ಸರಿಯೆಂದು ತೀರ್ಮಾನಿಸಿಬಿಟ್ಟನು.



## ಅಧ್ಯಾಯ ೩ ' ಗಿರಿಗುಹಾವಾಸ '

ಧರ್ಮಸಮ್ಮತವಾದ ಮಾತಾದುದರಿಂದ ಯುಧಿಷ್ಠಿರನು ಅರ್ಜುನ ನನ್ನು ಆತನ ನಿಶ್ಚಯವನ್ನು ಬಿಟ್ಟು ಊರಲ್ಲೇ ನಿಲ್ಲುವಂತೆ ನಿರ್ಬಂಧಿಸ ಲಿಚ್ಛೆಗೊಳ್ಳಲಿಲ್ಲ. ಅರ್ಜುನನು ತೀರ್ಥಯಾತ್ರಾವ್ಯಾಜದಿಂದ ದೇಶಸಂ ಚಾರ ಹೊರಡುತ್ತಾನೆಂಬ ವಾರ್ತೆ ಊರಲ್ಲೆಲ್ಲ ಹಬ್ಬಿತು. ಎಲ್ಲರೂ ಆ ರಾಜಪುತ್ರನ ಸತ್ಯನಿಷ್ಠೆಗಾಗಿ ಆಶ್ಚರ್ಯಚಕಿತರಾದರು. ದ್ರೌಪದೀದೇವಿಯು ಆಚಾತುರ್ಯವಾಗಿ ನಡೆದುಹೋದ ಆ ಕಾರಣಕ್ಕಾಗಿ ಬಹುಕಾಲ ಪ್ರಿಯ ದರ್ಶನನಾಗಿದ್ದ ಆತನನ್ನು ಬಿಟ್ಟಿರಬೇಕಾಯಿತಲ್ಲ ಎಂದು ಪರಿತಾಪಪಟ್ಟಳು. ಆದರೆ ಮಾಡತಕ್ಕುದೇನು !

ಅರ್ಜುನನು ಒಂದು ಶುಭದಿನದ ಶುಭಮುಹೂರ್ತದಲ್ಲಿ ಮಾತೆಯಾದ ಕುಂತೀದೇವಿಗೂ ಧರ್ಮಜ ಭೀಮಸೇನರಿಗೂ ಕುಲಗುರುಗಳಿಗೂ ನಮಸ್ಕ ರಿಸಿ ಹೊರಡಲನುಮತಿಯನ್ನು ಪಡೆದನು. ನಕುಲ ಸಹದೇವರಿಗೂ ದ್ರೌಪ ದಿಗೂ ತಾನು ಹೋಗಿಬರುತ್ತೇನೆಂದು ಹೇಳಿ ಅವರ ಸಮ್ಮತಿಗೊಂಡನು. ದಿವ್ಯವಸ್ತ್ರಾಭರಣಭೂಷಿತನಾಗಿ, ತನ್ನ ಗಾಂಡೀವ ಧನುಸ್ಸನ್ನೂ ಬತ್ತಳಿಕೆ,

ಖಡ್ಗಗುರಾಣಿಗಳನ್ನೂ ಧರಿಸಿ ಆ ಕ್ಷತ್ರಿಯವೀರನು ಪ್ರತಿಜ್ಞಾಪಾಲನೆಗೆಂದು ಧೀರನಾಗಿಯೇ ಮುಂದಡಿಯಿಟ್ಟನು. ಯುಧಿಷ್ಠಿರ ಮಹಾರಾಜನ ಆಜ್ಞೆಯಿಂದ ಆತನೊಂದಿಗೆ ವೇದವೇದಾಂಗ ಪಾರಂಗತರಾದ ಬ್ರಾಹ್ಮಣರೂ, ಭಕ್ತಾದಿಗಳೂ, ಪೌರಾಣಿಕರು ಕಥಾವಾಚಕರೇ ಮುಂತಾದ ಪರಿಜನರೂ, ಆತನ ಸೇವೆಗೆ ಅನೇಕಾನೇಕಮಂದಿ ಸೇವಕರು ಮುಂತಾದ ಪರಿವಾರವೆಲ್ಲವೂ ಹೊರಟುನಡೆಯಿತು. ರಾಜಧಾನಿಯನ್ನು ಬಿಟ್ಟು ಪ್ರಯಾಣಮಾಡಿದ ಆ ಅರ್ಜುನನ ಪರಿವಾರವು ದಿನದಿನಕ್ಕೆ ಸ್ವಲ್ಪಸ್ವಲ್ಪದೂರದಂತೆ ಪ್ರಯಾಣ ಮಾಡುತ್ತ, ಮಾರ್ಗದಲ್ಲಿ ದೊರೆತ ದಿವ್ಯ ನದಿಗಳ ಬಳಿಯಲ್ಲಿ ಒಂದೆರಡು ದಿನಗಳು ತಂಗಿದ್ದು, ಸ್ನಾನಪಾನಾದಿಗಳಿಂದ ತಣಿವುಹೊಂದಿ ಮುಂದಕ್ಕೆ ಹೊರಡುವನು. ಸಾತ್ವಿಕನೂ ಆಸ್ತಿಕನೂ ಆದ ಆ ಅರ್ಜುನನು ಕ್ಷೇತ್ರಾದಿಗಳಲ್ಲಿ ನಾಲ್ಕಾರು ದಿನಗಳು ತಂಗಿದ್ದು ಅಲ್ಲಿಯ ಕ್ಷೇತ್ರವಿಧಿಗನುಸಾರವಾಗಿ ದೇವತಾರಾಧನೆ ನಡಿಸಿ ಭಗವತ್ಪ್ರಸಾದ ಸ್ವೀಕಾರಮಾಡಿ, ಕ್ಷೇತ್ರವಾಸಿಗಳನ್ನೂ ದೀನಾನಾಥರನ್ನೂ ದಾನದಕ್ಷಿಣೆ ಭೂರಿಭೋಜನಾದಿಗಳಿಂದ ತೃಪ್ತಿಗೊಳಿಸಿ ಮುಂದಕ್ಕೆ ಪ್ರಯಾಣಮಾಡುವನು. ಹೀಗೆಯೇ ಅರ್ಜುನನೂ ಪರಿವಾರದವರೂ ಬಹುದಿನಗಳು, ಊರುನಗರಗಳನ್ನೂ ಗುಡ್ಡಬೆಟ್ಟಗಳನ್ನೂ ಕಳೆದು ಪ್ರಯಾಣವನ್ನು ಸಾಗಿಸಿದರು.

ಅರ್ಜುನನು ತನ್ನ ಪರಿವಾರದೊಂದಿಗೆ ಪ್ರಯಾಣಮಾಡುತ್ತ, ಒಂದಾನೊಂದುದಿನ ಗಂಗಾಮುಖದಲ್ಲಿ ಸ್ನಾನಾರ್ಥವಾಗಿ ಇಳಿದನು. ಬಹುದಿನಗಳಿಂದಲೂ ಆತನ ಕೀರ್ತಿಪ್ರತಿಷ್ಠೆಗಳನ್ನು ಕೇಳಿ ಆತನ ಸಮಾಗಮದಿಂದ ಶೂರನಾದ ಪುತ್ರನೊಬ್ಬನನ್ನು ಪಡೆಯಬೇಕೆಂದು ಅಪೇಕ್ಷಿಸಿದ್ದ ಉಲೂಪಿ ಎಂಬೊಬ್ಬ ನಾಗಕನ್ಯೆಯು, ನೀರಿನಲ್ಲಿಳಿದು ಮುಳುಗಿದ ಆತನನ್ನು ಆತನಿಗೆ ತಿಳಿಯದಂತೆಯೇ ತನ್ನ ಲೋಕಕ್ಕೆ ಕರೆಸಿಕೊಂಡಳು. ಅರ್ಜುನನು, ಆ ವಿಚಿತ್ರ ಪರಿಸ್ಥಿತಿಯನ್ನು ಕಂಡು ಆಶ್ಚರ್ಯಚಕಿತನಾಗಿ ನಿಂತಿರಲು, ಆಕೆಯು ತನ್ನ ವೃತ್ತಾಂತವನ್ನೂ ಅಪೇಕ್ಷೆಯನ್ನೂ ತಿಳಿಸಿ ಪುತ್ರಭಿಕ್ಷೆಯನ್ನೀಯಬೇಕೆಂದು ಬೇಡಿದಳು. ಅರ್ಜುನನು ಅದಕ್ಕೆ ಸಮ್ಮತಿಸಿ ಆಕೆಯನ್ನು ಗಾಂಧರ್ವವಿಧಿಯಿಂದ ಸ್ವೀಕರಿಸಿ, ಪುತ್ರಪ್ರದಾನಮಾಡಿ - ತರುವಾಯ ಮುಂದೆ ಎಲ್ಲೂ ಜಲಚರಾದಿಗಳಿಂದ ಯಾವ ಬಾಧೆಯೂ ಉಂಟಾಗದಂತೆ ಒಂದು

ರಹಸ್ಯಮಂತ್ರವನ್ನು ಆಕೆಯಿಂದ ಪಡೆದು, ಪುನಃ ಭೂಲೋಕಕ್ಕೆ ಗಂಗಾ ತೀರಕ್ಕೆ ಬಂದು ತನ್ನವರಿಗೆ ದರ್ಶನಕೊಟ್ಟನು. ನೀರಿನಲ್ಲಿ ಮುಳುಗಿದ ತಮ್ಮ ರಾಜಪುತ್ರನು ಎಲ್ಲಿ ಹೋದನೋ ಎಂದು ಎಲ್ಲರೂ ಭಯಭ್ರಾಂತ ರಾಗಿದ್ದು-ಈಗ ಆತನ ವಿಚಿತ್ರ ಚರಿತ್ರೆಯನ್ನು ಕೇಳಿ ಪರಮಾಶ್ಚರ್ಯ ಪಟ್ಟರು.

ಬಳಿಕ ಅರ್ಜುನನು ಅವರೆಲ್ಲರೊಂದಿಗೂ ಮುಂದಕ್ಕೆ ಹೊರಟು, ಹಿಮ ವತ್ಪರ್ವತದ ಪ್ರಾಂತಗಳ ಪ್ರಕೃತಿ ಸೌಂದರ್ಯಗಳನ್ನೂ, ಅಲ್ಲಿದ್ದ ಹಲವು ಋಷ್ಯಾಶ್ರಮಾದಿಗಳನ್ನೂ ನೋಡುತ್ತಾ ಹಲವು ಪುಣ್ಯನದಿಗಳಲ್ಲಿ ಸ್ನಾನ ಮಾಡಿ, ಅಂಗವಂಗ ಕಳಿಂಗಾದಿ ಹಲವು ದೇಶಕೋಶಗಳನ್ನು ದಾಟಿ, ತರು ವಾಯ ದಕ್ಷಿಣಾಭಿಮುಖವಾಗಿ ಪ್ರಯಾಣಮಾಡಿದನು. ಗೋದಾವರೀ ಕೃಷ್ಣಾನದಿಗಳಲ್ಲಿ ಸ್ನಾನಾದಿಗಳನ್ನು ತೀರಿಸಿಕೊಂಡು, ಶ್ರೀ ಶೈಲಕ್ಷೇತ್ರದಲ್ಲಿ ದೇವತಾರಾಧನೆಯನ್ನು ಮಾಡಿ ಸಂತುಷ್ಟನಾಗಿ ಮುಂದೆ ಪಾಂಡ್ಯದೇಶಕ್ಕೆ ಪ್ರಯಾಣಮಾಡಿದನು.

ಆ ದೇಶಕ್ಕೆ ಮಣಿಪುರವೆಂಬುದು ರಾಜಧಾನಿ. ಆ ದೇಶದ ರಾಜ ನಾದ ಚಿತ್ರವಾಹನನೆಂಬ ಶೂರನರೇಂದ್ರನು, ವೀರಾಗ್ರಣಿಯಾದ ಅರ್ಜುನ ನನ್ನು ಎದುರುಗೊಂಡು, ತನ್ನ ರಾಜಧಾನಿಯಲ್ಲೇ ಕೆಲವು ದಿನಗಳು ವಾಸಿಸಿ ಮುಂದಕ್ಕೆ ಪ್ರಯಾಣಮಾಡಬೇಕೆಂದು ಪ್ರಾರ್ಥಿಸಿದನು. ವಿಶ್ವಾಸಪೂರ್ವ ಕವಾಗಿ ಮಾಡಿಕೊಂಡ ಆತನ ಪ್ರಾರ್ಥನೆಯನ್ನು ಮಾನ್ಯಮಾಡಿ, ಅರ್ಜು ನನು ಕೆಲಕಾಲ ಆ ಸುಂದರ ರಾಜಧಾನಿಯಲ್ಲಿರಲು ಸಂಕಲ್ಪಿಸಿದನು. ಅರ್ಜುನನು ಹಾಗೆ ಅಲ್ಲಿ ನಿಂತುದು ಒಂದು ಅಪೂರ್ವ ಘಟನಾವಳಿಗೆ ಅವ ಕಾಶವನ್ನು ಕಲ್ಪಿಸಿತು. ಚಿತ್ರವಾಹನರಾಜೇಂದ್ರನಿಗೆ ಚಿತ್ರಾಂಗದೆಯೆಂ ಬೊಬ್ಬ ಮಗಳು ವಿವಾಹಯೋಗ್ಯವಯಸ್ಕಳಾಗಿದ್ದಳು. ಧೀರನೂ, ಗಂಭೀ ರನೂ, ಮಾರಸುಂದರನೂ, ಅಪ್ರತಿಮ ಶೌರ್ಯತೇಜೋನಿಧಿಯೂ ಆದ ಧನಂಜಯನ ರೂಪರಾಸಿಯನ್ನು ನೋಡಿ ಆಕೆಯು ಆತನಿಗೆ ಮನಸೋತಳು. ಮಗಳ ಮನದಿಷ್ಟವನ್ನರಿತ ಚಿತ್ರವಾಹನರಾಜನು, ಆಕೆಯು ಯೋಗ್ಯಸ್ಥಳ ದಲ್ಲೇ ಮನಸ್ಸಿಟ್ಟಳೆಂದು ತೃಪ್ತನಾಗಿ, ತನ್ನಾ ಕುವರಿಯನ್ನು ವರಿಸುವಂತೆ ಅರ್ಜುನನನ್ನು ಪ್ರಾರ್ಥಿಸಿದನು. ಬಹುಕಾಲದಿಂದಲೂ ಏಕಾಕಿಯಾಗಿ

ಸಂಚರಿಸಿದ ಆ ವೀರನು, ತನ್ನಲ್ಲೇ ಅನುರಕ್ತಳಾಗಿದ್ದ ಆ ನಾರೀಮಣಿಯ ಅಭಿಲಾಷೆಯನ್ನು ಪೂರ್ಣಗೊಳಿಸಲು ಹಿಂದೆಗೆಯುವನೇ! ಅರ್ಜುನನಿಗೆ ಆ ಸ್ತ್ರೀರತ್ನದೊಂದಿಗೆ ವಿವಾಹ ಸಂಬಂಧವು ಸಂಭ್ರಮದಿಂದ ನಡೆದು ಹೋಯಿತು.

ದೇಶಸಂಚಾರಿಯಾಗಿ ಬಂದ ತನಗೆ ಅಲ್ಲಿ ವಿವಾಹಸಂಬಂಧವೇರ್ಪಟ್ಟಿತೆಂದು ಆತನು ತನ್ನ ದೇಶಕೋಶಗಳನ್ನೂ ಬಂಧು ಬಾಂಧವರನ್ನೂ ತಮ್ಮ ರಾಜಧಾನಿಯನ್ನು ಬಿಟ್ಟು ಹೊರಟಿದ್ದ ಕಾರಣವನ್ನೂ ಮರೆತು ಕುಳ್ಳಿರಲು ಹೇಗೆ ಸಾಧ್ಯ! ಅರ್ಜುನನು ಆ ನಾರೀಮಣಿಯ ಸಮಾಗಮವಾದ ತರುವಾಯ ಕೆಲವು ಕಾಲ ಆ ರಾಜಧಾನಿಯಲ್ಲೇ ವಾಸಿಸಿದ್ದು, ತರುವಾಯ ಅಲ್ಲಿಂದ ಮುಂದಕ್ಕೆ ಪ್ರಯಾಣಮಾಡಿದನು. ಈ ಸಂಬಂಧದಲ್ಲಿ ಆತನ ಪತ್ನಿಯಾದ ಚಿತ್ರಾಂಗದೆಯ ಉದರದಲ್ಲಿ ಮುಂದೆ ಯುಕ್ತಕಾಲದಲ್ಲಿ ಬಭ್ರುವಾಹನನೆಂಬ ಒಬ್ಬ ಶೂರಕುಮಾರನು ಜನಿಸಿ- ಪ್ರಾಯಸಮರ್ಥನಾದಾಗ, ವೃದ್ಧರಾಜನ ತರುವಾಯ ಮಣಿಪುರದ ಸಿಂಹಾಸನಕ್ಕೆ ಅಧಿಕಾರಿಯಾಗಿ ರಾಜ್ಯಾಧಿಪತ್ಯಮಾಡಿದನು. ಹೀಗೆ ಕಾರ್ಯಾವಸರ ನಿಮಿತ್ತವಾಗಿ, ಪ್ರೇಮಾಸ್ಪದರಾದ ಪತ್ನಿಯರ ಬಳಿ ನಿಲ್ಲಲು ಸಾಧ್ಯವಿಲ್ಲದೆ, ತನ್ನ ದೇಶಯಾತ್ರೆಯನ್ನು ಮುಂದರಿಸಿ, ಅರ್ಜುನನು ಶ್ರೀ ರಾಮೇಶ್ವರಕ್ಷೇತ್ರವನ್ನು ಕುರಿತು ಪ್ರಯಾಣಮಾಡಿದನು.

ಶ್ರೀ ರಾಮೇಶ್ವರದಲ್ಲಿ ಸೇತುಸ್ನಾನ ಸ್ವಾಮಿಸೇವೆ ಮುಂತಾದುವುಗಳನ್ನು ಮುಗಿಸಿಕೊಂಡು, ಕ್ಷೇತ್ರವಾಸಿಗಳಾದ ಭಕ್ತಾದಿಗಳನ್ನು ಅಮಿತ ದಾನದಕ್ಷಿಣೆಗಳಿಂದ ಸಂತೋಷಗೊಳಿಸಿ - ದಕ್ಷಿಣಾಗ್ರವನ್ನು ಬಳಸಿಕೊಂಡು - ಅರ್ಜುನನು ಪುನಃ ಉತ್ತರಕ್ಕಾಗಿ ಪ್ರಯಾಣಮಾಡಿದನು. ಮಾರ್ಗದಲ್ಲಿ ಹರಿಹರಕ್ಷೇತ್ರವು ಸಿಕ್ಕಲು, ಅಲ್ಲಿ ಪವಿತ್ರವಾದ ತುಂಗಭದ್ರಾನದಿಯಲ್ಲಿ ಸ್ನಾನಮಾಡಿ ಶ್ರೀ ಹರಿಹರೇಶ್ವರ ದರ್ಶನದಿಂದ ಸಂತುಷ್ಟನಾಗಿ ತರುವಾಯ ಪಶ್ಚಿಮಸಮುದ್ರ ತೀರದ ಗೋಕರ್ಣಕ್ಕೆಂದು ಹೊರಟನು. ಗೋಕರ್ಣದಲ್ಲಿ ಮೂರುದಿನಗಳು ಕ್ಷೇತ್ರವಾಸಮಾಡಿ ಮುಂದಕ್ಕೆ ಹೊರಟು ಮಾರ್ಗದಲ್ಲಿ ದೊರೆತ ಮಹಾಬಲೇಶ್ವರಕ್ಷೇತ್ರದಲ್ಲೂ ಭಗವದ್ದರ್ಶನಮಾಡಿಕೊಂಡು ಸಂತುಷ್ಟನಾಗಿ, ಆ ವೇಳೆಗೆ ವರ್ಷಾಕಾಲವು ಪ್ರಾಪ್ತವಾಗುತ್ತಿರಲು, ಆ

ಕಾಲದಲ್ಲಿ ಮಾರ್ಗಮಧ್ಯದಲ್ಲಿರದಂತೆ ಒಂದು ಸುರಕ್ಷಿತ ಸ್ಥಳವನ್ನು ಸೇರಬೇಕೆಂದು ಯೋಚಿಸಿ, ಮುಂದೆ ಪ್ರಭಾಸತೀರ್ಥವನ್ನು ಕುರಿತು ಪ್ರಯಾಣ ಬೆಳೆಸಿದನು.

ಅರ್ಜುನನು ತೀರ್ಥಯಾತ್ರಾವ್ಯಾಜದಿಂದ ರಾಜಧಾನಿಯನ್ನು ಬಿಟ್ಟು ದೇಶಾಂತರ ಪ್ರಯಾಣಮಾಡಿದನೆಂಬ ವಿಚಾರವನ್ನು ದ್ವಾರಕಿಯಲ್ಲಿ ಶ್ರೀಕೃಷ್ಣನು ಕೇಳಿದ್ದನು. ಮುಂದೆ ಬಹು ದಿನಗಳವರೆಗೆ ಆತನೆಲ್ಲಿದ್ದಾನೆ, ಏನು ಮಾಡುತ್ತಿದ್ದಾನೆ ಎಂಬ ವೃತ್ತಾಂತವೇ ತಿಳಿಯದಿರಲು, ತನ್ನ ಉದ್ದೇಶವೆಲ್ಲಿ ನಿರರ್ಥಕವಾಗುವುದೋ ಎಂದು ಚಿಂತಾಕ್ರಾಂತನಾಗಿದ್ದನು ಆದರೆ ಮುಂದೆ ಕೆಲವು ದಿನಗಳಲ್ಲೇ- ಮಣಿಪುರರಾಜಧಾನಿಯಿಂದ ಹೊರಟ ಆತನು ಪ್ರಭಾಸತೀರ್ಥವನ್ನು ಕುರಿತು ಬರುತ್ತಿರುವನೆಂಬ ವರ್ತಮಾನ ಬರಲು ಹೃಷ್ಟಮಾನಸನಾಗಿ, ತನ್ನಾಪ್ರಾಣಸ್ನೇಹಿತನನ್ನು ಸಂದರ್ಶಿಸಲಿಚ್ಛೆಗೊಂಡು, ತಾನೂ ಪ್ರಭಾಸತೀರ್ಥಕ್ಕಾಗಿ ಮಿತಪರಿವಾರದೊಂದಿಗೆ ಹೊರಟು ಪ್ರಯಾಣ ಮಾಡಿದನು.

ಪ್ರಯಾಣಕಾಲದಲ್ಲಿ ಶ್ರೀಕೃಷ್ಣನ ಮನಸ್ಸನ್ನು ಹಲವು ಯೋಚನೆಗಳು ಆವರಿಸಿದುವು. ಅವೆಲ್ಲಕ್ಕೂ, ತನ್ನ ತಂಗಿ ಸುಭದ್ರಾದೇವಿಯು ವೀರಾಗ್ರಣಿ ಅರ್ಜುನನ ಪಾಣಿಗ್ರಹಣ ಮಾಡುವಹಾಗೆ ಅನುಕೂಲಪಡಿಸುವುದು ಹೇಗೆ ಎಂಬುದೇ ಮೂಲಪ್ರಶ್ನೆಯಾಗಿದ್ದಿತು. ದ್ವಾರಕಿಯಲ್ಲಿ, ಶ್ರೀಕೃಷ್ಣನ ಅಭಿಪ್ರಾಯದಂತೆ ಸುಭದ್ರೆಯು ಪಾರ್ಥನನ್ನು ವಿವಾಹವಾಗುವ ವಿಷಯದಲ್ಲಿ ಅಸಮ್ಮತಿಯುಳ್ಳವರು ಯಾರೂ ಇರಲಿಲ್ಲ. ಶ್ರೀಕೃಷ್ಣನ ಅಣ್ಣನಾದ ಬಲರಾಮನೊಬ್ಬನಲ್ಲದೆ ಮಿಕ್ಕವರೆಲ್ಲರೂ, ಅರ್ಜುನನ ಸಂಬಂಧವನ್ನು ಸಂತೋಷದಿಂದ ಒಪ್ಪಿಕೊಂಡಿದ್ದರು. ಸುಭದ್ರೆಯ ಮಾತಾಪಿತೃಗಳು, ಕೌರವನ ನೀಚತನದ ಕಥೆಯೆಲ್ಲವನ್ನೂ ಕೇಳಿ, ತಮ್ಮ ಮಗಳು ಅಂತಹ ಆತತಾಯಿಯನ್ನು ವಿವಾಹವಾಗುವುದಕ್ಕಿಂತಲೂ ಆಜನ್ಮ ಬ್ರಹ್ಮಚಾರಿಣಿಯಾಗಿಯಾದರೂ ಇರಲೆಂದು ಕೇಳಿಕೊಂಡರು. ಅವರು ಮಾತ್ರವಲ್ಲ - ದುರ್ಯೋಧನನು ತನ್ನ ಜ್ಞಾತಿಗಳನ್ನು ನಿರ್ಮೂಲವಾಗಿಸಲು, ನಿಷ್ಕರುಣಿಯಾಗಿ ನೀರು ಬೆಂಕಿ ವಿಷ ಈ ಮುಂತಾದ ಸಾಧನಗಳಿಂದಲೆಲ್ಲ ಪ್ರಯೋಗ ನಡಿಸಿದ ಪಾಷಾಣ ಹೃದಯನೆಂಬ ವಾರ್ತೆಯನ್ನು ಕೇಳಿದೊಡನೆಯೇ, ಸುಭ

ದ್ರೆಯು ಸಖಿಯರು ಆಪ್ತೇಷ್ಟರು ಮುಂತಾದ ಎಲ್ಲರೂ ಆ ಸಂಬಂಧವನ್ನು ಹಳಿಯತೊಡಗಿದರು. ಆದರೆ ಅವರಾರಿಗೂ ಬಲರಾಮನ ಇಷ್ಟಕ್ಕೆ ವಿರೋಧವಾಗಿ ತಮ್ಮ ಮನಸ್ಸಿನಲ್ಲಿದ್ದ ಅಭಿಪ್ರಾಯವನ್ನು ಸ್ಪಷ್ಟವಾಗಿ ಹೇಳಲು ಧೈರ್ಯವಾಗಲಿಲ್ಲ. ಸ್ವಯಂ ಶ್ರೀಕೃಷ್ಣನು ಸಹ-ತನ್ನ ಮನಸ್ಸಿಗೆ ಸೂಕ್ತವೆಂದು ತೋರಿದ್ದ ಅರ್ಜುನನ ಸಂಬಂಧ ಮಾಡಬೇಕೆಂಬ-ದುರ್ಯೋಧನನ ಸಂಬಂಧವನ್ನು ದೂರೀಕರಿಸಬೇಕೆಂಬ ಅಭಿಪ್ರಾಯವನ್ನು ಸ್ಪಷ್ಟವಾಗಿ ಹೇಳಿದಲ್ಲಿ - ಮಹಾ ಹಠವಾದಿಯಾದ ತಮ್ಮಣ್ಣನೆಲ್ಲಿ, ತನ್ನ ಉದ್ದೇಶ ಸಾಧನೆಗಾಗಿ ಮಹತ್ಪ್ರಯತ್ನ ಮಾಡತೊಡಗುವನೋ, ತನ್ಮೂಲಕ ಸೋದರರಾದ ತಮ್ಮ ಪ್ರೇಮಬಾಂಧವ್ಯಕ್ಕೆಲ್ಲಿ ವಿಘ್ನ ಬರುವುದೋ ಎಂದು ಶಂಕಿಸಿ ಇನ್ನೂ ಮೌನವಾಗಿಯೇ ಇದ್ದನು. ಆದರೆ, ಈಗ ಅರ್ಜುನನು ತೀರ್ಥಯಾತ್ರಾವ್ಯಾಜದಿಂದ ತಮ್ಮ ರಾಜಧಾನಿಯನ್ನು ಕುರಿತು ಬರುತ್ತಿದ್ದುದರಿಂದ ಆ ಸಂದರ್ಭದಲ್ಲೇ ತನ್ನ ಉದ್ದೇಶವನ್ನು ನೆರವೇರಿಸಿಕೊಳ್ಳುವುದು ಹೇಗೆ ಎಂದು ಯೋಚಿಸತೊಡಗಿದನು. ತಾನು ಮಾಡುವ ಕೆಲಸವು, ತಮ್ಮಣ್ಣನಿಗೆ ತನ್ನ ವಿಷಯದಲ್ಲಿ ಲೇಶಮಾತ್ರವೂ ಸಂದೇಹಕ್ಕೆ ಆಸ್ಪದವನ್ನುಂಟು ಮಾಡಬಾರದು. ಮಾತ್ರವಲ್ಲ - ಅರ್ಜುನನನ್ನು ಆತನೇ ತಮ್ಮ ರಾಜಧಾನಿಗೆ ಆಹ್ವಾನಿಸಿ ಗೌರವಿಸುವಂತೆಯೂ ಇರಬೇಕು. ಹೀಗೆ ಈ ಕಾರ್ಯವನ್ನು ಸಾಧಿಸಿ, ಕೃತಕೃತ್ಯವಾಗುವುದು ಹೇಗೆ ಎಂಬುದೇ ಆತನ ಯೋಚನೆಯ ಮೂಲವಾಗಿದ್ದಿತು.

ಅರ್ಜುನನು ತನ್ನ ಪರಿವಾರದೊಂದಿಗೆ ನಿಧಾನವಾಗಿ ಪ್ರಯಾಣಮಾಡುತ್ತ ಬಂದು ದ್ವಾರಕಾನಗರಿಗೆ ಸಮೀಪವಾಗಿದ್ದ ಪವಿತ್ರವೆನಿಸಿದ ಪ್ರಭಾಸತೀರ್ಥವನ್ನು ಸೇರಿದನು. ಯಾದವರಿಗೆ ಪುಣ್ಯತೀರ್ಥವೆನ್ನಿಸಿದ್ದ ಆ ಸ್ಥಳದಲ್ಲಿ ಅವರು ಸರ್ವದಾ ಸ್ನಾನ ದಾನಧರ್ಮಾದಿಗಳು ದೇವತಾಸೇವೆ ಮುಂತಾದುವುಗಳಿಗಾಗಿ ನೂರಾರು ಸಂಖ್ಯೆಯಿಂದ ಬಂದು ಪ್ರತಿದಿನವೂ ಇದ್ದೇ ಇರುತ್ತಿದ್ದರು. ತಮ್ಮ ಆ ಕ್ಷೇತ್ರಕ್ಕಾಗಿ ಬಹುದೂರ ಪ್ರವಾಸದಿಂದ ಬಂದ ಅರ್ಜುನನನ್ನು ಕಂಡು ಅವರು, ವಿಶೇಷವಾಗಿ ಆದರಿಸಿ ಉಪಚರಿಸಿದರು. ತರುವಾಯ ವಿಶೇಷ ಸಂಗತಿಗಳ ಪ್ರಸ್ತಾಪಾವಸರದಲ್ಲಿ, ಶ್ರೀಕೃಷ್ಣಬಲರಾಮರ ತಂಗಿಯೂ ಕನ್ಯಾಶಿರೋಮಣಿಯೂ ಆದ ಸುಭದ್ರಾದೇವಿಯು ಅವಿವಾಹಿತ

ಳಾಗಿದ್ದಾಳೆಂಬ ಸಂಗತಿಯು ಅರ್ಜುನನ ತಿಳಿವಳಿಕೆಗೆ ಬಂತು. ಒಡನೆ ಆಕೆಯ ಸೌಂದರ್ಯ-ಸೌಕುಮಾರ್ಯ ಸುಗುಣಸಂಪದ ಮುಂತಾದುವುಗಳ ಪ್ರಸ್ತಾಪವೂ ನಡೆದು, ಆಕೆಯನ್ನು ದುರ್ಯೋಧನನಿಗೆ ಲಗ್ನಮಾಡಿಕೊಡ ಬೇಕೆಂದು ಬಲರಾಮನಿಗೆ ಇಷ್ಟವಿರುವುದೆಂದೂ - ಆದರೆ, ಕನ್ಯೆಗಾಗಲೀ ಆಕೆಯ ತಾಯಿತಂದೆಗಳಿಗಾಗಲೀ ಅಥವ ಮತ್ತಾರಿಗಾಗಲೀ, ಬಲರಾಮನ ಆ ಅಭಿಪ್ರಾಯವು ಸಮ್ಮತವಿಲ್ಲವೆಂದೂ ಮಾತುಕಥೆಗಳು ನಡೆದುವು. ಹಾಗಾದರೆ ಆ ಕನ್ಯೆಗೆ ಗೊತ್ತಾಗಿರುವ ವರನಾರು, ಆ ಕುಲಕನ್ಯೆಯು ಯಾವ ಭಾಗ್ಯಶಾಲಿಯನ್ನು ವರಿಸಲಿರುವಳು, ಆಕೆಯನ್ನು ಅರ್ಧಾಂಗಿಯಾಗಿ ಪಡೆವ ಸುಕೃತಶಾಲಿಯಾವನು ಎಂದು ಮುಂತಾಗಿ ಆತನು ಚಿಂತಿಸುತ್ತಿದ್ದನು.

ಅಷ್ಟರಲ್ಲಿ ದ್ವಾರಕಿಯಿಂದ ಹೊರಟಿದ್ದ ಶ್ರೀಕೃಷ್ಣನೂ ಪ್ರಭಾಸತೀರ್ಥಕ್ಕೆ ಬಂದು, ಅರ್ಜುನನನ್ನು ಕಂಡನು. ಉಭಯರೂ ಪ್ರೇಮಾಲಿಂಗನ ಮಾಡಿಕೊಂಡು, ಪರಸ್ಪರ ಕುಶಲಪ್ರಶ್ನೆಮಾಡಿ ಸಂತೋಷದಿಂದ - ವಿಷಯಾಂತರವನ್ನು ಕುರಿತು ಸಂಭಾಷಣೆಗೆ ತೊಡಗಿದರು. ಕುಶಲಮತಿಯಾದ ಶ್ರೀಕೃಷ್ಣನು ಆವರೆಗೇ ಯಾದವ ಪರಿಜನರಿಂದ ತನ್ನ ತಂಗಿಯ ವೃತ್ತಾಂತವನ್ನು ತಿಳಿದ ಅರ್ಜುನನು ಆಕೆಯಲ್ಲಿ ಅನುರಕ್ತನಾಗಿದ್ದಾನೆಂಬುದರ ಸೂಕ್ಷ್ಮವನ್ನು ಗ್ರಹಿಸಿ,-'ಅರ್ಜುನಾ, ಹೆಚ್ಚು ಹೇಳತಕ್ಕುದೇನಿದೆ. ನಮ್ಮಣ್ಣ ಬಲರಾಮನು ಸರ್ವಪ್ರಕಾರದಿಂದಲೂ, ಆ ಸುಭದ್ರೆಯನ್ನು ಕೌರವನ ಕೊರಳಿಗೆ ಕಟ್ಟಬೇಕೆಂದು ಹವಣಿಸಿದ್ದಾನೆ. ಅದು ಸಾಗದಂತೆ ಮಾಡಬೇಕೆಂಬುದೇ ನಮ್ಮ ಪ್ರಯತ್ನ! ನೀನು ಹೇಗೂ ಸಕಾಲಕ್ಕೆ ಬಂದಿದ್ದೀಯೆ! ಈಗ ಯಾರಿಗೂ ನಿನ್ನ ಪರಿಚಯವನ್ನು ಹತ್ತಗೊಡದಂತೆ ಕಾಷಾಯವಸ್ತ್ರವನ್ನು ಸ್ವೀಕರಿಸಿ ಸಾಧುವಿನ ವೇಷಧಾರಣಮಾಡಿ ಇಲ್ಲೇ ಸಮೀಪದ ರೈವತಕ ಪರ್ವತದ ಒಂದೆಡೆಯಲ್ಲಿ ವಾಸವಾಗಿರು. ತರುವಾಯ ಯುವರಾಜ ಬಲರಾಮನು ತಕ್ಕಷ್ಟುಮಟ್ಟಿಗೆ ವೈಭವದಿಂದಲೇ ನಿನ್ನನ್ನು ದ್ವಾರಕಿಗೆ ಆಹ್ವಾನಿಸುವಂತೆಯೂ, ಸರಿಯಾದ ವಸತಿ ಮುಂತಾದುವುಗಳನ್ನು ಏರ್ಪಡಿಸಿಕೊಡುವಂತೆಯೂ ಪ್ರಯತ್ನಮಾಡೋಣ! ಮುಂದೆ ಉಪಾಯಾಂತರದಿಂದ, ನಿನಗೂ ಸುಭದ್ರೆಗೂ ವಿವಾಹವಾಗುವಂತೆ ಅವಕಾಶಕಲ್ಪಿಸುವುದು ಕಷ್ಟವಾಗಲಾರದು' ಎಂದು ನುಡಿದು, ಆತನ ಧನ್ಯವಾದಗಳನ್ನು ಸ್ವೀಕರಿಸಿ,

ಅಲ್ಲಿಂದ ಹೊರಟು ದ್ವಾರಕೆಯನ್ನು ಸೇರಿದನು. ಅರ್ಜುನನೂ ಮುಂದೊಂದು ಅನುಕೂಲಸಂದರ್ಭದಲ್ಲಿ, ತನ್ನ ಪರಿವಾರವನ್ನೆಲ್ಲ ಹಸ್ತಿನಾವತಿಗೆ ಪ್ರಯಾಣಮಾಡುವಂತೆ ಆಜ್ಞೆಮಾಡಿ ಕಳುಹಿಸಿಬಿಟ್ಟು, ತಾನು ಮಾತ್ರ ಶ್ರೀ ಕೃಷ್ಣಮೂರ್ತಿಯ ಆಜ್ಞೆಯಂತೆ, ಕಾಷಾಯವಸ್ತ್ರ - ದಂಡಕಮಂಡಲುಗಳನ್ನು ಧಾರಣಮಾಡಿಕೊಂಡು ತೇಜಸ್ವೀ ಸಾಧುವಿನಂತೆ ತೋರ್ಪಡುತ್ತ, ಮುಂದೇನಾಗಲಿರುವುದೋ ನೋಡೋಣವೆಂದು ತನ್ನ ಸರ್ವಭಾರವನ್ನೂ ಶ್ರೀ ಕೃಷ್ಣನಲ್ಲಿಟ್ಟು, ಆ ತೀರ್ಥಕ್ಕೆ ಸಮೀಪವಾಗಿದ್ದ ರೈವತಕ ಗಿರಿಯ ಒಂದು ಗುಹೆಯಲ್ಲಿ ವಾಸವಾಗಿದ್ದನು.



## ಅಧ್ಯಾಯ ೪ 'ಗುಪ್ತವಿವಾಹ'

ರೈವತಕಪರ್ವತದ ಗುಹೆಯಲ್ಲಿ ವಾಸವಾಗಿದ್ದ ತೇಜಸ್ವಿಯಾದ ತರುಣ ಸಾಧುವು ಪಶುಪಾಲಕರಿಂದ, ದ್ವಾರಕಾನಗರ ನಿವಾಸಿಗಳಿಗೆ ಪರಿಚಯಕ್ಕೆ ಬಂದನು. ಪರಮ ತೇಜೋವಂತನಾದ ಒಬ್ಬ ಸಾಧುವು ತಮ್ಮ ರಾಜಧಾನಿಯ ಬಳಿಗೆ ಬಂದಿದ್ದ ವರ್ತಮಾನವು ತಿಳಿದೊಡನೆಯೇ ನಗರದ ಚಿಕ್ಕವರು ದೊಡ್ಡವರು ಹೆಂಗಸರು ಮುಂತಾಗಿ ಎಲ್ಲರೂ, ಒಬ್ಬೊಬ್ಬರಾಗಿ ಅಲ್ಲಿಗೆ ಹೋಗಿ, ಧ್ಯಾನಪರನಾಗಿಯೋ, ಗ್ರಂಥಾವಲೋಕನ ಪರನಾಗಿಯೋ, ಅಥವ ಉಪಾಸನಾಮಗ್ನನಾಗಿಯೋ ಕುಳಿತಿರುತ್ತಿದ್ದ ಆ ಸಾಧು ಮಹಾಶಯನನ್ನು ಕಂಡು ಆಶ್ಚರ್ಯಮಗ್ನರಾಗಿ ಹಿಂದಿರುಗುತ್ತಿದ್ದರು. ತಲೆಯಲ್ಲಿ ಕೋಮಲವಾಗಿ ಬೆಳೆದಿದ್ದ ಕೇಶಗಳ ವಿಸ್ತಾರವಾದ ಜಟೆಯೂ, ವಿಶಾಲವಾದ ಫಾಲಪ್ರದೇಶವನ್ನು ಹೆಚ್ಚು ತೇಜೋವಂತವಾಗಿ ಮಾಡಿದ್ದ ಬಸ್ಮೋದ್ಧೂಳನವೂ, ಉಟ್ಟಿದ್ದ ಕೆಂಪು ಪೀತಾಂಬರವೂ, ಬೆನ್ನಮೇಲೆ ಇದ್ದ ಒಂದು ದೊಡ್ಡ ವ್ಯಾಘ್ರಚರ್ಮವೂ, ಆಜಾನುಬಾಹು ತೇಜಸ್ವೀ ರೂಪವೂ, ಮಂದಸ್ಮಿತ ಮುಖಾರವಿಂದವೂ, ಪ್ರಫುಲ್ಲಿತ ಕಮಲದಳದಂತೆ ನಸುಕೆಂಪಾಗಿದ್ದ ನೇತ್ರಗಳೂ ನೋಡಿದವರಿಗೆ ಆತನ ವಿಷಯದಲ್ಲಿ ಆನಂದ - ಆಶ್ಚರ್ಯ

ಗಳನ್ನೇ ಅಲ್ಲ - ಭಕ್ತಿ ಗೌರವಗಳನ್ನೂ ಹುಟ್ಟಿಸುವಂತಿದ್ದುವು. ದಿನದಿನಕ್ಕೆ ಗುಹಾವಾಸಿಯಾದ ಯೋಗಿವರ್ಯನಲ್ಲಿಗೆ ಹೋಗಿಬರುವ ದ್ವಾರಕೆಯ ಪ್ರಜಾ ವರ್ಗವು ಸಂಖ್ಯೆಯಲ್ಲಿ ಹೆಚ್ಚುತ್ತ ಬಂತು. ಎಲ್ಲರೂ ಆತನ ಜ್ಞಾನವನ್ನೂ, ವೈರಾಗ್ಯವನ್ನೂ, ಜಿತೇಂದ್ರಿಯತ್ವವನ್ನೂ, ತೇಜಸ್ವಿತೆಯನ್ನೂ, ಅಂದಚೆಂದ ಗಳನ್ನೂ, ಉಡುಪು, ಜಟೆ, ಆಜಾನುಬಾಹುಶರೀರ ಮುಂತಾದುವುಗಳಲ್ಲಿ ತಮತಮಗೆ ಮಹತ್ವವೆಂದು ತೋರಿದುದನ್ನೂ ಕುರಿತು, ತಮ್ಮ ಮನದಣಿಯೆ ಹೊಗಳುತ್ತಿದ್ದರು. ಕ್ರಮಕ್ರಮವಾಗಿ ಸಾಧುವಿನ ಈ ವರ್ಣನೆಯು ಬಲ ರಾಮನ ಕಿವಿಯವರೆಗೂ ಹೋಯಿತು.

ಬಲರಾಮನು ಶ್ರೀಕೃಷ್ಣನನ್ನು ಕುರಿತು-'ಕೃಷ್ಣಾ ಮಹಾನುಭಾವರಾದ ಬಚ್ಚ ಸಾಧುಗಳು ನಮ್ಮ ರೈವತಕಗಿರಿಯ ಗುಹೆಯಲ್ಲಿ ಇದ್ದಾರಂತೆ? ಅವರ ಮಹಿಮೆಯನ್ನು ಜನಗಳು ವಿಧವಿಧವಾಗಿ ಹೇಳಿಕೊಳ್ಳುತ್ತಿದ್ದಾರೆ. ನಾವೂ ಅವರನ್ನು ಕಂಡು ಉಪಚರಿಸಿ ಕರೆತಂದು ಪೂಜಿಸುವುದು ಉಚಿತವಲ್ಲವೆ?' ಎಂದನು. ಆಗ ಕೃಷ್ಣನು- 'ಅಣ್ಣಯ್ಯಾ, ನೀನು ಹೇಳುವುದು ವಾಸ್ತವ. ಆದರೆ ಮಾಯಾಮಂತ್ರಗಳನ್ನು ಮಾಡಿ ಜನಗಳನ್ನು ಬೆರಗುಗೊಳಿಸುವ ಈ ವೇಷಧಾರಿಗಳಾದ ಸಾಧುಸಂತರೆಂಬಿವರಲ್ಲಿ ನನಗೆ ನಂಬಿಕೆಯಿಲ್ಲ. ಇವರಲ್ಲಿ ಬಹುಮಂದಿ ಮೋಸಗಾರರೂ, ದಂಭಾಚಾರಶೀಲರೂ ಇರುತ್ತಾರೆ. ಕೇವಲ ಪರಮಾರ್ಥವಿಚಾರ - ಪರಬ್ರಹ್ಮಸಾಧನೆ ಇವುಗಳಿಗಾಗಿಯೇ ಸಂಸಾರತ್ಯಾಗ ಮಾಡಿರುವವರನ್ನು ಮಾತ್ರವೇ ನಾನು ಗೌರವಿಸುತ್ತೇನಲ್ಲದೆ, ಇಂತಹ ಕಾಷಾಯವಸ್ತ್ರವನ್ನುಟ್ಟುದರಿಂದ ಮಾತ್ರವೇ ಸಾಧು-ಸನ್ಯಾಸಿಗಳೆನಿಸಿಕೊಂ ಡವರನ್ನು ನಾನು ನಂಬಲಾರೆನು' ಎಂದು ನುಡಿದನು.

ಕೃಷ್ಣನ ಮಾತುಗಳು, ಬಲರಾಮನಿಗೆ ಹಿತವೆನ್ನಿಸಲಿಲ್ಲ.—'ಕೃಷ್ಣಾ ನೀನು ಯಾವಾಗಲೂ ಬಲು ನಿಷ್ಠುರಪ್ರಕೃತಿಯವನು. ಮಹಾ ಸಾಧು ಶಿರೋಮಣಿಗಳಾದ ಅವರಲ್ಲಿಯೂ ದೋಷವನ್ನೆಣಿಸಿದೆಯಲ್ಲ. - ಕೂಡದು. ಬಾ. ಅವರನ್ನು ಕರೆತಂದು ಯೋಗ್ಯರೀತಿಯಿಂದ ಸೇವಿಸಿ ಕೃತಾರ್ಥರಾ ಗೋಣ' ಎಂದನು. ಕೃಷ್ಣನು, - 'ಹಿರಿಯರಾದ ತಮ್ಮಲ್ಲಿ ನನಗೆ ಛಲ ವೇಕೆ? ಇದೋ ತಾವು ಹೇಳಿದಂತೆ ಕೇಳುತ್ತೇನೆ. ಎಂತೂ, ಅಂತಹ

ವೇಷಧಾರಿಗಳ ವಿಷಯದಲ್ಲಿ ಜಾಗರೂಕರಾಗಿರಬೇಕೆಂದು ಮಾತ್ರ ಮತ್ತೊಮ್ಮೆ ಒತ್ತಿ ಹೇಳದಿರಲಾರೆ' ಎಂದನು.

ತರುವಾಯ ಶ್ರೀಕೃಷ್ಣನೂ ಬಲರಾಮನೂ, ಇತರ ಕೆಲವರು ಯಾದವ ಮುಖ್ಯರೂ ಹೊರಟು, ರೈವತಕಗಿರಿಯ ಗುಹೆಯೊಂದರಲ್ಲಿ ಅಗ್ನಿಕುಂಡದ ಎದುರಿನಲ್ಲಿ ಭಸ್ಮೋದ್ಧೂಳಿತಗಾತ್ರನಾಗಿ ಕುಳಿತಿದ್ದ ಆ ತೇಜಸ್ವೀ ತರುಣ ಯೋಗಿಯ ಬಳಿಗೆಹೋಗಿ, ನಮಸ್ಕಾರಮಾಡಿ ಆಶೀರ್ವಾದಪಡೆದರು. ವೇಷಧಾರೀ ಯೋಗಿಯು-'ಮಹನೀಯರೇ, ತಾವೀಗ ಬಂದ ಕಾರ್ಯಗೌರವ ವೇನು?' ಎಂದು ಪ್ರಶ್ನಿಸಿದನು. ಬಲರಾಮನು- 'ಪೂಜ್ಯರೇ, ದಯಮಾಡಿ ನಾಳೆದಿನ ರಾಜಮಹಲಿಗೆ ದಯಮಾಡಿ, ಅಲ್ಲಿ ನಮ್ಮ ಆತಿಥ್ಯವನ್ನು ಸ್ವೀಕರಿಸಬೇಕು. ತಮ್ಮ ಪಾದರಜದಿಂದ ನಮ್ಮ ಅರಮನೆಯನ್ನು ಪಾವನಗೊಳಿಸಬೇಕು. ತಮ್ಮಂತಹ ಮಹಾತ್ಮರ ಸಮಾಗಮವಾದರಲ್ಲವೆ ನಮ್ಮ ರಾಜ್ಯವೂ ಪಟ್ಟಣವೂ, ಮನೆಯೂ, ವಂಶವೂ ಪವಿತ್ರವೆನ್ನಿಸಿಕೊಳ್ಳುವುವು!' ಎಂದು ಬಹು ವಿನಯದಿಂದಲೂ ಶ್ರದ್ಧಾಭಕ್ತಿಗಳಿಂದಲೂ ಬಿನ್ನವಿಸಿಕೊಂಡನು.

ಬಲರಾಮನ ಮಾತುಗಳು ಅರ್ಜುನನಿಗೆ ಒಳಗೊಳಗೇ ವಿಶೇಷ ಸಂತೋಷವನ್ನುಂಟುಮಾಡತಕ್ಕವಾಗಿದ್ದರೂ, ಮೇಲೆಮಾತ್ರ ಬಿಂಕಕ್ಕೆ- 'ರಾಜರೇ, ಸನ್ಯಾಸಿಗಳೂ, ಕಾಷಾಯಧಾರಿಗಳೂ ಆದ ನಮಗೆ, ರಾಜಮಂದಿರ ವೇನು-ಜೋಪಡಿಯೇನು? ಈ ನಿಮ್ಮ ರಾಜಧಾನಿಗೆ ಬಂದಾಗಿನಿಂದ, ಮಹಾ ಶ್ರದ್ಧಾಳುಗಳೂ, ದೈವಭಕ್ತಿ-ಗುರುಭಕ್ತಿಗಳುಳ್ಳವರೂ ಆದ ನಿಮ್ಮ ಈ ನಗರವಾಸಿಗಳ ಆದರಾತಿಥ್ಯಗಳಿಂದ ಸಂತುಷ್ಟರಾಗಿದ್ದೇವೆ. ಚಾತುರ್ಮಾಸ್ಯವು ಕಳೆವವರೆಗೆ ಮಾತ್ರ ಇಲ್ಲಿದ್ದು ತರುವಾಯ ಮುಂದೆ ವಾರಣಾಸಿಯ ಕಡೆ ಹೊರಡಬೇಕೆಂದು ನಮ್ಮ ಗುರುಗಳ ಆಜ್ಞೆಯಿದೆ. ಅಷ್ಟರೊಳಗೆ ಮತ್ತೇಕೆ ಶ್ರಮವಹಿಸುತ್ತೀರಿ! ಆಗಾಗ ಬಂದು ಭೇಟಿಕೊಡುತ್ತಿದ್ದರೆ ಸಾಕು' ಎಂದು ನುಡಿದನು.

ಆದರೆ ಬಲರಾಮನು ಅದಕ್ಕೆ ಸಮ್ಮತಿಸದೆ,-ತಮ್ಮೊಂದಿಗೆ ಊರಿಗೆ ಬರಲೇಬೇಕೆಂದು ಒತ್ತಾಯಪಡಿಸಿದನು. ಅರ್ಜುನನು ಏನು ಮಾಡಬಹುದೆಂದು ಗುಪ್ತವಾಗಿ ಶ್ರೀಕೃಷ್ಣನ ಕಡೆಗೆ ನೋಡಲು, ಆತನು ಹಾಗೆ ಮಾಡಬಹುದೆಂದು, ಯಾರಿಗೂ ತಿಳಿಯದಂತೆ ಕಣ್ಣುಮಿಟುಕಿಸಿ ಅನುಮತಿಯನ್ನಿ

ತ್ತನು. ಬಲರಾಮನು, ಓಲಗ ತಾಳಮೇಳಗಳನ್ನು ತರಿಸಿ ಆ ಸಾಧುಪುಂಗವನನ್ನು ಬಹು ವೈಭವದಿಂದ ರಾಜಧಾನಿಯಲ್ಲಿ ಮೆರೆವಣಿಗೆಯಾಗಿ ಕರೆತಂದು, ರಾಜಮಹಲಿನಲ್ಲೇ ಒಂದು ಭಾಗದಲ್ಲಿ ಸಾಧುವಿಗೆ ಬಿಡಾರವನ್ನು ಕಲ್ಪಿಸಿಕೊಟ್ಟನು. ಅವರ ಸೇವೆಗೆಂದು ಸೇವಕಾದಿಗಳನ್ನು ನಿಯಮಿಸಿದಲ್ಲಿ, ಏನಾದರೂ ಲೋಪ ಕಂಡುಬಂದು ಅದರಿಂದ ಸಾಧುಗಳ ಮನಸ್ಸಿಗೆ ವಿಕಲ್ಪವುಂಟಾದೀತೆಂದುಕೊಂಡು, ಅವಿವಾಹಿತಳಾಗಿದ್ದ ತನ್ನ ತಂಗಿ ಸುಭದ್ರಾದೇವಿಯನ್ನೇ ಅವರ ಆದರೋಪಚಾರಗಳಿಗೆಂದು ಏರ್ಪಡಿಸಿದನು.

ಯೋಗೀಶ್ವರರ ಈ ಆಗಮನ ಸಮಾರಂಭವೆಲ್ಲವೂ ಮುಗಿದ ತರುವಾಯ ಅಂದಿನ ರಾತ್ರಿ ಶ್ರೀಕೃಷ್ಣನು ರಹಸ್ಯವಾಗಿ ತಮ್ಮಣ್ಣನ ಬಳಿಗೆ ಹೋಗಿ-'ಅಣ್ಣಯ್ಯಾ, ನನ್ನ ಮಾತುಗಳಲ್ಲಿ ದೋಷವನ್ನೇ ಎಣಿಸದೆ ದಯವಿಟ್ಟು ವಿಚಾರ ಮಾಡಬೇಕೆಂದು ಕೇಳಿಕೊಳ್ಳುತ್ತೇನೆ. ಮನೆತನದ ಗೌರವವನ್ನು ಕಾಪಾಡಿಕೊಳ್ಳುತಕ್ಕುದು ಕರ್ತವ್ಯವಲ್ಲವೆ? ಎಲ್ಲಿಂದಲೋ ಬಂದ ಆ ಯೋಗಿಯು ಎಲ್ಲೋ ಇದ್ದುಕೊಂಡು, ತನ್ನಷ್ಟಕ್ಕೆ ತಾನು ಹೋಗುತ್ತಿದ್ದವನನ್ನು, ತಾವು ಹೋಗಿ ಬಹೂಕರಿಸಿ ಪಟ್ಟಣದೊಳಕ್ಕೆ ಕರೆತಂದಿರಿ. ಅಷ್ಟುಮಾತ್ರವೇ ಅಲ್ಲ. ಆತನನ್ನು ಕರೆತಂದು ರಾಜಮಹಲಿನಲ್ಲೇ ಬಿಡದಿಯನ್ನೇರ್ಪಡಿಸಿಕೊಟ್ಟಿರಿ. ಅದೂ ಹೋಗಲಿ ಎಂದರೆ, ರಾಜಕುಮಾರ್ತೆ ಸುಭದ್ರಾದೇವಿಯನ್ನು ಆತನ ಸೇವೆಗೆಂದು ನಿಯಮಿಸಿದಿರಿ. ಆ ಸಾಧುವಾದರೋ ಪ್ರಾಯಸಮರ್ಥ, ಸುಂದರ, ತೇಜಸ್ವಿ, ಸ್ತ್ರೀಜನರ ಚಿತ್ತಾಕರ್ಷಣೆ ಮಾಡಬಹುದಾದ ಸಕಲ ಲಕ್ಷಣಗಳೂ ಆತನಲ್ಲಿ ಸಂಪೂರ್ಣವಾಗಿವೆ! ನಮ್ಮ ಸುಭದ್ರೆಯೂ ಚಿಕ್ಕಮಗುವಲ್ಲ, ಪ್ರಾಯಸಮರ್ಥೆ, ಸುಂದರಿ, ಅವಿವಾಹಿತಳು. ಅವರಿಬ್ಬರಿರುವ ಸ್ಥಳವಾದರೋ ರಾಜಾಂತಃಪುರ. ವಿಶೇಷವಾಗಿ ಜನಸಂದಣಿಗೆ ಎಡೆಯಾದ ಪ್ರದೇಶವಲ್ಲ. ಆತನು ಸಾಧುವೆಂದೂ, ಮಹನೀಯನೆಂದೂ ಅವರಿವರು ಹೇಳಿದ ಮಾತನ್ನು ನಾವು ಕೇಳಿರುವುದಷ್ಟಲ್ಲದೆ, ಆತನ ಪೂರ್ವೋತ್ತರವನ್ನು ಅರಿತವರಾರೂ ಇಲ್ಲ. ಮುಂದೆ ಏನಾದರೊಂದು ಅವಿವೇಕ ನಡೆದರೆ ವಂಶದ ಕೀರ್ತಿ ಪ್ರತಿಷ್ಠೆಗಳಿಗೆ ಕುಂದಕಬರುವುದೆಂದು ನಾವು ಯೋಚಿಸಬೇಡವೆ? ಈ ಸಂಗತಿಯನ್ನು ದೀರ್ಘವಾಗಿ ವಿಚಾರಮಾಡಬೇಕೆಂದು ಸನ್ನಿಧಿಯಲ್ಲಿ ನನ್ನ ಬಿನ್ನಹ' ಎಂದು ನುಡಿದನು.

ಕೃಷ್ಣನ ಮಾತುಗಳು ಸಮಂಜಸವಾದುವೇ ಆಗಿದ್ದರೂ, ದೈವಮಾಯಾಮೋಹಿತನೋ ಎಂಬಂತಿದ್ದ ಬಲರಾಮನ ಮನಸ್ಸಿನಮೇಲೆ ಅವು ಯಾವ ಪರಿಣಾಮವನ್ನೂ ಉಂಟುಮಾಡಲಿಲ್ಲ. ಆತನು-'ಕೃಷ್ಣಾ, ನೀನು ಹೇಳುವ ಮಾತು ನಿಜವೇ ಆದರೂ, ನಾವು ಯುಕ್ತಾಯುಕ್ತ ವಿಚಾರಮಾಡಬೇಕಲ್ಲವೆ? ಆ ಸಾಧುವಿನ ಮುಖವು ಎಂತಹ ನಿಷ್ಕಳಂಕ ಚರಿತ್ರೆಯನ್ನೂ, ಪವಿತ್ರಸ್ವಭಾವವನ್ನೂ ಪ್ರಕಟಿಸುತ್ತಿದೆಯೆಂಬುದನ್ನು ಗಮನಿಸಬೇಕಲ್ಲವೆ! ಸುಮ್ಮನಿರು, ಹಿರಿಯರ - ಸಾಧುಸಜ್ಜನರ ವಿಷಯದಲ್ಲಿ ದುಷ್ಟಯೋಚನೆಯನ್ನು ಮಾಡಬಾರದು. ನೀನು ಶಂಕಿಸುವಂತಹ ಪ್ರಮಾದವೇನೂ ನಮ್ಮ ಅಂತಃಪುರದಲ್ಲಿ ನಡೆಯಲಾರದು. ಆ ಭಾರ ನನಗಿರಲಿ' ಎಂದು ನುಡಿದು ಬಿಟ್ಟನು.

ಮುಂದೆ ಶ್ರೀ ಕೃಷ್ಣನ ಮಾರ್ಗವು ಸುಗಮವಾಯಿತು. ಬಂದಿರುವ ಸಾಧುವು ವೇಷಧಾರಿಯಾದ ಅರ್ಜುನನೆಂಬುದು ಅಂದಿನ ದ್ವಾರಕೆಯಲ್ಲಿ ಆತನಿಗೊಬ್ಬಗಲ್ಲದೆ ಮತ್ತಾರಿಗೂ ತಿಳಿದಿರಲಿಲ್ಲ. ಆತನಾದರೋ-ಈ ಬಗೆಯ ಸಾಧುಗಳನ್ನು ನಂಬಬಾರದು - ಜಾಗ್ರತರಾಗಿರಬೇಕು, ಎಂದು ಮುಂತಾಗಿ ಮೇಲೆಮೇಲೆ ಹೇಳುತ್ತಲೇ ಬಂದಿರುವುದರಿಂದ, ಮುಂದೆ ಏನಾದರೊಂದು ಹೆಚ್ಚುಕಡಮೆ ನಡೆದಲ್ಲಿ, ಆತನಮೇಲೆ ಯಾವ ಮಾತು ಬರಲೂ ಅವಕಾಶವಿಲ್ಲದಂತಾಯಿತು. ಹಾಗೊಂದುವೇಳೆ ಏನಾದರೂ ನಡೆದಾಗ್ಗೆ - ತಾನು ಮುಂಜಾಗ್ರತೆಯಿರುವಂತೆ ಸಲಹೆ ಕೊಟ್ಟಾಗ್ಗೂ ತನ್ನ ಮಾತನ್ನು ಕೇಳಲಿಲ್ಲನೆಂದು ತಪ್ಪಿಸಿಕೊಳ್ಳಲು ಬೇಕಾದಷ್ಟು ಅವಕಾಶ ಸಿಕ್ಕಿದಂತಾಯಿತು.

ಇತ್ತ ಸಾಧುವಿನ ವಿಚಾರ! ಸಾಧುವನ್ನು ಮೆರೆವಣಿಗೆಯಿಂದ ತಂದಿಳಿಸಿ, ಉಪಚರಿಸಿ ಬಲರಾಮಾದಿಗಳು ಪುನಃ ಬರುತ್ತೇವೆಂದು ಹೇಳಿ ಅಪ್ಪಣೆಪಡೆದು ಹೊರಟುಹೋದರು. ತಮ್ಮಣ್ಣನ ಅಜ್ಞೆಯಂತೆ ಸುಭದ್ರಾದೇವಿಯು ಶ್ರದ್ಧಾಭಕ್ತಿಯುಕ್ತಳಾಗಿ, ತಲೆತಗ್ಗಿಸಿ ನಡೆದು ಬಂದು ಆತನ ಪಾದಕ್ಕಭಿನಮಿಸಿ,-'ಸೇವೆಗೆ ಸಿದ್ಧಳಾಗಿದ್ದೇನೆ. ತನ್ನಿಂದ ಏನು ಕಾರ್ಯವಾಗಬೇಕೋ ಅಪ್ಪಣೆ ಕೊಡಿಸಬೇಕು' ಎಂದಳು. ನಡೆಯುತ್ತಿದ್ದ ಬಂಗಾರದ ಬಳ್ಳಿಯೋ ಎಂಬಂತಿದ್ದ ಆ ಯುವತೀ ಶಿರೋಮಣಿಯನ್ನು ಕಂಡೊಡನೆಯೇ ಅರ್ಜುನನು ಮಂತ್ರಮುಗ್ಧನಂತೆ ಆಗಿಹೋದನು.- 'ಅಹೋ ಇದೇನೀರೂಪ

ರಾಸಿ! ಗಂಧರ್ವ ಅಪ್ಸರಕಿನ್ನರ ನಾಗಕನ್ಯೆಯರಲ್ಲೂ ಈ ಸೌಂದರ್ಯವಿಲ್ಲ ವಲ್ಲ! ರಂಭಾ ಮೇನಕಾದಿಯರು ಇವಳ ಕಿರಿಬೆರಳಿನ ಯೋಗ್ಯತೆಗೂ ಸರಿ ಬರಲಾರರು ಎಂಬಂತಿದೆಯಲ್ಲಾ ಈ ತರುಣೀಮಣಿಯ ರೂಪು ! ನನ್ನ ಭಾಗ್ಯವನ್ನೇನೆನ್ನಲಿ!' ಎಂದು ತನ್ನಲ್ಲಿ ತಾನೇ ಹಿಗ್ಗುತ್ತ-ಶ್ರೀಕೃಷ್ಣನ ಉಪಕಾರಕ್ಕಾಗಿ ಆತನನ್ನು ಮನಸಾ ವಂದಿಸುತ್ತಾ, ಆಕೆಯಿಂದ ತನ್ನ ಸ್ನಾನಪಾನಾದಿಗಳು, ಆಹ್ನಿಕ ಜಪತಪಾದಿಗಳಿಗೆ ಆವಶ್ಯಕವೆನ್ನಿಸುವ ಬಹು ಅಲ್ಪಸ್ವಲ್ಪ ಕೆಲಸಕಾರ್ಯಗಳನ್ನು ಮಾತ್ರ ಮಾಡಿಸಿಕೊಳ್ಳುತ್ತ ಕೆಲಕಾಲ ಸುಖವಾಗಿದ್ದನು.

ಸುಭದ್ರೆಯನ್ನು ನೋಡಿ, ಸಾಧುವಿಗೆ ಹೇಗೆ ಮನಸ್ಸು ಕಲಕಿಹೋ ಯಿತೋ ಹಾಗೆಯೇ ಆಕೆಗಾದರೂ, ಆಜಾನುಬಾಹುವೂ-ವಿಶಾಲ ವಕ್ಷ ಸ್ಥಲನೂ ದಿವ್ಯಸುಂದರವಿಗ್ರಹನೂ ತೇಜಸ್ವಿಯೂ ಆದ ಆ ಸಾಧುರೂಪಿ ಯನ್ನು ಕಂಡೊಡನೆಯೇ ಮನಸ್ಸಿಗೆ, ಪರಮಾಹ್ಲಾದವೆನ್ನಿಸಿತು. ಇದೇ ನಿದು, ಈ ಸುಂದರಪುರುಷನು ಸಾಧುವಿನ ರೂಪದಿಂದ ಇರುವುದು ವಿಚಿತ್ರ ವಾಗಿದೆಯಲ್ಲ. ವೀರಕ್ಷತ್ರಿಯಶಿರೋಮಣಿಯಂತೆ ತೋರುತ್ತಿರುವ ಈ ಮಹನೀಯನು, ಸಾಧುವಾಗಿರುವುದು ಹೇಗೆ ಸಾಧ್ಯ! ಏನಾದರೂ, ಈತನ ಮುಖವೇಕೋ ನನಗೆ ಅತಿಶಯ ಆನಂದದಾಯಕವಾಗಿದೆ. ದೈವಾನುಗ್ರಹ ದಿಂದ, ಈತನೇ ನನ್ನ ಪ್ರಾಣಕಾಂತನಾದ ಅರ್ಜುನನಾಗಿದ್ದು, ನನಗೆ ಈ ಜನ್ಮದಲ್ಲಿ ವಿವಾಹಮೂಲಕ ಪತಿಸಮಾಗಮವಾಗುವ ಲಭ್ಯವಿದ್ದರೆ, ಈ ಮಹಾಪುರುಷನೇ ನನಗೆ ಪತಿಯಾಗುವಂತಾಗಲಿ!' ಎಂದು ತನ್ನ ಮನಸ್ಸಿ ನಲ್ಲೇ ತನ್ನ ಇಷ್ಟದೈವವನ್ನು ಕುರಿತು ಪ್ರಾರ್ಥಿಸಿಕೊಳ್ಳುವಳು.

ಸಾಧುಪುಂಗವನ ಧ್ಯಾನಜಪ ಪೂಜಾದಿಗಳೆಲ್ಲ ಕ್ರಮಕ್ರಮವಾಗಿ ಸಂ ಕೋಚವಾಗತೊಡಗಿದವು. ಆತನು ಕಣ್ಣುಮುಚ್ಚಿದರೆ- ಸುಭದ್ರೆಯ ದಿವ್ಯ ಸುಂದರಮೂರ್ತಿಯೇ ಪ್ರತ್ಯಕ್ಷವಾಗಿರುವುದು. ಆತನ ಚಿತ್ತಫಲಕದಿಂದ ಆ ಯುವತೀಮಣಿಯ ರೂಪಚಿತ್ರವನ್ನು ಚಲನಗೊಳಿಸಲು ಏನು ಮಾಡಿ ದರೂ ಸಾಧ್ಯವಾಗದು. ತಾನಿರುವುದು ರಾಜಾಂತಃಪುರ ; ತನ್ನ ಸೇವೆಗೆ ಇರುವವಳು ಪ್ರಾಯಸಮರ್ಥೆಯಾದ ರಾಜಪುತ್ರಿ ; ಇಂತಹ ಅಪಾಯಕರ ಸ್ಥಳದಲ್ಲಿ ತಾನು ಕತ್ತಿಯ ಅಲುಗಿನಮೇಲಿದ್ದಂತೆ ಜಾಗರೂಕನಾಗಿರಬೇಕು,

ಎಂದು ಆತನಿಗೆ ತಿಳಿಯದಿರಲಿಲ್ಲ. ಆದರೇನು ಮಾಡುವುದು ! ಸುಭದ್ರೆಯು ಕಾರ್ಯಾಂತರವಾಗಿ ಮರೆಯಾಗಿದ್ದಾಗ್ಗೆ ಈ ಬಗೆಯ ಅನೇಕ ನೀತಿಗಳನ್ನು ತನ್ನ ಮನಸ್ಸಿಗೆ ಬೋಧಿಸಿಕೊಳ್ಳುವನು. ಆದರೆ ಆಕೆಯು ಒಂದು ವೇಳೆ ಕಣ್ಣೆದುರಿಗೆ ಬಂದುಬಿಟ್ಟಳೆಂದರೆ, ಮನಸ್ಸೂ - ನೇತ್ರ ಶ್ರೋತ್ರಾದಿ ಇಂದ್ರಿಯಗಳೂ ಆಕೆಯ ರೂಪರಾಸಿಗೆ ಸೂರೆಹೋಗುವುವು. ಆಕೆಯ ಚಂಚಲ ಕಟಾಕ್ಷದೆದುರಿಗೆ ಮಹಾ ಧನುರ್ಧಾರಿಯಾದ ಆ ಧನಂಜಯನ ಚಿತ್ರವೃತ್ತಿಯು ಹಸುಮಗುವಿನ ಮನಸ್ಸಿನಂತೆ ಬಲಹೀನವಾಗಿ ಹೋಗುವುದು. ಅಪರಿಚಿತ ರಾಜಪುತ್ರಿಯನ್ನು, ಅವರ ಅರಮನೆಯಲ್ಲಿ, ಪೂಜ್ಯತಮನಾದ ಸಾಧುವೆಂದೆನಿಸಿಕೊಂಡಿರುವ ತಾನು ಕಣ್ಣಿಟ್ಟು ನೋಡುವುದು ದೂಷ್ಯವಾದುದು ; ಅದು ತನ್ನ ವಿಷಯದಲ್ಲಿ ತಪ್ಪದೆ ಸಂದೇಹವನ್ನುಂಟುಮಾಡುವುದು, ಎಂಬಿವೆಲ್ಲ ಸಂಗತಿಗಳೂ ಆತನಿಗೆ ಚೆನ್ನಾಗಿ ಪರಿಚಯವಿಲ್ಲದಿರಲಿಲ್ಲ. ಆದರೆ ಸುಭದ್ರೆಯು ಒಂದುಬಾರಿ ಕಣ್ಣೆದುರಿಗೆ ಸುಳಿದುಬಿಟ್ಟಳೆಂದೊಡನೆಯೇ ಮಾಂತ್ರಿಕನ ಮಾಯಾದಂಡದಿಂದ ತಾಡಿಸಲ್ಪಟ್ಟವನೋ ಎಂಬಂತೆ ಆತನ ಮನಸ್ಸು ಮುಗ್ಧವಾಗಿ, ಕಣ್ಣು ಆಕೆಯು ಸುಳಿದೆಡೆಯಲ್ಲೆಲ್ಲ ಸುಳಿಯುತ್ತ, ತಾನೊಂದು ಬಾರಿ ನೋಡಿದ ಆಕೆಯ ದೇಹದ ಸೌಂದರ್ಯವನ್ನೇ ನೋಡುತ್ತ, ಕೇವಲ ಜಡವಾಗಿಹೋಗುವುದು. ಆಕೆಯ ಬಾಯಿಂದ ಒಂದು ಮಾತು ಹೊರಟೀತೇ, ಕೋಗಿಲೆಯ ಕಂಠಸ್ವರದಂತೆ ಮಧುರವಾದ ಆ ಸ್ವನವನ್ನು ಕೇಳೇನೇ ಎಂದು ಕಿವಿಗಳು ಕಾತರಗೊಳ್ಳುತ್ತಿರುವುವು.— ಜಪಕ್ಕೆಂದು ಕೈಯಲ್ಲಿ ಹಿಡಿದ ಜಪಸರವು, ಕೇವಲ ಒಂದೊಂದಾಗಿ ಮಣಿಗಳನ್ನೆಣಿಸುತ್ತಿರುವುದಲ್ಲದೆ, ಅದಕ್ಕೂ ಮನೋವೃತ್ತಿಗೂ ಮೇಳವೇ ಇಲ್ಲದೆ, ಜಪಕಾರ್ಯವು ಕುಂಠಿತವಾಗಿ ಹೋಗುವುದು. ಧ್ಯಾನಕ್ಕಾಗಿ ಕಣ್ಣುಮುಚ್ಚಿದನೆಂದೊಡನೆಯೇ, ಸುಭದ್ರೆಯ ಭವ್ಯಮೂರ್ತಿಯ,-ಸ್ಪಷ್ಟವಾದ-ನೇತ್ರಾನಂದಕರವಾದ ಅಂಗಾಗಗಳ ಪರಿಪೂರ್ಣ ಚಿತ್ರವು ಮೂಡಿ ಅಂತರಿಂದ್ರಿಯದ ದೃಷ್ಟಿಯು ಅತ್ತಿತ್ತ ಚಲಿಸದೆ, ಆ ಮೂರ್ತಿಯ ಸೌಂದರ್ಯದಲ್ಲಿ ಮುಗ್ಧವಾಗಿ ಅಲ್ಲೇ ನೆಟ್ಟುಹೋಗುವುದು. ಬಾಯಲ್ಲಿ ಪ್ರಯತ್ನಪೂರ್ವಕ, ನಾರಾಯಣ, ಮಾಧವ, ಪುರುಷೋತ್ತಮ-ಶಂಕರ, ಗೌರೀಧವ, ಪರಮೇಶ್ವರ ಎಂದು ಉಚ್ಚರಿಸಿಕೊಳ್ಳುತ್ತಿದ್ದರೂ, ಮನಸ್ಸು ಮಾತ್ರ ಸರ್ವಕಾಲದಲ್ಲೂ

ಸುಭದ್ರಾ - ಸುಭದ್ರಾ ಎಂದು ಜಪಿಸುತ್ತಿರುವುದು. ಹೀಗಾಗಿ ಅರ್ಜುನನ ಸಾಧುವೇಷದ ಸ್ಥಿತಿಯು ಅತ್ಯಂತ ಶೋಚನೀಯವೆನ್ನಿಸಿತು. ಧೀರೋದಾತ್ತನಾಯಕನಾದ ಪಾರ್ಥನು ತನ್ನ ಮನಸ್ಸು ಎಷ್ಟು ದುರ್ಬಲವಾದುದೆಂದು ಅನೇಕವೇಳೆ ತನ್ನನ್ನೇ ತಾನು ಹಳಿದುಕೊಂಡನು.

ಇತ್ತ ಸುಭದ್ರೆಯ ಸ್ಥಿತಿಯಾದರೂ ಹಾಗೆಯೇ ಇತ್ತು. ಅರ್ಜುನನಿಗಾದರೆ ತನ್ನೆದುರಿಗಿರುವ ವ್ಯಕ್ತಿಯು ತನ್ನ ಮನೋಹಾರಿಣಿಯಾದ - ತನ್ನ ಹೃದಯೇಶ್ವರಿಯಾದ ಸುಭದ್ರೆಯೆಂಬ ಸಂಗತಿಯು ನಿಶ್ಚಯವಾಗಿ ತಿಳಿದಿತ್ತು. ಆದರೆ ಸುಭದ್ರೆಗೆ, ಈ ಸಾಧುಪುಂಗವನಾರೋ, ತನ್ನ ನಗೆನೋಟ ನಡೆನುಡಿಗಳ ವಿಷಯದಲ್ಲಿ ಏನಾದರೂ ವ್ಯತ್ಯಾಸವಾದರೆ ಆತನು ತನ್ನ ವಿಷಯವಾಗಿ ಏನೆಂದುಕೊಳ್ಳುವನೋ, ತಮ್ಮ ವಂಶದ ಪವಿತ್ರತೆಯ ವಿಷಯದಲ್ಲಿ ಎಲ್ಲಿ ಸಂಶಯಗೊಳ್ಳುವನೋ, ತನ್ನ ಚರಿತ್ರೆಯನ್ನು ಕುರಿತು ಎಲ್ಲಿ ದುರ್ಭಾವವನ್ನು ಹೊಂದುವನೋ ಎಂದು ಮನಸ್ಸನ್ನು ಹಿಂಡಿಕೊಂಡು ಭಯಭೀತಿಗಳಿಂದ, ತನ್ನ ಯಾವ ಮಾತಿಗೆ, ಯಾವನ ನಡೆಗೆ ಏನು ಅಪಾರ್ಥವಾಗುವುದೋ ಎಂದು ಬೆದರಿ, ವಿಶೇಷ ಜಾಗರೂಗಕತೆಯಿಂದ ಕೆಲವು ದಿನಗಳು ಸೇವೆಮಾಡಿದಳು.

ಈ ಮಧ್ಯೆ ಅರಮನೆಯಲ್ಲಿ, ಬಲರಾಮನ ಉದ್ದೇಶಾನುಸಾರ ಸುಭದ್ರಾದೇವಿಯನ್ನು ದುರ್ಯೋಧನನಿಗೆ ಕೊಟ್ಟು ಲಗ್ನಮಾಡಬೇಕೆಂಬ ವಿಚಾರದಲ್ಲಿ ಸನ್ನಾಹಗಳು ನಡೆಯತೊಡಗಿದುವು. ಸುಭದ್ರೆಗಾದರೋ ಕೋಟಿ ಮನ್ಮಥ ಸುಂದರಾಕಾರನೂ, ತನ್ನ ಹೃದಯೇಶ್ವರನೂ ಆಗಿರುವ ಅರ್ಜುನನು ಸನ್ನಿಹಿತನಾಗಿರುವ ಯೋಗಿವೇಷಧಾರಿಯೇ ಎಂಬ ವಿಚಾರವು ನಿಶ್ಚಯವಾಗಿ ತಿಳಿಯದೆ, ಮನಸ್ಸು ತಪಿಸುತ್ತಿತ್ತು. -'ಮನಮೆಚ್ಚಿರುವ ಮನೋಹರಾಂಗನಾದ ಅರ್ಜುನನನ್ನಲ್ಲದೆ, ಕುಲವಧುವಾದ ನಾನು ಮತ್ತಾರನ್ನು ತಾನೇ ವಿವಾಹವಾಗಲಿ! ಅಕ್ಕಟಾ ನನ್ನ ಮನವನ್ನೂ ಹೃದಯವನ್ನೂ ಒಂದು ಬಾರಿ ಒಬ್ಬ ಪುರುಷನಿಗೆ ಒಪ್ಪಿಸಿರುವಾಗ, ಈಗ ಅದನ್ನು ಅಲ್ಲಿಂದ ಕಳೆದು ಮತ್ತೊಬ್ಬನ ಪಾಣಿಗ್ರಹಣಮಾಡಿದರೆ, ಅದು ಘೋರಪಾತಕವಲ್ಲವೆ? ಈ ಕಾರ್ಯವನ್ನು ನಾನು ಹೇಗೆಮಾಡಲಿ! ನನ್ನ ಈ ಮನದ ಅನುತಾಪವನ್ನು ಯಾರಲ್ಲಿ ಹೇಳಿಕೊಳ್ಳಲಿ? ನನ್ನ ಹೃದಯವೇದನೆಯನ್ನರಿತು, ಅದನ್ನು

ಆಪ್ಯಾಯನಗೊಳಿಸುವಂತಹ ಮಹನೀಯರಾರು? ನನ್ನ ಪುಣ್ಯೋದಯದಿಂದ, ಅಂತಃಪುರಕ್ಕೆ ಬಿಜಮಾಡಿಸಿರುವ ಈ ಯೋಗಿ ವೇಷಧಾರಿಯು ಯಾರೋ ತಿಳಿಯದಲ್ಲಾ! ಈತನನ್ನು ನೋಡಿದರೆ, ಸಾಮಾನ್ಯನಾಗಿ ತೋರುವುದಿಲ್ಲ. ಯಾರೋ, ಮಹಾ ಪ್ರತಾಪಶಾಲಿಯಾದ ರಾಜಪುತ್ರನಂತೆ ತೋರುತ್ತಿದ್ದಾನೆ. ಹಾಗಲ್ಲದಿದ್ದಲ್ಲಿ, ಇಂತಹ ಭವ್ಯದೇಹ ಸೌಂದರ್ಯವೂ, ಅಜಾನುಬಾಹುಗಳೂ, ವಿಶಾಲ ವಕ್ಷಸ್ಥಲವೂ, ತೇಜಸ್ವೀ ನೇತ್ರಗಳೂ, ಒಬ್ಬ ಸಾಮಾನ್ಯ ಸಾಧುವಿಗೆ ಇರುವುದೆಂದರೇನು? ಇದೇನೋ ವಿಚಿತ್ರವಾಗಿದೆ. ಈಚೆಗೆ ಈತನ ಮನೋಭಾವವೂ ಬದಲಾಗುತ್ತಿರುವಂತಿದೆ. ಈತನು ಮೊದಲಿನಂತಲ್ಲದೆ, ನಾನು ಬಳಿಗೆ ಸೇವೆಗಾಗಿ ಹೋದಾಗಲೆಲ್ಲ, ತಪ್ಪದೆ ನನ್ನ ಕಡೆಗೇ ನೋಡುತ್ತಿರುತ್ತಾನೆ. ನಾನು ತಿರುಗಿನೋಡಿದೊಡನೆಯೇ, ಸಂಕೋಚದಿಂದಲೋ ಎಂಬಂತೆ ಮುಖವನ್ನು ತಿರುಗಿಸಿಕೊಂಡು, ಅನ್ಯಮನಸ್ಕನಾದಂತೆ ನಟಿಸುತ್ತಾನೆ. ಸನ್ಯಾಸಿಯಾದ ತಾನು ಸ್ತ್ರೀಯಾದ ನನ್ನಲ್ಲಿ ಅನುರಕ್ತನಾಗುವುದು ತಪ್ಪೆಂದು ಈತನಿಗೆ ತೋರದೆ? ಹಾಗೆ ತಿಳಿದಿದ್ದರೂ, ಹೀಗೇಕೆ ಆಚರಿಸುತ್ತಿರುವನು? ಚಂಡಶಾಸನನಾದ ನಮ್ಮಣ್ಣ ಬಲರಾಮನ ಪಾಲನೆಗೊಳಪಟ್ಟ ಇಂತಹ ರಾಜಾಂತಪುರದಲ್ಲಿದ್ದು, ಸಾಮಾನ್ಯನಾದ ಯಾವನೊಬ್ಬನು ತಾನೇ, ಹೀಗೆ ರಾಜಕನ್ಯೆಯಾದ ನನ್ನನ್ನು ಕಣ್ಣೆತ್ತಿನೋಡಲು ಧೈರ್ಯಗೊಳ್ಳಬಲ್ಲನು? ಈತನಾರೋ ವೀರಾಗ್ರಣಿಯೆಂದೇ ತೋರುತ್ತಾನೆ! ಒಂದುವೇಳೆ ಈತನೇ ನನ್ನ ಹೃದಯೇಶ್ವರನಾದ ಪಾರ್ಥನಿರಬಹುದೆ?' ಹೀಗೆಲ್ಲಾ ಆ ಯುವತೀಮಣಿಯು ಚಿಂತಿಸುತ್ತಿದ್ದಳು.

ಹೀಗೆ ಅರ್ಜುನನೂ, ಸುಭದ್ರೆಯೂ ಪರಸ್ಪರ ಒಬ್ಬರನ್ನೊಬ್ಬರು ಅಂತರ್ಯವಾಗಿ ಮೆಚ್ಚಿಕೊಂಡು ವಿವಾಹೇಚ್ಛೆಯಿಂದ ಇದ್ದರೂ, ಇಬ್ಬರಲ್ಲಿ ಯಾರೂ ತಮ್ಮ ಇಷ್ಟವಿಂಥದೆಂದು ಪ್ರಕಟಗೊಳಿಸಲಾರದೆ, ತಪಿಸುತ್ತಿದ್ದರು. 'ಅರ್ಜುನನು- ಶ್ರೀಕೃಷ್ಣನ ಇಚ್ಛಾನುಸಾರ ಇಲ್ಲಿಗೆ ಬಂದುದಾಯಿತು. ಮುಂದೆ ಆಗಬೇಕಾದ ಕೆಲಸವನ್ನೆಲ್ಲ ಆತನೇ ಸರಿಗೊಳಿಸುವನು. ಅಷ್ಟರಲ್ಲಿ ದುಡುಕಿ ನಾನೇಕೆ ಈ ಕಾರ್ಯದಲ್ಲಿ ಪ್ರವರ್ತಿಸಿ ಇಲ್ಲದಿದ್ದ ಕಷ್ಟವನ್ನು ತಂದುಕೊಳ್ಳಲಿ' ಎಂದು ಸಮಯಪರೀಕ್ಷಣೆಯಲ್ಲಿ ಸುಮ್ಮನಿದ್ದನು. ಸುಭದ್ರೆಗಾದರೋ ಆ ಧೈರ್ಯವೂ ಇರಲಿಲ್ಲ.— 'ನನ್ನ ತ್ರಿಕರಣಗಳೂ ಕುಂತೀಪುತ್ರನಾದ

ಅರ್ಜುನನೇ ಹೃದಯೇಶನೆಂದು ನಂಬಿವೆ. ಭಗವಾನನು ಆ ನನ್ನ ಉದ್ದೇಶವನ್ನು ಈಡೇರಿಸಿ ನನ್ನನ್ನು ಸತ್ಯಪ್ರತಿಜ್ಞಳನ್ನಾಗಿಸಲಿ' ಎಂದು ಒಂದೇ ದೃಢದಿಂದ ಸಾಧುಸೇವೆಯಲ್ಲಿ ನಿರತಳಾಗಿದ್ದುಬಿಟ್ಟಳು.

ಮುಂದೆ ಕೆಲವು ದಿನಗಳಿಗೆ ತನ್ನ ಚಾತುರ್ಮಾಸ ಸಂಕಲ್ಪವು ಮುಗಿಯುವುದರಿಂದ ತಾನು ಮುಂದೆ ಅಲ್ಲಿಂದ ಹೊರಡಬೇಕಾಗುವುದೆಂದು ಸಾಧುವು ತನ್ನ ಶಿಷ್ಯಳಾದ ಸುಭದ್ರೆಗೂ, ತನ್ಮೂಲಕ ಬಲರಾಮಾದಿಗಳಿಗೂ ತಿಳಿಸಿದನು. ಯಾರ ಸುಂದರಮೂರ್ತಿಯ ದರ್ಶನದಿಂದ ಮನಸ್ಸು ಆಹ್ಲಾದಗೊಳ್ಳುತ್ತಲಿತ್ತೋ ಅಂತಹ ದಿವ್ಯಸುಂದರ ವಿಗ್ರಹನಾದ ಸಾಧುಪುಂಗವನು, ಇನ್ನು ತಮ್ಮ ಅಂತಃಪುರವನ್ನು ಬಿಟ್ಟು ಹೊರಟುಹೋಗುವನಲ್ಲಾ ಎಂದು ಸುಭದ್ರಾದೇವಿಯು, ಮನಸ್ಸಿನಲ್ಲೇ ನೊಂದುಕೊಂಡು, ಮುಂದೇನು ಮಾಡಲೆಂದು ಯೋಚಿಸತೊಡಗಿದಳು.

ಸಕಲರ ಹೃದಯಾಶಯಗಳನ್ನೂ ಕರತಲಾಮಲಕದಂತೆ ತಿಳಿವ ಸರ್ವಜ್ಞನಾದ ಶ್ರೀ ಕೃಷ್ಣಸ್ವಾಮಿಯು, ಸುಭದ್ರಾರ್ಜುನರ ಮನಸ್ಸುಗಳಲ್ಲಿ ಏನಿದ್ದಿತೆಂಬುದನ್ನು ತಿಳಿಯದಿರುವನೆ? - ಇನ್ನು ಅರ್ಜುನನು ಬಹುದಿನಗಳು ಇಲ್ಲಿ ನಿಲ್ಲುವಂತಿಲ್ಲ. ಶೀಘ್ರವಾಗಿಯೇ ಸುಭದ್ರೆಯ ವಿವಾಹವನ್ನುಗುಟ್ಟಾಗಿ ನೆರವೇರಿಸಿ ಈ ವಧೂವರರನ್ನು ಇಲ್ಲಿಂದ ಸಾಗಿಸಲು ಯತ್ನನಡೆಸಬೇಕು ಎಂದು ಆತನು ಯೋಚಿಸಿದನು ಆ ವೇಳೆಗೆ ಸರಿಯಾಗಿ, ಅಲ್ಲೇ ರೈವತಕಗಿರಿಯ ಸಮೀಪದ ಕುಶಸ್ಥಳಿಯೆಂಬಲ್ಲಿ ಒಂದು ದೀಪೋತ್ಸವವನ್ನು ನಡೆಯಿಸಬೇಕೆಂದು ಏರ್ಪಡಿಸಿದನು. ಅದಕ್ಕೆ ದ್ವಾರಕೆಯ ಪ್ರಮುಖ ಯಾದವರೆಲ್ಲರೂ ತಮ್ಮತಮ್ಮ ಹೆಂಡಿರುಮಕ್ಕಳೊಂದಿಗೆ ಪ್ರಯಾಣಮಾಡಿದರು. ಬಲರಾಮನೂ ತನ್ನ ತಾಯಿಯಾದ ರೋಹಿಣಿಯೊಂದಿಗೂ - ತಂದೆಯಾದ ವಸುದೇವ ದೇವಕಿಯರೊಂದಿಗೂ ಹೊರಟನು. ಸುಭದ್ರಾದೇವಿಯು ಹಗಲಿನಲ್ಲಿ ಸಾಧುಗಳ ಸೇವೆಯಲ್ಲಿದ್ದು, ಸಾಯಂಕಾಲ ದೀಪೋತ್ಸವದ ವೇಳೆಗೆ ಅಲ್ಲಿಗೇ ಬರಬೇಕೆಂದು ಅದಕ್ಕೆ ತಕ್ಕ ಏರ್ಪಾಟುಮಾಡಿದ್ದನು. ಶ್ರೀ ಕೃಷ್ಣನು, ಆ ದಿನ ಮಾಡಬೇಕಾದ ಕಾರ್ಯವೇನೆಂಬುದನ್ನು ಮೊದಲೇ ನಿಶ್ಚೈಸಿದ್ದು, ಆದರೆ ಯಾರಿಗೂ ತನ್ನ ವಿಷಯದಲ್ಲಿ ಸಂಶಯವುಂಟಾಗದಂತೆ, ಎಲ್ಲರಿಗಿಂತಲೂ ಮುಂಚಿತವಾಗಿಯೇ ಆ ಉತ್ಸವಸ್ಥಳಕ್ಕೆ ತಲುಪಿ,

ಅಲ್ಲಿಯ ಉತ್ಸವಕಾರ್ಯವನ್ನು ಯಶಸ್ವಿಯನ್ನಾಗಿಸಲು ಅತಿಶಯ ಶ್ರದ್ಧಾವಂತನಾಗಿರುವಂತೆ ಅಲ್ಲೇ ಇದ್ದುಬಿಟ್ಟನು.

ಬಲರಾಮನೂ ಇತರ ಯಾದವಮುಖ್ಯರೂ, ಅಂದಿನ ಸಮಾರಂಭದಲ್ಲಿ ನೆರೆದು ದಿವ್ಯಭೋಜನಮಾಡಿ ಉತ್ಸವಸಮಯವಾದುದರಿಂದ ಅತಿಶಯ ಪಾನಾಸಕ್ತರಾಗಿ, ಮಿತಿಯಿಲ್ಲದೆ ಕುಡಿದು, ಒಡಲು ತಿಳಿಯದೆಬಿದ್ದರು. ಮಿಕ್ಕ ಸ್ತ್ರೀಜನರು, ಅಲ್ಲಲ್ಲಿಯ ಉತ್ಸವಾದಿಗಳನ್ನು ನೋಡುವ ಚಪಲದಲ್ಲೂ, ಗುರುಭೋಜನದ ಆಯಾಸದಲ್ಲೂ, ಕೆಲಸವಿಲ್ಲದಿದ್ದುದರಿಂದ ನಿದ್ರಾದಿಗಳಲ್ಲೂ, ಉದ್ದೇಶವಿಲ್ಲದ ಹಲವು ಬಗೆಯ ಲೋಕಾಭಿರಾಮವಾದ ಮಾತುಕಥೆಗಳಲ್ಲೂ, ತೊಡಗಿ ಅಲ್ಲಲ್ಲೆ ತಂಗಿದ್ದರು.

ಇತ್ತ ಕನ್ಯಾಂತಃಪುರದಲ್ಲಿ ಸುಭದ್ರಾರ್ಜುನರು, ಅಂದು ಅಲ್ಲಿ ಜನಸಂದಣಿಯು ಶುದ್ಧಾಂಗವಾಗಿ ಇಲ್ಲದೆ, ಕೇವಲ ತಾವಿಬ್ಬರೇ ಇದ್ದುದರಿಂದ ಒಬ್ಬರೊಬ್ಬರ ಮನಸ್ಸನ್ನು ಬಿಚ್ಚಿ ಉಭಯರೂ ಹೆಚ್ಚು ಪರಿಚಯಗೊಳ್ಳಲು ಅಂದಿಗಿಂತ ಸುವೇಳೆಯು ಮತ್ತೊಂದು ದೊರೆಯದೆಂದು ಯೋಚಿಸಿಕೊಂಡರು. ಸುಭದ್ರೆಯು ಕಲ್ಲುಸಕ್ಕರೆಯ ಪಾನಕವನ್ನು ಮಾಡಿಕೊಂಡು, ದಿವ್ಯ ಫಲಗಳನ್ನು ತೆಗೆದುಕೊಂಡು ಸಾಧುಮಹಾಶಯನ ಸನ್ನಿಧಿಗೆ ತಂದು ಅವುಗಳನ್ನು ಬಳಿಯಲ್ಲಿಟ್ಟು ಸ್ವೀಕರಿಸಬೇಕೆಂದು ಪ್ರಾರ್ಥಿಸಿ, ಲಾವಂಚದ ಬೀಸಣಿಗೆಯಿಂದ ಬೀಸುತ್ತ ನಿಂತಳು. ಆಗಿನ ಸಂದರ್ಭ, ನಿರ್ಜನಸ್ಥಳ, ಏಕಾಂಗಿಯಾಗಿ ತನ್ನೆದುರಿಗೆ ಬಂದ ಮನೋಹರಾಕಾರಿಣಿಯಾದ ಆ ರಾಜಕನ್ಯೆ! ಈ ಸನ್ನಿವೇಶಗಳಿಂದ ಅರ್ಜುನನು ಮುಗ್ಧನಾದಂತಾಗಿ ಏನೂ ತೋರದಂತೆ, ಕೆಲವೇಳೆ ಸುಮ್ಮನಿದ್ದು ತರುವಾಯ ಒಂದುಬಾರಿ, ಕಣ್ಣೆತ್ತಿ ಆಕೆಯ ಮುಖಕಮಲವನ್ನು ನೋಡಿದನು. ಆ ವೇಳೆಯಲ್ಲೇ ಸುಭದ್ರೆಯೂ ಆತನ ಮುಖವನ್ನು ನೋಡಿದಳು. ನಾಲ್ಕು ಕಣ್ಣುಗಳೂ ಏಕತ್ರ ಕಲೆತುವು. ಒಡನೆಯೇ ಉಭಯರೂ ತಲೆಯನ್ನು ತಗ್ಗಿಸಿಬಿಟ್ಟರು. ಬಹುಹೊತ್ತು ಮೌನವಾಗಿದ್ದ ತರುವಾಯ, ಸುಭದ್ರೆಯೇ - ಮೌನವನ್ನು ಭೇದಿಸಿ- "ಸಾಧುವರ್ಯರೇ, ನೀವು ಭವಿಷ್ಯವನ್ನು ಹೇಳಬಲ್ಲಿರಾ ?' ಎಂದು ಪ್ರಶ್ನಿಸಿದಳು. ಅರ್ಜುನ-'ಏಕೆ ? ಈಗ ಏನು ತಿಳಿಯಬೇಕಾಗಿದೆ?' ಸುಭದ್ರೆಯು ಆ ಪ್ರಶ್ನೆ

ಯನ್ನು ಅಲ್ಲಿಗೇ ಬಿಟ್ಟು - 'ನೀವು ದೇಶದೇಶಗಳನ್ನು ತಿರುಗಿಬಂದೆನೆಂಬುವಿರಲ್ಲಾ, ಹಸ್ತಿನಾಪುರವನ್ನು ಬಲ್ಲಿರಾ ?'

ಅರ್ಜುನ—ಬಲ್ಲೆ, ಅಲ್ಲಿ ಕೌರವರೂ ಪಾಂಡವರೂ ಇರುವರು. ಕೌರವರಲ್ಲಿ ದುರ್ಯೋಧನನಿಗೆ ನಿನ್ನನ್ನು ಕೊಟ್ಟು ಲಗ್ನಮಾಡಬೇಕೆಂದು ನಿಶ್ಚಯವಾಗಿದೆಯಂತಲ್ಲ, ಹೌದೋ!

ಸುಭದ್ರೆ—ಛೀ ಆ ಕೇಡಿಗನನ್ನು ಯಾರು ಮದುವೆಯಾಗುವರು ? ಅಲ್ಲ, ಪಾಂಡವರನ್ನು ನೀವು ಬಲ್ಲಿರಾ ?

ಅರ್ಜುನ—(ಆಸೆಗೊಂಡವನಾಗಿ) ಏಕೆ, ಅವರಲ್ಲಿ ಧರ್ಮಜ ಭೀಮಸೇನರೂ ನಕುಲಸಹದೇವರೂ, ಇಂದ್ರಪ್ರಸ್ಥದಲ್ಲಿ ಸುಖವಾಗಿದ್ದಾರೆ.

ಸುಭದ್ರೆ—ಪಾಂಡವರು ಐವರಲ್ಲವೆ ಸೋದರರು, ನೀವು ನಾಲ್ವರ ಹೆಸರನ್ನೇ ಹೇಳಿದಿರಲ್ಲಾ !

ಅರ್ಜುನ—ಓಹೋ ಇನ್ನೊಬ್ಬ ಅರ್ಜುನನೋ, ಅವನೆಲ್ಲೋ ತೀರ್ಥಯಾತ್ರೆಗೆಂದು ಹೊರಟಿದ್ದಾನಂತೆ! ಹೋಗಿ ಹನ್ನೆರಡು ವರ್ಷಗಳಾದುವಂತೆ. ಎಲ್ಲಿದ್ದಾನೆಂಬ ಸಂಗತಿಯು ತಿಳಿಯದಂತೆ!

ಸುಭದ್ರೆ—(ಒಂದು ನಿಟ್ಟುಸಿರುಬಿಟ್ಟು) ಎಲ್ಲಿದ್ದಾರೆಂಬ ವಾರ್ತೆಯನ್ನು ತಿಳಿದುಕೊಳ್ಳಲು ಯಾರೂ ಪ್ರಯತ್ನಿಸಲಿಲ್ಲವೆ ? ಅಷ್ಟೆ! ಎಷ್ಟಾದರೂ ದಾಯಾದರಲ್ಲವೆ-ಅವರ ಯೋಗಕ್ಷೇಮವೇನಿದ್ದರೂ ಎದುರಿಗಿರುವಾಗಲೇ?

ಅರ್ಜುನ—ಸುಭದ್ರಾ, ಇದೇನು ಅರ್ಜುನನ ವಿಷಯದಲ್ಲಿ ಬಹು ಪರಿತಾಪಗೊಳ್ಳುತ್ತಿರುವೆಯಲ್ಲ-ಅವನನ್ನು ವರಿಸಬೇಕೆಂದು ಮನದಲ್ಲಿ ಇಚ್ಛೆಯೋ ಹೇಗೆ !

ಸುಭದ್ರೆ—ಅಯ್ಯೋ ನಿರ್ಭಾಗ್ಯಳಾದ ನನಗೆ ಅಂತಹ ಮಹಾಪುರುಷರ ಕೈಹಿಡಿವ ಪ್ರಾಪ್ತಿಯುಂಟೇ? ಅಲ್ಲ, ಅವರು ನಮ್ಮತ್ತೆ ಕುಂತೀದೇವಿಯ ಮಕ್ಕಳಲ್ಲೊಬ್ಬರಾದ್ದರಿಂದ ಎಲ್ಲಿ ಹೇಗಿದ್ದಾರೋ ಎಂದು ಕೇಳಿದೆ ಅಷ್ಟೆ! ಎಂದು ಮತ್ತೊಮ್ಮೆ ನಿಟ್ಟುಸಿರುಬಿಟ್ಟಳು.

ಅರ್ಜುನ—ಒಮ್ಮೆ ಆಕೆಯನ್ನು ದಿಟ್ಟಿಸಿನೋಡಿ,-ಸುಭದ್ರಾ ಆತನ ವಿಚಾರವನ್ನು ತಿಳಿಯಲು ನಿನಗೆ ಅಷ್ಟು ಅಪೇಕ್ಷೆಯೇ?

ಸುಭದ್ರೆ—ತಾವು ತ್ರಿಕಾಲಜ್ಞರಾದ್ದರಿಂದ ಅವರೆಲ್ಲಿದ್ದಾರೆಂದು ಹೇಳಿದರೆ....

ಅರ್ಜುನ— ನಿನಗಷ್ಟುಮಟ್ಟಿಗೆ ಅಪೇಕ್ಷೆಯಿದ್ದರೆ-ಸುಭದ್ರಾ... ಎಂದು ಸ್ವಲ್ಪ ಹೊತ್ತು ಸುಮ್ಮನಾದನು. ಸುಭದ್ರೆಯು ಏನುಹೇಳುವನೋ ಎಂದು ಆತನ ಕಡೆಗೆ ಒಮ್ಮೆ ತಿರುಗಿನೋಡಿದಳು.—'ಸುಭದ್ರಾ, ಇಲ್ಲಿ ನೋಡು. ನಿನ್ನೆದುರಿಗೇ ನಿನ್ನ ಸಮೀಪದಲ್ಲೇ ಇದ್ದಾನೆ' ಎಂದು ನುಡಿಯುತ್ತ, ಆ ಲಲಿತಾಂಗಿಯನ್ನು ತೋಳತೆಕ್ಕೆಯಲ್ಲಿ ತೆಗೆದು ಆಲಂಗಿಸಿದನು. ಸುಭದ್ರೆಯು ಭಯ ಆಶ್ಚರ್ಯ ಲಜ್ಜೆಗಳೆಲ್ಲವೂ ಏಕಕಾಲದಲ್ಲಿ ತಲೆದೋರಲು, ಏನು ಮಾಡಬೇಕೆಂದು ತೋರದೆ, ದೇಹವೆಲ್ಲವೂ ರೋಮಾಂಚವಾಗಿ, ಉದುರುತ್ತಿದ್ದ ಆನಂದಬಾಷ್ಪಗಳಿಂದ ಕಣ್ಣು ಕಾಣಿಸದಿರಲು ಅಲ್ಲಿ ನಿಲ್ಲಲು ನಾಚಿ, ಆತನ ತೆಕ್ಕೆಯಿಂದ ಬಿಡಿಸಿಕೊಂಡು ಮನೆಯೊಳಕ್ಕೆ ಓಡಿಹೋದಳು.

ಮುಂದೆ ಸುಭದ್ರೆಯು ಆತನ ಎದುರಿಗೆ ಬರಲು ಸಾಹಸಗೊಳ್ಳಲಿಲ್ಲ. ಇವರಿಬ್ಬರಿಗೂ ಪರಸ್ಪರ ತಾವಾರೆಂಬುದೂ, ತಮ್ಮಲ್ಲೊಬ್ಬರು ಮತ್ತೊಬ್ಬರನ್ನು ಪ್ರೀತಿಸುತ್ತಿರುವರೆಂಬುದೂ ಗೊತ್ತಾಯಿತು. ಸರ್ವಜ್ಞನಾದ ಶ್ರೀಕೃಷ್ಣನು, ಅಂತಃಪುರದಲ್ಲಿ ಪರಸ್ಪರರಿಗಾದ ಈ ಸಂಭಾಷಣೆ-ಪರಿಚಯಗಳ ವಿಚಾರವನ್ನು ತನ್ನ ಜ್ಞಾನದೃಷ್ಟಿಯಿಂದ ತಿಳಿದು, ಸುಭದ್ರೆಯು ಮೆಚ್ಚಿಕೊಂಡಿರುವ ಆ ವರನಿಗೆ ಆಕೆಯನ್ನು ಧಾರೆಯೆರೆದುಕೊಟ್ಟು ಸುರಕ್ಷಿತವಾಗಿ ಕಳುಹಿಸಿಬಿಡತಕ್ಕುದೇ ಈಗ ಕರ್ತವ್ಯವೆಂದು ಭಾವಿಸಿದನು. ಇತ್ತ ಉತ್ಸವಕ್ಕಾಗಿ ನೆರೆದಿದ್ದ ಬಲರಾಮಾದಿಗಳೂ, ಇತರ ಯಾದವ ಮುಖ್ಯರೂ ಪಾನಾದಿಗಳಿಂದ ಮತ್ತರಾಗಿ ಮೈತಿಳಿಯದೆ ಬಿದ್ದಿರಲು, ಶ್ರೀಕೃಷ್ಣನು ತನ್ನ ತಾಯಿತಂದೆಗಳನ್ನು ಮಾತ್ರ ಅಲ್ಲಿಂದ ತನ್ನ ರಥದಲ್ಲಿ ಕರೆದುಕೊಂಡು ಯಾರಿಗೂ ತಿಳಿಯದಂತೆ ನಗರಪ್ರವೇಶಮಾಡಿದನು. ಆತನ ಸಂಕಲ್ಪಾನುಸಾರವಾಗಿ ತ್ರಿಕಾಲಜ್ಞರಾದ ಶ್ರೀ ವೇದವ್ಯಾಸ ಮಹರ್ಷಿಗಳು ಆ ವೇಳೆಗೆ ಸರಿಯಾಗಿ ಅಂತಃಪುರದ್ವಾರದಲ್ಲಿ ಶ್ರೀಕೃಷ್ಣನಿಗೆ ದರ್ಶನಕೊಟ್ಟರು. ಒಡನೆ ಕನ್ಯಾಂತಃಪುರವನ್ನು ಪ್ರವೇಶಿಸಿ, ಅರ್ಜುನ ಸುಭದ್ರೆಯರನ್ನು ಆಶೀರ್ವದಿಸಿ ಹಸೇಜಗುಲಿಯನ್ನು ರಚಿಸಿ, ವಧೂವರರನ್ನು ಅಲ್ಲಿ ಮುಹೂರ್ತಗೊಳಿಸಿದರು. ಶ್ರೀ ವೇದವ್ಯಾಸರೂ, ಕನ್ಯೆಯ ಮಾತಾಪಿತೃಗಳೂ, ಪರಸ್ಪರ ಅನುರಕ್ತರಾ

ಗಿದ್ದ ಆ ವಧೂವರರನ್ನು ವಿಧ್ಯುಕ್ತರೀತಿಯಿಂದ ಕನ್ಯಾದಾನ ವಿಧಿಯಿಂದ ಒಂದುಗೂಡಿಸಿದರು. ಸುಭದ್ರಾದೇವಿಗೆ, ತಾನು ಸಾಧುರೂಪಿಯಾದ ಅರ್ಜುನನನ್ನು ಮೆಚ್ಚಿಕೊಂಡು ವಿವಾಹವಾಗಲಿಚ್ಛಿಗೊಂಡ ವೇಳೆಗೆ ಸರಿಯಾಗಿ ದೈವಯೋಗದಿಂದ ಒದಗಿದ ಈ ವಿಚಿತ್ರ ಪರಿಸ್ಥಿತಿಯನ್ನು ಕಂಡು ಅತ್ಯಾಶ್ಚರ್ಯವೆನ್ನಿಸಿತು. ಅರ್ಜುನನಿಗೂ ಸಹ ಶ್ರೀಕೃಷ್ಣಮೂರ್ತಿಯು ತನಗಾಗಿ ಪಟ್ಟ ಶ್ರಮದ ವಿಚಾರವಾಗಿ ಆತನ ವಿಷಯದಲ್ಲಿ ಅತ್ಯಂತ ಕೃತಜ್ಞತಾಭಾವ ಉದಯಿಸಿತು.

'ಸುಲಗ್ನಾ ಸಾವಧಾನ ಸುಮುಹೂರ್ತಾ ಸಾವಧಾನ' ಎಂತೆಂಬದಾಗಿ ಶ್ರೀ ವೇದವ್ಯಾಸ ಮಹರ್ಷಿಗಳು ತಮ್ಮ ಅಮೃತವಾಕ್ಕಿನಿಂದ ವಧೂವರರನ್ನು ಆಶೀರ್ವದಿಸಿ, ಕನ್ಯಾಶಿರೋಮಣಿಯಾದ ಸುಭದ್ರಾದೇವಿಯನ್ನು ವೀರಾಗ್ರಣಿಯಾದ ಪಾರ್ಥನ ಪಾಣಿಗ್ರಹಣಮಾಡಿಸಿದರು. ಅರ್ಜುನನು, ಅಷ್ಟು ದಿನಗಳಿಂದ ತಾನು ಮನಸಾ ಹಂಬಲಿಸುತ್ತಿದ್ದ ಇಷ್ಟಾರ್ಥವು ಅಷ್ಟು ಸಮಂಜಸ ರೀತಿಯಿಂದ ನೆರವೇರಿದುದಕ್ಕಾಗಿ ಪರಮ ಸಂತುಷ್ಟನಾಗಿ, ತನ್ನ ಹೃದಯೇಶ್ವರಿಯಾದ ಸುಭದ್ರಾದೇವಿಯ ಕೊರಳಲ್ಲಿ ಮಾಂಗಲ್ಯಬಂಧನಮಾಡಿದನು. ಸುಭದ್ರೆಯು ತನ್ನ ಹೃದಯೇಶ್ವರನ ಕಂಠದಲ್ಲಿ ದಿವ್ಯ ಪುಷ್ಪಹಾರವನ್ನು ಸಮರ್ಪಿಸಿ ಪಾದಾಭಿವಾದನಮಾಡಿದಳು. ರೋಹಿಣೀ ವಸುದೇವರೂ, ದೇವಕೀದೇವಿಯೂ ವೇದವ್ಯಾಸ ಮಹರ್ಷಿಗಳೂ, ವೀರಸಂತಾನವನ್ನು ಪಡೆದು ಶ್ರೇಯೋವಂತರಾಗಿರೆಂದು, ಮನಸಾರೆ ಆಶೀರ್ವದಿಸಿದರು. ಲೀಲಾ ಮಾನುಷವಿಗ್ರಹನಾದ ಶ್ರೀಕೃಷ್ಣಮೂರ್ತಿಯ ಈ ನರನಾಟಕದ ವಿಚಿತ್ರ ಸಂವಿಧಾನವನ್ನು ಮೆಚ್ಚಿಕೊಂಡ ಇಂದ್ರಾದಿಗಳು ದೇವದುಂದುಭಿಗಳನ್ನು ಮೊಳಗಿಸಿ - ಜಯಜಯಕಾರಗಳನ್ನು ಪಾಡುತ್ತ ಪುಷ್ಪವರ್ಷವನ್ನು ಸುರಿಸಿದರು.

ತರುವಾಯ ಇನ್ನು ಸಾವಕಾಶವೇಕೆಂದು, ಶ್ರೀಕೃಷ್ಣನು ರಥಾರೋಹಣಮಾಡಿ ಹೊರಡಿರೆಂದು ಅವರಿಗೆ ಅನುಮತಿಯನ್ನಿತ್ತು, ತಾವು, ಅಲ್ಲಿಂದ ಹೊರಟು ಉತ್ಸವ ನಡೆದ ಸ್ಥಳಕ್ಕೆ ಹೋಗಿ ಸೇರಿ, ಯಾರಿಗೂ ಯಾವ ಬಗೆಯ ಸಂದೇಹವೂ ಉಂಟಾಗಲಾಸ್ಪದವಾಗದಂತೆ, ಎಲ್ಲರೊಂದಿಗೆ ಉತ್ಸವದಲ್ಲಿ ಬೆರೆದರು. ಇತ್ತ ಅರ್ಜುನ ಸುಭದ್ರೆಯರು ಲೇಶವೂ ಸಾವಕಾಶ

ಮಾಡದೆ, ಅಂತಃಪುರದಿಂದ ಹೊರಬಿದ್ದು ರಥವನ್ನೇರಿ ಹಸ್ತಿನಾಪುರಾಭಿಮುಖವಾಗಿ ಪ್ರಯಾಣಮಾಡಿದರು. ಅಂತಃಪುರದಲ್ಲಿ ಗುಪ್ತವಾಗಿ ನಡೆದು ಹೋದ ಈ ವಿವಾಹ ವಿಚಾರವು ಅಂದು ಅಲ್ಲಿದ್ದ ಐದು ಮಂದಿಗಲ್ಲದೆ ಮತ್ತಾರಿಗೂ ಪರಿಚಯವಾಗಲಿಲ್ಲ.



ಅಧ್ಯಾಯ ೫ 'ವೀರಸಂತಾನ'

ಸಾಧುವೂ ಸುಭದ್ರಾದೇವಿಯೂ ರಥದಲ್ಲಿ ಕುಳಿತು ರಾಜಮಾರ್ಗದಲ್ಲಿ ಹೊರಟೊಡನೆಯೇ, ಅರಮನೆಯ ಸೇವಕಾವಳಿಯು ಜಾಗೃತಿಗೊಂಡು 'ಹೋ, ಘಾತವಾಯಿತು. ಅಂತಃಪುರದಲ್ಲಿದ್ದ ಸಾಧುವು ರಾಜಪುತ್ರಿಯನ್ನು ಅಪಹರಿಸಿಕೊಂಡು ಓಡುತ್ತಾನೆ' ಎಂದು ಗುಲ್ಲೆಬ್ಬಿಸಿದರು. ಕೆಲವರು ರಥವನ್ನು ಬೆನ್ನಟ್ಟಿ ಓಡಿದರು, ಮತ್ತೆ ಕೆಲವರು ಈ ವಿಚಾರವನ್ನು ಬಲರಾಮ ಮಹಾರಾಜನಿಗೆ ತಿಳಿಸಬೇಕೆಂದು, ಉತ್ಸವಸ್ಥಳಕ್ಕೆ ಓಡಿದರು. ರಥವನ್ನು ಹಿಂಬಾಲಿಸಿ ಹೋದವರು, ಅರ್ಜುನನ ಬಾಣಗಳಿಂದ ಬಾಧೆಗೊಂಡು ಯಾರೆಲ್ಲಾದರೂ ಹೋಗಲೆಂದುಕೊಂಡು ಹಿಂದಿರುಗಿಬಿಟ್ಟರು. ಅರ್ಜುನಾದಿಗಳು ಸಾವಧಾನದಿಂದ ತಮ್ಮ ಮಾರ್ಗದಲ್ಲಿ ಮುಂದರಿಸಿದರು.

'ಸಾಧುವು ಸುಭದ್ರಾದೇವಿಯನ್ನು ಅಪಹರಿಸಿಕೊಂಡು ರಥವನ್ನೇರಿ ಹೊರಟನು' ಎಂಬ ವಾರ್ತೆಯನ್ನು ಮದ್ಯಪಾನದ ಆವೇಶದಲ್ಲಿದ್ದ ಬಲರಾಮನು ಕೇಳಿದೊಡನೆ ರೋಷಾಕ್ರಾಂತನಾದನು. ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು, ಕಟಕಟನೆಂದು ಹಲ್ಕಡಿಯುತ್ತ-'ಎಲ ನರಾಧಮಾ, ಸಾಧುವೆಂದು ನಂಬಿ ಆಶ್ರಯಕೊಟ್ಟರೆ ಇಂತಹ ಮೋಸಮಾಡಿದನೇ!' ಎಂದುಕೊಂಡು, ಒಡನೆ ತನ್ನ ಸೇನೆಯವರನ್ನು ಕರೆದು ಆ ಸಾಧುವೇಷಧಾರೀ ದುರಾತ್ಮನು ಏರಿಹೋಗುತ್ತಿದ್ದ ರಥವನ್ನು ಬೆನ್ನಟ್ಟಿ ಹೋಗಿ, ಆತನನ್ನು ಸೆರೆಗೊಳಿಸಿ ಹಿಡಿತನ್ನಿರೆಂದು ಆಜ್ಞಾಪಿಸಿದನು. ಒಡನೆ ಆ ಸಂಗತಿಯು ಉತ್ಸವಕ್ಕಾಗಿ ನೆರೆದ ಆ ಗುಂಪಿನಲ್ಲಿ ವ್ಯಾಪಿಸಿ ಎಲ್ಲರ ಮನಸ್ಸನ್ನೂ ಅಲ್ಲೋ

ಲಕಲ್ಲೋಲವಮಾಡಿಬಿಟ್ಟಿತು. ಎಲ್ಲರೂ,- 'ಆಹಾ, ಎಂತಹ ಅಕಾರ್ಯವಾಯಿತು. ಎಂತಹ ಪ್ರಮಾದವಾಯಿತು, ಎಂತಹ ಅಚಾತುರ್ಯವಾಯಿತು! ವಂಶದ ಕೀರ್ತಿಗೇ ಕಳಂಕ ಒದಗಿತಲ್ಲಾ!' ಎಂದು ಮುಂತಾಗಿ ಹಲುಬಿಕೊಂಡರು. ಆ ವೇಳೆಗೆ ಅಕಸ್ಮಾತ್ ಅಲ್ಲಿಗೆ ಬಂದ ಶ್ರೀ ಕೃಷ್ಣನು ಈ ವಾರ್ತೆಯನ್ನು ಕೇಳಿ - 'ಅಣ್ಣಯ್ಯಾ, ಇಂತಹ ಸಾಧುವೇಷಧಾರಿಗಳನ್ನು ನಂಬಲಾಗದೆಂದು ನಾನು ಮೊದಲೇ ಹೇಳಲಿಲ್ಲವೆ? ಆಗ ನನ್ನ ಮಾತು ನಿನಗೆ ಪಥ್ಯವಾಗಲಿಲ್ಲ ಈಗ ಅದೇ ನಿಶ್ಚಯವಾಯಿತು' ಎಂದನು. ಕನ್ಯೆಯ ಮಾತಾಪಿತೃಗಳಿಗೂ ಇತರ ಆಪ್ತೇಷ್ಟರಿಗೂ ಏನೆಂದು ಪ್ರತ್ಯುತ್ತರ ಕೊಟ್ಟು ಸಮಾಧಾನಗೊಳಿಸಲೆಂದು ಬಲರಾಮನು ಅತಿಶಯ ಚಿಂತಾಕ್ರಾಂತನಾದನು ಆ ವೇಳೆಗೆ, ಅವರ ರಥವನ್ನು ಬೆನ್ನಟ್ಟಿಹೋಗಿದ್ದ ಸೈನಿಕರಲ್ಲಿ ಅರ್ಜುನನೊಂದಿಗೆ ಹೋರಾಡಿ ಹತಶೇಷರಾಗಿ ಹಿಂದಿರುಗಿದ ಕೆಲವಂದಿ ಗಾಯಗೊಂಡು ನರಳುತ್ತಾ ಬಲರಾಮನ ಬಳಿಗೆ ಬಂದು,—'ಸ್ವಾಮಿ ಆತನು ಕೇವಲ ಸಾಧು ಮಾತ್ರವಲ್ಲ. ಮಹಾಪರಾಕ್ರಮಿಯಾದ ಧನುರ್ಧಾರಿಯು. ಅವರು ಹಸ್ತಿನಾವತಿಯ ಮಾರ್ಗವನ್ನನುಸರಿಸಿ ಪ್ರಯಾಣಮಾಡುತ್ತಿದ್ದರು. ನಮ್ಮ ಸಾವಿರಾರು ಸೈನ್ಯವನ್ನು ಆ ವೀರನು ಲೀಲಾಜಾಲವಾಗಿ ಸೋಲಿಸಿ ನೋಯಿಸಿ ಮುಂದರಿಸಿದನು. ನಮ್ಮ ರಾಜಪುತ್ರಿ ಸುಭದ್ರಾದೇವಿಯೇ ಸಾರಥ್ಯಮಾಡುತ್ತಿದ್ದಳು' ಎಂದು ನುಡಿದರು.

ಈ ಮಾತುಗಳನ್ನು ಕೇಳಿದ ಮೇಲಂತೂ ಬಲರಾಮನಿಗೆ ಮತ್ತೂ ರೋಷವೇರಿ, - ಮಾರುವೇಷದಿಂದ ನಮ್ಮ ಅಂತಃಪುರವನ್ನು ಹೊಕ್ಕು ಈ ಕಾಪಟ್ಯವನ್ನಾಚರಿಸಿದ ಆ ನೀಚನನ್ನು ಹಿಡಿದು ತಕ್ಕಂತೆ ಶಿಕ್ಷಿಸಬೇಕೆಂದು ಘುಡಿಘುಡಿಸುತ್ತ - ತನ್ನ ಹಲಾಯುಧವನ್ನು ಹಿಡಿದು ಮೇಲಕ್ಕೆದ್ದನು. ಅವನೊಂದಿಗೆ ಇತರ ಯಾದವವೀರರೂ ಎದ್ದರು. ಅದನ್ನು ಕಂಡ ಶ್ರೀ ಕೃಷ್ಣನು, ಇನ್ನು ಕ್ಷೇಮವಾಗದೆಂದುಕೊಂಡು, - 'ಅಣ್ಣಯ್ಯಾ, ಇಷ್ಟು ಕಾರ್ಯವಾದಮೇಲೆ ಇನ್ನು ಮರುಗಿ ಪ್ರಯೋಜನವಿಲ್ಲ. ಈ ಯೋಚನೆಯು ಮುಂಚೆಯೇ ಇರಬೇಕಾಗಿತ್ತು. ಈಗ ಹೇಗೂ ನಮ್ಮ ತಂಗಿ ಸುಭದ್ರೆಯು ಅವನ ವಸ್ತುವಾದಳು. ಅವಳೇ ಸಾರಥ್ಯಮಾಡುತ್ತಿದ್ದಳೆಂದು ಸೈನಿಕರು ಹೇಳಿದ ಮಾತನ್ನು ಕೇಳಿದಿರಲ್ಲವೆ? ಇದರಿಂದ ಆತನಲ್ಲಿ ಆಕೆಗೆ

ಇಷ್ಟವಿಲ್ಲವೆಂದು ಅರ್ಥವಾಗುವುದಿಲ್ಲವಷ್ಟೆ! ಅವರವರು ಪರಸ್ಪರ ಮೆಚ್ಚಿ ಕೊಂಡು, ಇಚ್ಛಾನುಸಾರ ವಿವಾಹಮಾಡಿಕೊಂಡಿರುವುದರ ವಿಷಯವಾಗಿ ಯಾರೇನುಮಾಡತಕ್ಕದ್ದಿದೆ! ಅಲ್ಲದೆ, ಅವರ ರಥವು ಹಸ್ತಿನಾಪುರಮಾರ್ಗ ವನ್ನು ಕುರಿತು ಹೋಗುತ್ತಿತ್ತೆಂದು ದೂತರು ಹೇಳುತ್ತಾರೆ ಆತನೊಂದು ವೇಳೆ ಅರ್ಜುನನೇ ಆಗಿರಬಹುದೇ ಎಂದೂ ಸಂದೇಹವಾಗುತ್ತದೆ,' ಎಂದು ನುಡಿದನು. ಶ್ರೀ ಕೃಷ್ಣನ ಈ ಮಾತುಗಳು ಎಲ್ಲರಿಗೂ ಕೌತುಕವನ್ನುಂಟು ಮಾಡಿದುವು. ಬಲರಾಮನಂತೂ ಈ ಪರಿಸ್ಥಿತಿಗಳಿಂದ ಏನೂ ತೋರದೆ ಮೂಕನಂತಾಗಿ ಕುಳಿತನು. ಆ ವೇಳೆಗೆ ಆತನೊಂದಿಗೆ ಯುದ್ಧಕ್ಕೆಂದು ಹೋಗಿದ್ದ ಮತ್ತೆ ಕೆಲಮಂದಿ ದೂತರು ಗಾಯಗೊಂಡು ಹಿಂದಿರುಗಿ, ಆತನು ತಮ್ಮ ಮೇಲೆ ಪ್ರಯೋಗಿಸಿದ್ದ ಕೆಲ ಬಾಣಗಳನ್ನು ತಂದು ಒಪ್ಪಿಸಿದರು.- ಅವುಗಳಮೇಲೆ 'ಅರ್ಜುನ' ಎಂಬ ಅಂಕಿತವು ಇದ್ದುದನ್ನು ನೋಡಿ ಶ್ರೀ ಕೃಷ್ಣನು.—'ಅಣ್ಣಯ್ಯಾ ಈಗಲಂತೂ ಸಂದೇಹವು ಪರಿಹಾರವಾಯಿತು. ನಮ್ಮ ಸೋದರತ್ತೆ ಕುಂತೀದೇವಿಯ ಮಗನಾದ ಅರ್ಜುನನು, ತೀರ್ಥ ಯಾತ್ರೆಗಾಗಿ ರಾಜಧಾನಿಯನ್ನು ಬಿಟ್ಟು ಹೊರಟಿದ್ದನೆಂಬ ವರ್ತಮಾನ ವನ್ನು ಕೇಳಿದ್ದೆ. ಅವನೇ ಇಲ್ಲಿಗೆ ಬಂದು, ಅವನ ವಸ್ತುವಾಗಿದ್ದ ರಾಜ ಕನ್ಯೆಯನ್ನು ಸ್ವೀಕರಿಸಿಕೊಂಡು ಹೋಗಿದ್ದಾನೆ. ನಾವೇ ಅವನನ್ನು ಕರೆದು ಕನ್ಯಾದಾನ ಮಾಡಿಕೊಡಬೇಕಿತ್ತು; ಅವನೇ ಆ ಕೆಲಸಮಾಡಿದಂ ತಾಯಿತು.' ಎಂದು ನುಡಿದನು. ಆ ನುಡಿಗೆ ಬಲರಾಮನು-'ಕೃಷ್ಣಾ, ಬಹು ಪರಾಕ್ರಮಿಯೆಂದು ನೀನು ಹೊಗಳುತ್ತಿದ್ದ ಅರ್ಜುನನು ಸ್ತ್ರೀಯನ್ನು ಚೌರ್ಯದಿಂದ ಅಪಹರಿಸಿಕೊಂಡು ಹೋಗುವಂತಹ ಹೇಡಿಯಾದನಲ್ಲಾ!' ಎಂದು ಮೂದಲಿಸಿದನು. ಅದಕ್ಕೆ ಶ್ರೀ ಕೃಷ್ಣನು, -'ಆರ್ಯಾ ಹಾಗಲ್ಲ, ಅರ್ಜುನನು ಕ್ಷತ್ರಿಯನಿಗೆ ಯುಕ್ತವಾದ ರಾಕ್ಷಸ- ಪೈಶಾಚ ವಿಧಾನಗಳ ವಿವಾಹ ಪದ್ಧತಿಯಿಂದಲೇ ಸುಭದ್ರೆಯನ್ನು ಸಂಗ್ರಹಿಸಿಕೊಂಡುಹೋಗಿ ದ್ದಾನೆ. ಹೇಗೂ ನಮ್ಮ ತಂಗಿಯು ಅವನ ವಸ್ತುವಾದಳು; ಇನ್ನು ಕೋಪಿ ಸಿಕೊಂಡು ಪ್ರಯೋಜನವೇನು?' ಎಂದನು.

ವಸುದೇವದೇವಕಿಯರೂ ರೋಹಿಣೀದೇವಿಯೂ, ತಮ್ಮ ಪುತ್ರಿಯು ಕ್ಷತ್ರಿಯೋತ್ತಮನೂ ವೀರಾಗ್ರೇಸರನೂ ಆದ ಧನಂಜಯನನ್ನು ವರಿಸಿದ

ಳೆಂಬ ವಾರ್ತೆಯನ್ನು ಈಗತಾನೇ ಕೇಳಿದವರಂತೆ ಪರಮಾನಂದಗೊಂಡರು. ಬಲರಾಮನು ಆ ಸಂದರ್ಭಗಳನ್ನೆಲ್ಲಾ ಸಾವಧಾನವಾಗಿ ಪರಿಭಾವಿಸಿ - 'ಕೃಷ್ಣಾ, ಕೈಮಿಂಚಿಹೋದಮೇಲೆ ಇನ್ನು ಉಪಾಯವೇನಿದೆ? ಮುಖ್ಯ ದುರ್ಯೋಧನನು ನಿರ್ಭಾಗ್ಯನು ಈಗ ಉಳಿದಿರುವುದೊಂದೇ ಮಾರ್ಗ! ಸಾಧುವೇಷದಿಂದ ಬಂದು ನಮ್ಮ ಅರಮನೆಯಲ್ಲಿ ತಂಗಿದ್ದು, ನಮ್ಮ ಸೋದರಿಯನ್ನು ವಿವಾಹಮಾಡಿಕೊಂಡು ಹೋದವನು ಅರ್ಜುನನೇ ಎಂಬ ಸಂಗತಿಯು ನಮಗೆ ವಿರೋಧವೆಂದು ತೋರಿದ್ದಲ್ಲಿ ನಾವು ಆತನನ್ನು ಬೆನ್ನಟ್ಟಿ ಹೋಗಿ ಜಯಿಸಬೇಕು; ಹಾಗಿಲ್ಲದೆ ಅದು ಸಮ್ಮತವಾಗಿದ್ದಲ್ಲಿ ಆತನನ್ನು ಪುನಃ ಕರೆತಂದು, ಯೋಗ್ಯರೀತಿಯಿಂದ ವಿವಾಹಮಾಡಿಕೊಟ್ಟು ವಧೂವರರಿಗೆ ಉಡುಗೆರೆ ಉಂಬಳಿ ಮುಂತಾದುವನ್ನು ಕೊಟ್ಟು ಗೌರವಿಸಬೇಕು. ಇದು ಸೂಕ್ತವೆಂದು ನನಗೆ ತೋರುತ್ತದೆ' ಎಂದನು. ಎಲ್ಲರೂ ಅದು ಸರ್ವೋತ್ಕೃಷ್ಟವಾದ ಸಲಹೆಯೆಂದರು. ಶ್ರೀ ಕೃಷ್ಣನು - 'ಅಣ್ಣಯ್ಯಾ ತಾವು ಹೇಳುವುದು ಸರಿಯೆ. ಆದರೆ ವಿವಾಹ ಕಾರ್ಯವೇನೋ ಕ್ಷತ್ರಿಯರಿಗೆ ವಿಧ್ಯುಕ್ತವಾಗಿರುವ ಗಾಂಧರ್ವ ವಿಧಿಯಿಂದ ನಡೆದುಹೋಗಿರುವುದರಿಂದ ಈಗ ಕನ್ಯೆಯನ್ನು ಒಪ್ಪಿಸಿಕೊಡುವ ಕೆಲಸ ಮಾತ್ರವೇ ಮಿಕ್ಕಿರುವಂತೆ ಇದೆ. ಆದುದರಿಂದ ನಾವು ಈಗ ಪಾಂಡವ ರಾಜಧಾನಿಗೆ ಪ್ರಯಾಣ ಮಾಡಿ, ಕನ್ಯೆಯನ್ನು ಒಪ್ಪಿಸಿಕೊಟ್ಟು ಬಂದರಾಯಿತು' ಎಂದನು. ಆ ಮಾತು ಬಲರಾಮನಿಗೂ ಇತರರಿಗೂ ಸಮ್ಮತವಾಯಿತು. ಒಡನೆ ಬಲರಾಮನ ಆಜ್ಞೆಯಿಂದ ಸಕಲ ಸಿದ್ಧತೆಗಳೂ ಆಗತೊಡಗಿದುವು.

ಇತ್ತ ತಮ್ಮನ್ನು ಬೆನ್ನಟ್ಟಿ ಬಂದ ಯಾದವ ಸೈನ್ಯವನ್ನು ಸೋಲಿಸಿ ಬಡಿದಟ್ಟಿ, ಅರ್ಜುನನು ತನ್ನ ಪ್ರಿಯಪತ್ನಿಯೊಂದಿಗೆ ಮುಂದೆ ಪ್ರಯಾಣ ಮಾಡಿದನು. ಸಾರಥ್ಯಮಾಡುವಿಕೆಯಲ್ಲಿ ಸುಭದ್ರೆಗಿದ್ದ ಕೈಚಳಕವನ್ನು ಕಂಡು ಆತನಿಗೆ ಪರಮಾಶ್ಚರ್ಯವಾಯಿತು. ಇಬ್ಬರೂ ಮಾರ್ಗದಲ್ಲಿನ ವಿವಿಧ ದೃಶ್ಯಗಳನ್ನು ಕಂಡು ವಿನೋದಗೊಳ್ಳುತ್ತ, ಪ್ರಕೃತಿ ಸೌಂದರ್ಯವನ್ನು ನೋಡಿ ಆನಂದಿಸುತ್ತ, ಉತ್ಸಾಹವು ಉಕ್ಕುತ್ತಿರಲು ಉಭಯರೂ ಪ್ರಣಯ ಸಂಬಂಧ ಸಂಭಾಷಣೆಯಿಂದ ಪರಮಾನಂದಗೊಳ್ಳುತ್ತ, ಮಾರ್ಗ ಕ್ರಮಣಮಾಡಿದರು. ಅರ್ಜುನನು ಹನ್ನೆರಡು ವರ್ಷಗಳ ಕೆಳಗೆ ನೋಡಿದ್ದ

ವೃದ್ಧಳಾದ ತನ್ನ ಪ್ರಿಯ ಮಾತೃವನ್ನೂ ಪ್ರೇಮಾಸ್ಪದರಾದ ಭ್ರಾತೃಗಳನ್ನೂ ಪ್ರಿಯಪತ್ನಿ ದ್ರೌಪದಾದೇವಿಯನ್ನೂ ನೋಡಬೇಕೆಂಬ ಆಸೆಯು ಮನಸ್ಸಿನಲ್ಲಿ ಉಕ್ಕುತ್ತಿರಲು, ಶೀಘ್ರವಾಗಿ ಪ್ರಯಾಣಮಾಡುತ್ತ, ಅನೇಕ ಗಿರಿ ವನ ನದಿ, ಹಳ್ಳಿ ಹೊಳಲುಗಳನ್ನು ದಾಟಿ, ಇಂದ್ರಪ್ರಸ್ಥ ರಾಜಧಾನಿಯ ಸಮೀಪಕ್ಕೆ ಬಂದರು. ತಮ್ಮ ರಾಜಪುತ್ರನು ಸ್ವಪುರಾಭಿಮುಖವಾಗಿ ಪ್ರಯಾಣವಾಗಿ ಬರುತ್ತಿದ್ದಾನೆಂಬ ವಾರ್ತೆಯನ್ನು ಕೇಳಿದ ಇಂದ್ರಪ್ರಸ್ಥದ ಪ್ರಜೆಗಳು ಪರಮ ಸಂಭ್ರಮದಿಂದ ತಮ್ಮ ಕೆಲಸಕಾರ್ಯಗಳನ್ನು ಬದಿಗೊತ್ತಿ, ಬಹು ದಿನಗಳಮೇಲೆ ಬಂದ ಧನಂಜಯನನ್ನೂ, - ಆತನೊಂದಿಗೆ ಬಂದ ನವಮೋಹನಾಂಗಿಯಾದ ಸುಭದ್ರಾದೇವಿಯನ್ನು ನೋಡಲು ಉತ್ಸುಕಗೊಂಡು, ಮನೆಯ ಮಾಳಿಗೆಗಳಮೇಲೂ, ಬೀದಿಬೀದಿಗಳಲ್ಲೂ ನೆರೆದರು.

ಸುಭದ್ರಾರ್ಜುನರು ಉತ್ಸಾಹಭರಿತರಾದ ಪಟ್ಟಣಿಗರ ಜಯಜಯಕಾರಗಳೊಂದಿಗೆ ನಗರಪ್ರವೇಶಮಾಡಿದರು. ತಮ್ಮ ಸೋದರನು ಶ್ರೀಕೃಷ್ಣಸೋದರಿಯನ್ನು ಪತ್ನಿಯಾಗಿ ಪಡೆದು ಆ ತನ್ನ ಸತೀಮಣಿಯೊಂದಿಗೆ ಬರುತ್ತಿರುವನೆಂಬ ವಾರ್ತೆಯನ್ನು ಕೇಳಿದಾಗಿನಿಂದ, ಅವರ ಬರವನ್ನೇ ಎದುರುನೋಡಿಕೊಂಡಿದ್ದ ಯುಧಿಷ್ಠಿರಾದಿಗಳು, ರಥವು ಬಂದು ಅರಮನೆಯ ಬಾಗಿಲಲ್ಲಿ ನಿಂತೊಡನೆಯೇ ಅರಮನೆಯಿಂದ ಹೊರಕ್ಕೆ ಬಂದು ಹಸನ್ಮುಖದಿಂದ ಆತನ ಆಗಮನವನ್ನು ಅಭಿನಂದಿಸಿದರು. ಅರ್ಜುನನು ಪತ್ನಿಯೊಂದಿಗೆ ಒಡನೆ ರಥದಿಂದಿಳಿದು, ಕುಂತೀದೇವಿಗೂ ಯುಧಿಷ್ಠಿರ ಭೀಮಸೇನರಿಗೂ ನಮಸ್ಕರಿಸಿ, ನಕುಲ ಸಹದೇವರನ್ನು ಆಲಿಂಗಿಸಿ, ಮಿಕ್ಕ ಬಂಧುಬಳಗದವರನ್ನೂ ಪರಿವಾರ ಜನಗಳನ್ನೂ ಪ್ರೇಮಪೂರ್ವಕವಾದ ಕುಶಲಪ್ರಶ್ನಾದಿಗಳಿಂದಲೂ ಮಂದಸ್ಮಿತ ಕಟಾಕ್ಷದಿಂದಲೂ ನೋಡಿ ಸಂತೋಷಪಡಿಸಿದನು. ಯುಧಿಷ್ಠಿರನು, ಆ ನೂತನ ವಧೂವರರನ್ನು ವಿಶೇಷ ಸಂಭ್ರಮದಿಂದ ಗೃಹಪ್ರವೇಶಗೊಳಿಸಿ, ಸಕಲ ವಿಧಗಳಿಂದಲೂ ಸತ್ಕರಿಸಿದನು. ಸುಭದ್ರಾದೇವಿಯು, ಪೂಜ್ಯಳಾದ ತನ್ನ ಅತ್ತೆ ಕುಂತೀದೇವಿಗೂ ಭಾವ-ಮೈದುನಂದರಿಗೂ, ಪಾವೆಯಲ್ಲಿ ಅಕ್ಕನಾದ ದ್ರೌಪದಾದೇವಿಗೂ ನಮಸ್ಕರಿಸಿದಳು. ದ್ರೌಪದಿಯೂ ಕುಂತಿಯೂ ವೀರಪ್ರಸೂತೆಯಾಗೆಂದು ಆಶೀರ್ವದಿಸಿದರು. ತರುವಾಯ ಅರಮನೆಯಲ್ಲಿ ವಿಶೇಷ ಸಂಭ್ರಮದಿಂದ ಆರತಿ ಅಕ್ಷತೆಗಳನ್ನು

ನಡೆಸಿ, ವಿವಾಹವು ನಿಜವಾಗಿ ಮತ್ತೊಮ್ಮೆ ಇಂದ್ರಪ್ರಸ್ಥದಲ್ಲಿ ನಡೆಯಿತೋ ಎಂಬಷ್ಟುಮಟ್ಟಿಗೆ ವೈಭವದಿಂದ ಉತ್ಸವ - ಮೆರೆವಣಿಗೆ ದಾನದಕ್ಷಿಣೆಗಳು ಮುಂತಾದುವನ್ನು ನಡೆಸಿದರು.

ಈ ಉತ್ಸವ ವೈಭವಾದಿಗಳು ಮುಗಿದುವೆಂಬ ವೇಳೆಗೆ ದ್ವಾರಕೆಯಿಂದ ದೂತನೊಬ್ಬನು ಬಂದು, ಕನ್ಯೆಯನ್ನು ಗೃಹಪ್ರವೇಶಮಾಡಿಸಿಕೊಡಲು ಶ್ರೀ ಬಲರಾಮ ಕೃಷ್ಣಸ್ವಾಮಿಗಳೂ ವಸುದೇವಾದಿ ವೃದ್ಧರೂ, ದೇವಕಿರೋಹಿಣಿ ಮುಂತಾದ ಸ್ತ್ರೀ ಜನರೂ, ಸಾತ್ಯಕಿ ಪ್ರದ್ಯುಮ್ನಾದಿ ಯದುವೀರರೂ ಹೊರಟು ಇಂದ್ರಪ್ರಸ್ಥಾಭಿಮುಖವಾಗಿ ಪ್ರಯಾಣವಾಗಿ ಬರುತ್ತಿದ್ದಾರೆ ಎಂದು ತಿಳಿಸಿದನು. ಆ ವಾರ್ತೆಯನ್ನು ಕೇಳಿದೊಡನೆ ಯುಧಿಷ್ಠಿರನು, ಪರಮ ಸಂಭ್ರಮದಿಂದ ಅವರನ್ನು ಉಚಿತ ರೀತಿಯಿಂದ ಎದುರುಗೊಳ್ಳಲು ಸಕಲಸಿದ್ಧತೆಗಳನ್ನೂ ಮಾಡಿಕೊಂಡು, ನಗರ ಶೃಂಗಾರವಾಗಲೆಂದು ಆಜ್ಞೆಯಿತ್ತು, ಅವರ ಬರವನ್ನೇ ಎದುರುನೋಡಿಕೊಂಡಿದ್ದನು. ಅವರು ನಗರ ಸಮೀಪಕ್ಕೆ ಬಂದೊಡನೆಯೇ ಶುಭಮಂಗಳ ದ್ರವ್ಯಗಳನ್ನು ಒಬ್ಬರಮೇಲೊಬ್ಬರು ಎರೆಚಿ ಎದುರುಗೊಂಡು, ಪಾಂಡುವರು ಯದುಮುಖ್ಯರನ್ನು ಆಲಂಗಿಸಿಕೊಂಡು ಹಸನ್ಮುಖದಿಂದ ಸಕಲರನ್ನೂ ಆದರಿಸಿ ಪ್ರೇಮಪೂರ್ವಕ ಸಂಭಾಷಣೆ ನಡೆಸಿ, ದಿವ್ಯ ಮಂಗಳ ವಾದ್ಯಗಳ ರವವು ದಶದಿಕ್ಕುಗಳಿಗೂ ವ್ಯಾಪಿಸಿರಲು ನಗರದ ಮುಖ್ಯ ರಾಜಮಾರ್ಗಗಳಲ್ಲಿ ಬೀಗರನ್ನು ಕರೆತಂದು ಭವ್ಯರಾಜಭವನಗಳಲ್ಲಿ ಇಳಿಸಿ, ವಿಶೇಷ ರೀತಿಯಿಂದ ಉಪಚರಿಸಿದರು. ಯಾದವ ಸ್ತ್ರೀ ಜನರನ್ನು ಆದರಿಸುವ, ಉಪಚರಿಸುವ ಮುಂತಾದ ಕಾರ್ಯಗಳೆಲ್ಲವೂ ದ್ರೌಪದಿಯ ಮತ್ತು ಆಕೆಯ ಸಖಿಯರ ಪಾಲಿಗಿದ್ದುವು. ಮುಂದೆ ಒಂದು ಪಕ್ಷಕಾಲ ಇಂದ್ರಪ್ರಸ್ಥದಲ್ಲಿ ಸುಭದ್ರಾರ್ಜುನರ ವಿವಾಹ ಸಂಬಂಧವಾದ ಬಗೆಬಗೆಯ ಉತ್ಸವಾದಿಗಳು ಅತ್ಯಂತ ವಿಜೃಂಭಣೆಯಿಂದ ನಡೆಯಿಸಲ್ಪಟ್ಟುವು. ಬಲರಾಮ ಶ್ರೀಕೃಷ್ಣರು, ತಮ್ಮ ತಂಗಿಗೂ ಮೈದುನನಿಗೂ ಬಹು ಬೆಲೆಯ ಅನೇಕಾನೇಕ ವಸ್ತ್ರಾಭರಣಗಳನ್ನೂ ವೀರೋಚಿತವಾದ ಖಡ್ಗ, ಬಿಲ್ಲುಬಾಣಗಳು, ಪರಶು, ತೋಮರ, ಚಕ್ರ ಮುಂತಾದ ಶ್ರೇಷ್ಠವಾದ ಆಯುಧಗಳಲ್ಲಿ ಉತ್ತಮೋತ್ತಮವಾದುವನ್ನೂ ಹಸ್ತಿ ಅಶ್ವ ರಥ ಪದಾತಿಗಳನ್ನೂ ಬಹುಮಾನವಾಗಿ ಕೊಟ್ಟು, ನಮಸ್ಕಾರಮಾಡಿದ

ಸುಭದ್ರೆಯನ್ನು ವೀರಾಗ್ರಗಣ್ಯನಾದ ಮಗನನ್ನು ಪಡೆಯೆಂದು ಆಶೀರ್ವದಿಸಿದರು. ತರುವಾಯ ಯುಧಿಷ್ಠಿರನ ಪ್ರಾರ್ಥನೆಯಂತೆ ಒಂದುತಿಂಗಳಕಾಲ ಅಲ್ಲಿದ್ದು, ತರುವಾಯ ರಾಜಕಾರ್ಯಗಳ ಆತುರದಿಂದ ಅವರಿಂದ ಕಳುಹಿಸಿಕೊಂಡು ಎಲ್ಲರೂ ಹೊರಟು, ಪರಮಸಂತೋಷದಿಂದ ದ್ವಾರಕಾನಗರಿಯನ್ನು ಸೇರಿದರು. ಹೀಗೆ ಈ ವಿವಾಹದಿಂದ, ಯಾದವ-ಪಾಂಡವ ವಂಶಗಳಿಗೆ ಗಾಢತರವಾದ ಮೈತ್ರಿಯು ಏರ್ಪಡಲವಕಾಶವಾಯಿತು. ಶ್ರೀಕೃಷ್ಣನು ಪಾಂಡವರಿಗೆ ಪರಮಾಪ್ತನಾದನು. ಇಂತು ಪಾಂಡವರ ವಂಶೋನ್ನತಿ ಸಾಧಕವಾದ ಕ್ಷೇತ್ರವೊಂದು ಅವರಿಗೆ ಲಭ್ಯವಾದಂತಾಯಿತು.

ಸುಭದ್ರಾದೇವಿಯು ಶ್ರೀಕೃಷ್ಣಸ್ವಾಮಿಯ ಭಗಿನಿಯೆಂಬ ಕಾರಣದಿಂದಲಂತೂ ಆಕೆಯನ್ನು ಸರ್ವರೂ ವಿಶೇಷ ಗೌರವಭಾವದಿಂದ ಕಾಣುತ್ತಿದ್ದರು. ಸುಭದ್ರೆಯು ಅಂತಃಪುರದಲ್ಲಿ ಹಿರಿಯರು ಕಿರಿಯರು ಎಂಬ ಭೇದವಿಲ್ಲದೆ ಸರ್ವರ ಪ್ರೀತಿ ವಿಶ್ವಾಸಗಳಿಗೂ ಪಾತ್ರಳಾದಳು. ಆಕೆಯ ಹಸನ್ಮುಖ, ಮೃದುನುಡಿ, ದಯಾರ್ದ್ರಸ್ವಭಾವ, ದೀನಾನಾಥರಲ್ಲಿ ಆಕೆಗಿದ್ದ ಮಮತೆ ವಿಶ್ವಾಸಗಳು, ಸೇವಕಾವಳಿಯನ್ನು ಪುತ್ರವಾತ್ಸಲ್ಯದಿಂದ ನೋಡಿಕೊಳ್ಳುತ್ತಿದ್ದ ಆಕೆಯ ಮಾತೃಹೃದಯ ಈ ಎಲ್ಲವೂ ಆಕೆಗೆ ಸರ್ವರೂ ತಲೆಬಾಗಿ ನಡೆವಂತೆ ಮಾಡಿದುವು. ಸುಭದ್ರೆಯು ತನ್ನ ವಿನಯ ವಿಧೇಯತೆಗಳಿಂದ ಅತ್ತೆಮಾವಂದಿರನ್ನೂ, ಗೌರವ-ವಿಶ್ವಾಸಭಾವಗಳಿಂದ ಭಾವಂದಿರು ಮೈದುನಂದಿರನ್ನೂ, ಸ್ನೇಹಪ್ರೇಮಗಳಿಂದ ದ್ರೌಪದೀ ಮುಂತಾದ ಸಾಪತ್ನೀವರ್ಗವನ್ನೂ ಮೆಚ್ಚಿಸಿ, ಸರ್ವರಿಂದಲೂ ಪರಮಗುಣಾಢ್ಯೆಯೆಂದು ಹೊಗಳಿಸಿಕೊಂಡಳು. ಅರ್ಜುನನು ತನ್ನಾ ಪ್ರೇಯಸಿಯ ಅಂತರ್ಬಾಹ್ಯ ಸೇವೆಗಳಿಂದ ಸಂತುಷ್ಟನಾಗಿ, ಆಕೆಯ ಸುಗುಣ ಸಂಪತ್ತಿಗಾಗಿ ಮೆಚ್ಚಿಕೊಂಡನು.

ಹೀಗೆ ಪರಸ್ಪರ ಮೆಚ್ಚಿಕೊಂಡ ಆ ದಂಪತಿಗಳು ಕೆಲವುಕಾಲ ದಾಂಪತ್ಯಭೋಗಗಳನ್ನು ಅನುಭವಿಸಿಕೊಂಡಿರಲು, ಸುಭದ್ರೆಯಲ್ಲಿ ಗರ್ಭಚಿನ್ಹೆಗಳು ಕಾಣಿಸಿಕೊಂಡುದನ್ನು ವೃದ್ಧಚೇಟಿಯರು, ರಾಜಮಾತೃವಾದ ಕುಂತೀದೇವಿಗೆ ಅರಿಕೆಮಾಡಿದರು. ಆ ಸಂತೋಷ ವಾರ್ತೆಯನ್ನು ದ್ವಾರಕೆಗೂ ತಿಳಿಸಿದುದಲ್ಲದೆ, ತಾವೂ ಅನೇಕ ಬಗೆಯ ಉಡುಗೆರೆ ಉತ್ಸವಾದಿಗಳನ್ನು ನಡೆಯಿಸಿ ಆಕೆಯನ್ನು ಸಂತೋಷಗೊಳಿಸಿದರು. ಮುಂದೆ ಕೆಲವು ದಿನಗ

ಟೊಳಗಾಗಿಯೇ ಶ್ರೀಕೃಷ್ಣಸ್ವಾಮಿಯು, ತನ್ನ ತಂಗಿಯನ್ನು ಪ್ರಸುವಕ್ಕಾಗಿ ಕರೆದುಕೊಂಡು ಹೋಗಲು ಇಂದ್ರಪ್ರಸ್ಥಕ್ಕೆ ಬಂದನು. ಧರ್ಮಜಾದಿಗಳು ವಾಸುದೇವನನ್ನು ಪರಮ ಸಂಭ್ರಮದಿಂದ ಎದುರುಗೊಂಡು, ವಿಶೇಷರೀತಿಯಿಂದ ಆದರಮಾಡಿ, ಆತನ ಇಷ್ಟದಂತೆ, ಸುಭದ್ರೆಯನ್ನು ಹೆರಿಗೆಗಾಗಿ ಕೊಟ್ಟು ಕಳುಹಿಸಿದರು. ಗರ್ಭಿಣಿಯಾದ ತಂಗಿಯನ್ನು ರಥದಲ್ಲಿ ಕರೆದುಕೊಂಡು ಹೋಗುತ್ತಾ ಮಾರ್ಗದಲ್ಲಿ ಆ ದೂರದರ್ಶಿಯು, ಮುಂದೆ ಕ್ಷತ್ರಿಯಕುಲಕ್ಕೆ ಮೃತ್ಯುಸ್ವರೂಪವಾಗಿ ನಡೆಯಲಿದ್ದ ದಾರುಣವಾದ ಭಾರತಯುದ್ಧದ ಭಯಂಕರ ವೃತ್ತಾಂತವನ್ನೇ ಒಂದು ಕಥೆಯಾಗಿ ವರ್ಣಿಸಿ ಆಕೆಗೆ ಹೇಳುತ್ತಾ ಬೇಸರವನ್ನು ಹೋಗಲಾಡಿಸಿದನು. ಗರ್ಭಿಣಿಯಾಗಿದ್ದಾಗ ಸ್ತ್ರೀಗೆ ಆಗುವ ಭಯಶೋಕ ಸುಖದುಃಖಾದಿಗಳ ಅನುಭವಗಳು ಜನಿಸುವ ಶಿಶುವಿನಲ್ಲೂ ಮೂಡುವುವು ಎಂಬುದಕ್ಕೆ ಸುಭದ್ರಾದೇವಿಯ ಈ ಅನುಭವವೇ ಉದಾಹರಣೆಯಾಗಿದೆ. ಈ ಪ್ರಯಾಣಕಾಲದಲ್ಲಿ ತಮ್ಮಣ್ಣನು ಹೇಳಿದ ಈ ಯುದ್ಧದ ಅಪೂರ್ವ ಚರಿತ್ರೆಯೂ, ವೀರಶೂರರ ವರ್ಣನಾ ವಿಚಾರವೂ, ಅಸ್ತ್ರಶಸ್ತ್ರಾದಿಗಳ ಪ್ರಯೋಗೋಪಸಂಹಾರಾದಿಗಳ ಭಯಂಕರ ವರ್ಣನೆಯೂ ಗರ್ಭಸ್ಥವಾಗಿದ್ದ ಶಿಶುವಿನ ಮನಃಫಲಕದಲ್ಲಿ ಚಿತ್ರಿತವಾಯಿತೋ ಎಂಬಂತೆ, ಆಕೆಯ ಕುಮಾರನು, ಧೀರನೂ ವೀರನೂ ಉದಾರನೂ ಶತ್ರುಸಂಹಾರದಕ್ಷನೂ ಆಗಿ ಪರಿಣಮಿಸಿದನು. ಅದಂತಿರಲಿ—

ದ್ವಾರಕೆಗೆ ಸೇರಿದನಂತರ ಮುಂದೊಂದು ಶುಭದಿನದಲ್ಲಿ ಸಕಲ ಸದ್ಗ್ರಹಗಳೂ ಉಚ್ಚದೆಸೆಯಲ್ಲಿದ್ದೊಂದು ದಿವ್ಯಮುಹೂರ್ತದಲ್ಲಿ ಸುಭದ್ರಾದೇವಿಯ ಗರ್ಭಸುಧಾಂಬುಧಿಯಲ್ಲಿ ಒಂದು ಪುರುಷ ಶಿಶುವು ಜನನವಾಯಿತು. ಆ ಸಂತೋಷವಾರ್ತೆಯು ಒಡನೆ ಪಾಂಡುರಾಜಧಾನಿಗೆ ವೇಗಶಾಲಿಗಳಾದ ಸೇವಕರ ಮೂಲಕ ತಿಳಿಸಲ್ಪಡಲು ಅದನ್ನು ಕೇಳಿದ ಸರ್ವರೂ ಸಂತೋಷದ ಕಡಲೊಳಗೆ ಮುಳುಗಿ, ಒಡನೆ ಅಲ್ಲಿಂದ ಹೊರಟು ದ್ವಾರಕೆಯನ್ನು ಸೇರಿ ಮಗುವಿನ ಮುಖಕಮಲದರ್ಶನದಿಂದ ಪರಮಾನಂದಗೊಂಡರು. ಹತ್ತು ದಿನಗಳು ಕಳೆದ ತರುವಾಯ ಬಾಣಂತಿಗೆ ಮಂಗಳಸ್ನಾನವಾಗಲು, ಮಗುವಿಗೆ ಜಾತಕರ್ಮ ನಾಮಕರಣಾದಿಗಳನ್ನು ಅತ್ಯಂತ ವಿಭವದಿಂದ ನೆರವೇರಿಸಿ

ಕಂದನನ್ನು 'ಅಭಿಮನ್ಯು' ಎಂಬ ಪವಿತ್ರನಾಮದಿಂದ ಕರೆದರು. ದೀನಾನಾಥರು ಸಂತುಷ್ಟಿಗೊಳಿಸಲ್ಪಟ್ಟರು. ಸುಭದ್ರಾದೇವಿಯು ಸುಕುಮಾರನನ್ನು ಪಡೆದು ಹೀಗೆ ಹುಟ್ಟಿದ ಮತ್ತು ಹೊಕ್ಕ ಎರಡು ಕುಲಗಳನ್ನೂ ಆನಂದ ಶರಧಿಯಲ್ಲಿ ಓಲಾಡಿಸಿದಳು.



*

# ಉಪಸಂಹಾರ

ಅಭಿಮನ್ಯುವು ದಿನದಿನಕ್ಕೆ ಬೆಳೆದು, ಇತ್ತ ಸೋದರಮಾವನಾದ ಶ್ರೀ ಕೃಷ್ಣನ ಮತ್ತು ಅತ್ತ ಲೋಕೋತ್ತರ ಧನುರ್ಧರಾಗ್ರೇಸರನಾದ ಅರ್ಜುನನ ಪರಾಮರಿಕೆಯಲ್ಲಿ ಅದ್ವಿತೀಯ ಶಸ್ತ್ರ ವಿದ್ಯಾಸಂಪನ್ನನಾದನೆಂದು ಹೇಳಬೇಕಾದುದೇನು? ಸುಭದ್ರಾದೇವಿಯೂ ಸಹ ಚಿಕ್ಕಂದಿನಲ್ಲಿ ತನ್ನ ಮಗನ ಮನಸ್ಸಿನಲ್ಲಿ ಯಾವ ಬಗೆಯ ಅಲ್ಪಭಾವ-ಕ್ಷುದ್ರಭಾವಗಳೂ ಪ್ರವೇಶಿಸಲೆಡೆಯಾಗದಂತೆ ವಿಶೇಷ ಶ್ರದ್ಧೆವಹಿಸಿ ಅವನನ್ನು ಪೋಷಿಸಿದಳು. ಅಂತೆಯೇ ಆತನೂ ವೀರಾಗ್ರೇಸರನಾಗಿಬೆಳೆದು ಗಂಡುಗಲಿಯಾದ ಅರ್ಜುನನಿಗೆ ಯೋಗ್ಯನಾದ ಪುತ್ರನೆನಿಸಿ ಪ್ರಸಿದ್ಧನಾದನು. ವೀರಪತ್ನಿಯಾದ ಸುಭದ್ರೆಯು ಜಗವರಿಯುವಂತೆ ವೀರಮಾತೆಯೆನ್ನಿಸಿಕೊಂಡೂ, ಕೀರ್ತಿಸಂಪನ್ನಳಾದಳು.

ಸುಭದ್ರಾದೇವಿಯ ಪಾತಿವ್ರತ್ಯವೂ ಪ್ರಶಂಸಾರ್ಹವಾದುದು. ಪಾಂಡವ ಭ್ರಾತೃಗಳಿಗೆ, ದಾಯಾದಿಗಳಾದ ಕೌರವರ ದುಸ್ತಂತ್ರದಿಂದ ಅನೇಕ ಆಪದಗಳು ಒದಗಿದಾಗ, ಧೈರ್ಯದಿಂದ ಅವರೊಂದಿಗಿದ್ದೂ, ಕೆಲವುವೇಳೆಗಳಲ್ಲಿ ಪತಿಯ ಆಜ್ಞಾನುಸಾರ ತೌರುಮನೆಯಲ್ಲಿ ವಾಸಿಸಿದ್ದೂ ಪುತ್ರನನ್ನು ಪೋಷಿಸಿಕೊಂಡು ಬಂದಳು. ಬಡತನವೇ ಮುಂತಾದ ದುರ್ದೆಸೆಗಳು ಬಂದಾಗಲೂ ಎದೆಗುಂದದೆ-ವೀರನಾದ ಧನಂಜಯನಿಗೆ ತಕ್ಕ ಭಾರ್ಯೆಯೆನ್ನಿಸಿಕೊಂಡಳು. ಮುಂದೆ ಭಾರತಯುದ್ಧದಲ್ಲಿ ತನ್ನ ಲೋಕೈಕವೀರನಾದ ಏಕಮಾತ್ರ ಪುತ್ರನ ವಧೆಯಾದಾಗ ಆಕೆಗಾದ ಸಂತಾಪವನ್ನೂ ಪುತ್ರಶೋಕಾದಿ ಪರಿತಾಪಕರ ವಿಚಾರಗಳನ್ನೂ ವರ್ಣಿಸುವುದೆಂತು? ಗೃಹಸ್ಥಾಶ್ರಮಿಗಳಿಗೆ ಸ್ವಾಭಾವಿಕವಾದ ಈ ಕಷ್ಟಸುಖಗಳನ್ನೆಲ್ಲ ಧೈರ್ಯದಿಂದ ಅನುಭವಿಸಿ ಸದ್ಗೃಹಿಣಿಯೆಂದು ಪ್ರಶಂಸಾರ್ಹಳಾದಳು.

ಕಾಲಕರ್ಮವಶವಾಗಿ, ನಮ್ಮ ಮಾತೃಭೂಮಿ ಭಾರತದೇಶದಲ್ಲಿ ಪರಕೀಯರ ಆಧಿಪತ್ಯಮೂಲಕ ಅವರದೇಶಕ್ಕೆ ಸ್ವಾಭಾವಿಕವಾದ ಸಂಸ್ಕೃತಿಯು ಎಷ್ಟುಮಟ್ಟಿನ ಪ್ರಮಾಣದಿಂದ ತಲೆಹಾಕಿದರೂ, ನಮ್ಮದೇಶಕ್ಕೆ ಅನಂತ

ಕಾಲದಿಂದಲೂ ವೈಶಿಷ್ಟ್ಯವಾದುದೆನ್ನಿಸಿಕೊಂಡು ಬಂದಿರುವ ಸಂಸ್ಕೃತಿಯು ಆ ಮೂಲಕ ಎಂದಿಗೂ ಅಳಿಸಿಹೋಗಲಾರದು. ಆದುದರಿಂದ ನಮ್ಮ ಸ್ತ್ರೀಯರಿಗೆ ಎಂದೆಂದಿಗೂ, ನಮ್ಮ ಪೂರ್ವನಾರೀಮಣಿಯರಾದ ಸೀತಾ, ಸಾವಿತ್ರಿ, ಅನಸೂಯೆ, ಅರುಂಧತಿ, ಲೋಪಾಮುದ್ರಾ, ಸುಭದ್ರಾ ಮುಂತಾದ ನಾರೀಮಣಿಯರೇ ಆದರ್ಶವಾಗಿರಬಲ್ಲವರು. ಹಿಂದೂದೇಶವು ಎಷ್ಟು ಶತಮಾನಗಳಾದರೆ ಇಂಗ್ಲೆಂಡಾಗಲು ಸಾಧ್ಯ! ಆದುದರಿಂದ ನಮ್ಮ ಕಥಾನಾಯಿಕೆಯ ಸಕಲ ಸದ್ಗುಣಗಳೂ ನಮ್ಮ ಬಾಲಿಕೆಯರಿಗೆ ಮಾರ್ಗದರ್ಶಕವಾಗಿದ್ದು ಅವರ ಉತ್ತರೋತ್ತರ ಅಭಿವೃದ್ಧಿಗೆ ಸಹಾಯಕವಾಗಲಿ. ಈ ನಮ್ಮ ಆಶಾಪೂರ್ಣತೆಗೆ ಭಗವತ್ಸಹಾಯವಿರಲಿ.

ತಥಾಸ್ತು.



ಸುಬೋಧ ಮುದ್ರಣಾಲಯ ಬೆಂಗಳೂರು ನಗರ.

॥ ಶ್ರೀರಾಮಸಹಾಯಂ ॥

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸಪುಸ್ತಕಾವಳಿ)

**ಮುನ್ನುಡಿ:—**

ಮಹಾರಾಷ್ಟ್ರ ದೇಶದಲ್ಲಿ ಧಾರ್ಮಿಕ ಚಳವಳಿಗೆ ಮೂಲ ಕರ್ತೃಗಳಾಗಿ ಜನಮನವನ್ನು ತಿದ್ದಿದ ಮಹಾನುಭಾವರನೇಕರುಂಟು. ಅವರಲ್ಲಿ ಶ್ರೀ ಜ್ಞಾನೇಶ್ವರ, ಶ್ರೀ ನಾಮದೇವ, ಶ್ರೀ ಏಕನಾಥ, ಶ್ರೀ ತುಕಾರಾಮ, ಶ್ರೀ ಸಮರ್ಥ ರಾಮದಾಸ ಇವರೇ ಮುಖ್ಯರಾದವರು. ಉತ್ತಮ ವರ್ಣಸ್ಥರೆನ್ನಿಸಿಕೊಂಡ ಇವರಲ್ಲದೆ, ಚೋಕಮೇಳನೆಂಬ ಅಂತ್ಯಜ ವರ್ಣಸ್ಥ ಸಾಧುವೂ ಸಹ, ಶ್ರೀ ಪಾಂಡುರಂಗನ ಭಕ್ತಶ್ರೇಷ್ಠನೆನ್ನಿಸಿ ತಮಿಳುದೇಶದ ನಂದನಾರ್ ಎಂಬ ಸಾಧು ಶಿರೋಮಣಿಯಂತೆ ಧಾರ್ಮಿಕ ಪುನರುದ್ಧರಣಕ್ಕಾಗಿ ವಿಶೇಷ ಶ್ರಮಿಸಿದನು. ಈ ಮಹನೀಯರೂ ಇವರಂತೆಯೇ ಇತರ ಅನೇಕ ಮಂದಿ ಭಕ್ತಶ್ರೇಷ್ಠರೂ ತಮ್ಮ ಆತ್ಮೋನ್ನತಿಗಾಗಿ ಕೈಕೊಂಡು, ಅಗಾಧ ಪರಿಶ್ರಮದಿಂದ ನಡೆಯಿಸಿದ - ನಡೆಯಿಸುವ ಈ ಕಾರ್ಯದಿಂದ ಸಾಮಾಜಿಕೋನ್ನತಿಯೂ, ಜನಗಳಲ್ಲಿ ನಯನೀತಿ ನಡತೆಗಳ ಪುನರುತ್ಥಾನವೂ ತಾನಾಗಿ ನಡೆದೇ ನಡೆಯುವುದು. ಭಾರತದೇಶದಲ್ಲಿ, ನೀತಿ ಮತ್ತು ಆಚಾರಗಳಿಗೂ ಮತ ಧರ್ಮಗಳಿಗೂ ಅತಿಶಯ ನಿಕಟ ಸಂಬಂಧವಿದ್ದು, ಅವು ಒಂದರೊಡನೊಂದು - ವಸ್ತ್ರದ ಹಾಸು ಹೊಕ್ಕು ಎಳೆಗಳಂತೆ ಹೆಣೆದುಕೊಂಡಿವೆ. ಆದುದರಿಂದ, ನೀತಿಯ ಉನ್ನತಿಗಾಗಿಯೇ ಎಂದು ಪ್ರತ್ಯೇಕವಾಗಿ ಪ್ರಯತ್ನ ನಡೆಸಬೇಕಾದ ಪ್ರಕೃತವಿಲ್ಲದೆ, ಯಾವನೊಬ್ಬನು ದೇವರು ಮತ್ತು ಧರ್ಮ ಈ ಕಾರ್ಯಗಳನ್ನು ಗಮನಿಸಿ, ಆ ಭಾಗದಲ್ಲಿ ಉಂಟಾದ ಲೋಪಗಳನ್ನು ಸರಿಪಡಿಸಲೆತ್ನಿಸಿದಲ್ಲಿ ಅದರೊಂದಿಗೆ, ಲೌಕಿಕಕ್ಕೆ ಸಂಬಂಧಿಸಿದ ಮಿಕ್ಕ ಸಕಲ ಕಾರ್ಯಗಳೂ ಸರಿಗೊಳಿಸಲ್ಪಡುವುವು. ಇತರ ಸಕಲ

ಪ್ರಶ್ನೆಗಳ ಕಗ್ಗಂಟುಗಳೂ ಬಿಡಿಸಲ್ಪಡುವುವು. ಇದು ಭಾರತದೇಶದ ಒಂದು ವೈಶಿಷ್ಟ್ಯವೆನ್ನಿಸಿದೆ.

ಮಹಾರಾಷ್ಟ್ರದೇಶದ ಸಾಧುಸಂತರಿಂದ ದೇಶಕ್ಕೂ ಜನಾಂಗಕ್ಕೂ ಆದ ಪ್ರಯೋಜನವು ಅಷ್ಟುಮಾತ್ರವಲ್ಲ ಭಾರತದೇಶದ ಧಾರ್ಮಿಕ ಸಾಹಿತ್ಯವೆಲ್ಲವೂ ಅನಾದಿಕಾಲದಿಂದಲೂ ಸಂಸ್ಕೃತ ಭಾಷೆಯಲ್ಲೇ ಇದ್ದು, ಅದು ಸಾಮಾನ್ಯರಿಂದ ದೂರವಾಗಿದ್ದುದರಿಂದ ಅವರಿಗೆ ಜ್ಞಾನಕಿರಣಗಳ ಪ್ರಕಾಶದ ಸೋಂಕೇಯಿಲ್ಲದೆ, ಕೋಟ್ಯಂತರ ಜನಸಮುದಾಯವು ಅಜ್ಞಾನಾಂಧಕಾರದಲ್ಲಿ ಮುಳುಗಿದ್ದಿತು. ಈ ಸಾಧುಶ್ರೇಷ್ಠರು, ಜನಾಂಗವು ಕೇವಲ ಪಶುಗಳಂತೆ ಆಹಾರ ನಿದ್ರಾಮೈಥುನಾದಿ ಕ್ರಿಯೆಗಳಲ್ಲದೆ ಬೇರೇನನ್ನೂ ಅರಿಯದೆ ಕಾಲಯಾಪನೆ ಮಾಡುತ್ತಿದ್ದ ಆ ದುಸ್ಥಿತಿಯನ್ನು ಕಂಡು ಮರುಗಿ, ಕೇವಲ ಸಂಸ್ಕೃತಮಯವಾಗಿದ್ದ ಧಾರ್ಮಿಕ ಸಾಹಿತ್ಯವನ್ನು ಭೇದಿಸಿ, ಜ್ಞಾನವಾಹಿನಿಯು ಪ್ರವಹಿಸಲು ಸಂಸ್ಕೃತದಂತೆಯೇ ದೇಶಭಾಷೆಯೂ ಯೋಗ್ಯಸಾಧನವಾಗಿದೆ ಎಂಬ ತತ್ವವನ್ನು ಮನಗಾಣಿಸಿದರು. ದೇಶಭಾಷೆಯಲ್ಲೂ ಧಾರ್ಮಿಕ ಗ್ರಂಥರಚನೆಮಾಡಿ, ಧರ್ಮವನ್ನು ದೇವಾಲಯ ಮತ್ತು ಸಾಧುಗಳ ಮಂದಿರಗಳಲ್ಲಿ ಮಾತ್ರವಲ್ಲ— ಪಾಮರನ ಮನೆಯ ಬಾಗಿಲವರೆಗೆ ತಂದುಬಿಟ್ಟರು

ಅಲ್ಲದೆ, ಈ ಸಾಧುಸಂತರ ಪರಿಶ್ರಮದಿಂದ ಜನಾಂಗಕ್ಕೆ ಉಂಟಾದ ಲಾಭವನ್ನು ಇಷ್ಟೇ ಎಂದು ಎಣಿಕೆಮಾಡಿ ತೋರಿಸುವುದು ದುರ್ಲಭವಾದರೂ, ಒಂದು ಸಂಗತಿಯನ್ನು ಮಾತ್ರ ಗೊತ್ತಾಗಿ ನಿರ್ಧರಿಸಿ ತೋರಿಸಬಹುದಾಗಿದೆ. ಪಾಪಿಗಳ ಪಾಪನಿವಾರಣೆಯಾಗಿ, ಅವರನ್ನು ಪರಿಶುದ್ಧರನ್ನಾಗಿಸಲು ಭಗವಂತನ ನಾಮೋಚ್ಚಾರಣೆಯು ಪರಮ ಸಾಧನವೆಂಬ ತತ್ವವನ್ನು ಸಾರಿ, ಪಾಮರ ಜನತೆಯನ್ನು ಉದ್ಧರಿಸಿ, ಮಾಡಿದ ಈ ಸಾಧುವರೇಣ್ಯರ ಮಹೋಪಕಾರವನ್ನಂತೂ ಜನತೆಯು ಎಂದಿಗೂ ಮರೆಯುವಂತಿಲ್ಲ. ಉನ್ನತಿಯ ಮಾರ್ಗಪ್ರವೇಶಕ್ಕೆ ಆಸ್ಪದವಿಲ್ಲದೆ, ಅಜ್ಞಾನ ವಶದಿಂದ ತಪ್ಪುದಾರಿಯಲ್ಲಿ ನಡೆದು, ಮಾಡಿದ ತಪ್ಪಿತಕ್ಕೆ ಪ್ರತೀಕಾರವೇನೆಂದು ತೋರದೆ, ನರಕ

ಜೀವನದಲ್ಲಿ ಬಿದ್ದು ತೊಳಲುತ್ತಿದ್ದ ಪಾಮರ ಜನತೆಗೆ ಈ ಮಹಾನುಭಾವರು ಭಗವನ್ನಾಮವೆಂಬ ಅಮೃತಪಾನವನ್ನೊದಗಿಸಿ, ಅವರ ಜೀವಿತಗಳನ್ನು ಸಾರ್ಥಕವೆನ್ನಿಸಿದರು.

ಈ ವೈಷ್ಣವ ಸಾಧುಸಂತರ ಮೂಲಕವಾಗಿ ಜಗತ್ತಿಗಾದ ಮತ್ತಾವ ಮಹೋಪಕಾರವುಂಟು. ಧರ್ಮ ದೇವರು ಆತ್ಮವಿಚಾರ ಪರಲೋಕ ಪುಣ್ಯ ಸಾಧನೆ ಮುಂತಾದ ಪಾರಲೌಕಿಕ ವಿಚಾರಗಳಲ್ಲಿ ಮನುಷ್ಯನು ಪ್ರವೇಶಿಸ ಬೇಕಾಗಿದ್ದರೆ, ಅವನು ಸಂಸಾರವನ್ನು ತ್ಯಜಿಸಿ ಸನ್ಯಾಸಿಯಾಗಿ, ಏಕಾಂಗಿ ಯಾಗಿ ಕಾಡುಸೇರಬೇಕೋ ಎಂಬೊಂದು ಭಾವನೆಯು ಈವರೆಗೆ ಜನಮನ ದಲ್ಲಿ ನೆಲೆಸಿದ್ದಿತು. ಆದರೆ ವೈಷ್ಣವ ಪಂಥವು ಸ್ಥಾಪನೆಯಾದಮೇಲೆ ಗೃಹಸ್ಥಧರ್ಮಕ್ಕೆ ಸಮಾಜದಲ್ಲಿ ಒಂದು ಅಮೌಲ್ಯಸ್ಥಾನವು ಪ್ರಾಪ್ತವಾ ಯಿತು. ಬ್ರಹ್ಮಚರ್ಯ ಗಾರ್ಹಸ್ಥ್ಯ ವಾನಪ್ರಸ್ಥ ಸನ್ಯಾಸ ಈ ನಾಲ್ಕು ಆಶ್ರಮಗಳಲ್ಲಿ, ವಿಧ್ಯುಕ್ತ ರೀತಿಯಿಂದ ನಡೆವ ಗಾರ್ಹಸ್ಥ್ಯ ಜೀವನವೇ ಮಿಕ್ಕ ಆಶ್ರಮಗಳನ್ನೂ ಪೋಷಿಸಲುಳ್ಳುದಾದುದರಿಂದ, ಅದು ಇತರ ಎಲ್ಲಾ ಆಶ್ರಮಗಳಿಗಿಂತಲೂ, ಒಂದು ದೃಷ್ಟಿಯಿಂದ ಶ್ರೇಷ್ಠವಾದುದು ಎಂಬ ಪ್ರಾ ಶಸ್ತ್ಯವು ಗೃಹಸ್ಥಾಶ್ರಮಕ್ಕೆ ಲಭ್ಯವಾಯಿತು. ಈ ಪಂಥದಲ್ಲಿ ಆಚಾರ್ಯ ಸ್ಥಾನಕ್ಕೆ ಬಂದವರಲ್ಲಿ ಅನೇಕರು, ವಸಿಷ್ಠವಾಮದೇವ ಗೌತಮಾದಿ ಮಹ ರ್ಷಿಗಳು ಹೇಗೆ ಗೃಹಸ್ಥರಾಗಿದ್ದೇ ಮಹರ್ಷಿಪದವಿಗೂ ಪಾತ್ರರಾಗಿದ್ದರೋ ಹಾಗೆಯೇ, ಜಿತೇಂದ್ರಿಯರಾಗಿ, ತಮ್ಮ ಸಾಧು ಜೀವನದಿಂದ ಲೋಕಕ್ಕೆ ಮಾರ್ಗದರ್ಶಕರಾಗಿ ಅನೇಕಾನೇಕರನ್ನು ತಿದ್ದಿ ಜೀವನ್ಮುಕ್ತರಾಗಿ ಜೀವಿಸಿ ದರು. ನಮ್ಮ ಕಥಾನಾಯಕನೂ ಆತನ ಗುರುವೂ ಇಬ್ಬರೂ ಹಾಗೆ ಗೃಹ ಸ್ಥಸಾಧುಗಳಾಗಿಯೇ ಜೀವಿಸಿದ ಮಹನೀಯರು.

ಪ್ರಕೃತ ಚರಿತ್ರೆಯು, ಈ ಸಾಧುವರೇಣ್ಯರಲ್ಲಿ ಒಬ್ಬನಾದ ಶ್ರೀ ಏಕ ನಾಥಸ್ವಾಮಿಯ ಜೀವಿತವನ್ನು ಕುರಿತು ವರ್ಣಿಸಲುಳ್ಳುದು. ಕರ್ಣಾಟಕ ಭಾಷಾಭಿಮಾನಿಗಳು, ಗ್ರಂಥಮಾಲೆಯ ಮೂಲಕ ನಡೆಯುತ್ತಿರುವ ಈ

ಸೇವಾಕಾರ್ಯವನ್ನು ಅಭಿಮಾನಿಸಿ, ಸ್ವಹಸ್ತ - ಪರಹಸ್ತ ಉದಾರಾಶ್ರಯ ವಿತ್ತು—ಪ್ರೋತ್ಸಾಹವಿತ್ತು ಪೋಷಿಸಬೇಕಾಗಿ ಪ್ರಾರ್ಥನೆ.

ಇತಿ ಸುಜನ ವಿಧೇಯ

ಬೆಂಗಳೂರು ನಗರ
ತಾ. ೨೧—೧—೩೩

॥ ಶ್ರೀ ರಾಮಸಹಾಯಂ ॥

## ಸಾ ಧು ಶಿ ರೋ ಮ ಣಿ

# ಏ ಕ ನಾ ಥ ಸ್ವಾ ಮಿ



**ಅಧ್ಯಾಯ ೧** **"ಜನನ - ಬಾಲ್ಯ"**

ಪರಮ ಪವಿತ್ರ ಕ್ಷೇತ್ರವಾದ ನಮ್ಮ ಮಾತೃಭೂಮಿ-ಈ ಭಾರತದೇಶದಲ್ಲಿ ಧರ್ಮವು ಕಾಲಕರ್ಮವಶವಾಗಿ ಅಳಿದು, ಅಧರ್ಮದ ಅಭಿವೃದ್ಧಿಯು ಕಂಡುಬಂದ ಕಾಲದಲ್ಲಿ ಭಗವಂತನ ದಿವ್ಯ ವಿಭೂತಿಯನ್ನು ಗಳಿಸಿದ ಸಾಧು ಪುಂಗವರಾಗಲೀ ಅಥವ ಅವತಾರ ರೂಪದಿಂದ ಭಗವಂತನೇ ಆಗಲಿ ಮಾನವ ದೇಹವನ್ನೆತ್ತಿ, - ಸಾಮಾನ್ಯನಂತೆಯೇ ಸಕಲವಿಧ ಸಾಂಸಾರಿಕ ಕಷ್ಟ ತಾಪತ್ರಯಗಳಿಗೂ, ನಿಂದೆ ಅಪದೂರುಗಳಿಗೂ ಒಳಗಾಗಿ, ಆದರೂ ನಿರ್ಮಲಚರಿತ್ರೆಯನ್ನು ಕಾಪಾಡಿಕೊಂಡು, ಅಡಿಗೆ ಬಿದ್ದ ಧರ್ಮವೃಕ್ಷವನ್ನು ಹಿಡಿದೆತ್ತಿ ನಿಲ್ಲಿಸಿ, ಪುನಃ ಕಳಕಳಿಸಿ ಬೆಳೆಯುವಂತೆ ಸಕಲ ವಿಧಗಳಿಂದಲೂ ಪ್ರಯತ್ನಿಸಿದ ಉದಾಹರಣೆಗಳು,ಒಂದಲ್ಲ ಎರಡಲ್ಲ, ಅನೇಕವಾಗಿ ದೊರೆಯುತ್ತವೆ. ಹೀಗೆ ಧರ್ಮೋದ್ಧಾರಕ್ಕಾಗಿ ಆಗುತ್ತಿರುವ ಸಾಧುಶ್ರೇಷ್ಠರ ಅವತಾರಕ್ಕೆ ಜಾತಿಕುಲಗಳ ನಿಯಮವಿಲ್ಲದೆ, ಅವರು ವೇದಶಾಸ್ತ್ರ ಪಾರಂಗತರಾದ ಬ್ರಾಹ್ಮಣವಂಶದಲ್ಲಿ ಹೇಗೋ ಹಾಗೆಯೇ, ಸಾಮಾನ್ಯನೆನ್ನಿಸಿದ, ವಿದ್ಯಾಗಂಧವನ್ನೇ ಅರಿಯದ ಬ್ರಾಹ್ಮಣೇತರನ ವಂಶದಲ್ಲೂ, ಅಷ್ಟೇ ಏಕೆ ಅಂತ್ಯಜನ ಮನೆಯಲ್ಲೂ ಹುಟ್ಟಿಬೆಳೆದ ಉದಾಹರಣೆಗಳಿವೆ.

ಬೌದ್ಧಮತವು ಒಂದುಸಾವಿರ ವರ್ಷಕಾಲ ಆಧಿಪತ್ಯಮಾಡಿ, ಶ್ರೀ ಶಂಕರಾಚಾರ್ಯರ ಪ್ರಬಲ ಪ್ರಯತ್ನದ ಫಲವಾಗಿ ಕಣ್ಮರೆಯಾದ ತರುವಾಯ ನಮ್ಮ ದೇಶದಲ್ಲಿ ವೇದಧರ್ಮವನ್ನನುಸರಿಸಿದ ಧರ್ಮನೀತಿಗಳು ಸುಮಾರು

ಮೂರು ನಾಲ್ಕು ಶತಮಾನಗಳವರೆಗೆ ನಡೆದುಬಂದುವು. ತರುವಾಯ ಶ್ರೀ ರಾಮಾನುಜಾಚಾರ್ಯರೂ ಮಧ್ವಾಚಾರ್ಯರೂ ಅವತರಿಸಿದ ತರುವಾಯ ಮೊತ್ತವಾದ ಈ ವೇದಧರ್ಮದಲ್ಲೂ ಒಂದು ಸುಧಾರಣೆಯು ತಲೆದೋರಿ ವಿಷ್ಣುದೇವತಾರಾಧನೆಯನ್ನೇ ಸರ್ವಶ್ರೇಷ್ಠವಾದುದೆಂದು ಪ್ರತಿಪಾದಿಸತಕ್ಕ ವೈಷ್ಣವ ಪಂಥವೊಂದು ಪ್ರತಿಷ್ಠಿತವಾಯಿತು. ಈ ಆಚಾರ್ಯರುಗಳು ತಮ್ಮ ತಮ್ಮ ಸಿದ್ಧಾಂತವನ್ನು ಪುಷ್ಟೀಕರಿಸುವ ಹಲವು ಗ್ರಂಥಗಳನ್ನು ಸಂಸ್ಕೃತಭಾಷೆಯಲ್ಲಿ ರಚಿಸಿ, ವಿದ್ವದ್ವರ್ಗಕ್ಕೆ ಮಹೋಪಕಾರಮಾಡಿದರು ಆದರೆ ಇವರ ಈ ಮಹತ್ಕಾರ್ಯವನ್ನು ಸಂಸ್ಕೃತಜ್ಞರಲ್ಲದ ಜನಾಂಗದ ವಿಶೇಷ ಸಂಖ್ಯೆಯವರು ಅರಿಯಲಶಕ್ತರಾಗಿ ದಾರಿಕಾಣದೆ ತೊಳಲುತ್ತಿರಲು ಆ ಲೋಪವನ್ನು ಮಹನೀಯ ವ್ಯಕ್ತಿಗಳಾದ ಈ ಸಾಧುಸಂತರು ಉದಯಿಸಿ ಹೋಗಲಾಡಿಸಿ, ಜನಾಂಗವನ್ನು ಉದ್ಧರಿಸಿದರು.

ಮಹಾರಾಷ್ಟ್ರ ದೇಶದಲ್ಲಿ ಈ ಪಂಥಕ್ಕೆ ಜೀವದಾನಮಾಡಿದ ಕೀರ್ತಿಯು ಶ್ರೀ ಧ್ಯಾನೇಶ್ವರ ಮಹಾರಾಜ ಅಥವಾ ಧ್ಯಾನ ದೇವನಿಗೆ ಸೇರಿದ್ದು. ಈತನು ೧೨೭೫-೧೨೯೬ರಲ್ಲಿ ತನ್ನ ಈ ಬಗೆಯ ಧಾರ್ಮಿಕ ಸೇವೆಯಿಂದ ಜನಮನವನ್ನು ತಿದ್ದಲೆತ್ನಿಸಿ, ಪ್ರಾರಂಭದ ವ್ಯವಸಾಯವನ್ನು ನಡೆಸಿ, ಅವರ ಹೃದಯಕ್ಷೇತ್ರವನ್ನು ಸಿದ್ಧಗೊಳಿಸಿದನು. ಈತನ ತರುವಾಯ ಹದಿನಾಲ್ಕನೆಯ ಶತಮಾನದಲ್ಲಿ ಉದಯಿಸಿದ ನಾಮದೇವನಿಂದ ಆ ಕಾರ್ಯವು ಬಹುಮಟ್ಟಿಗೆ ಮುಂದರಿಸಲ್ಪಟ್ಟಿತು. ನಾಮದೇವನ ತರುವಾಯ ಹದಿನಾರನೆಯ ಶತಮಾನದ ಪ್ರಾರಂಭದಲ್ಲಿ ಜನ್ಮಧಾರಣಮಾಡಿ ಆ ಕಾರ್ಯವನ್ನು ಮುಂದರಿಸಿದ ಮಹನೀಯನೇ ನಮ್ಮ ಪ್ರಕೃತ ಚರಿತ್ರ ನಾಯಕನಾದ ಏಕನಾಥಸ್ವಾಮಿ.

ಪ್ರಾಚೀನ ಭಾರತದ ಸುಪ್ರಸಿದ್ಧ ನಗರಗಳಲ್ಲಿ ಕಾಶಿಯಂತೆಯೇ ಪ್ರತಿಷ್ಠಾನಪುರಿಯೂ ಹೆಸರಾದುದು. ಇದನ್ನು ಪೈಠಣವೆಂಬ ಹೆಸರಿನಿಂದ ಕರೆವ ರೂಢಿಯೂ ಉಂಟು. ಉತ್ತರ ಭಾರತದಲ್ಲಿ ಗೀರ್ವಾಣಭಾಷೆಗೆ ಮುಖ್ಯಸ್ಥಾನವೆನ್ನಿಸಿ ಕಾಶೀನಗರವು ಸರಸ್ವತೀ ಪೀಠವೆಂದು ಪ್ರಸಿದ್ಧಿಗೊಂಡಂತೆಯೇ ಪೈಠಣವೂ ಸಹ ಅನೇಕಾನೇಕಮಂದಿ ವಿದ್ವಾಂಸರಿಗೆ ನೆಲೆವೀಡಾಗಿದ್ದು ವಿಶೇಷ ಪ್ರಸಿದ್ಧಿಹೊಂದಿತು. ಹಿಂದೆ ಅಳಂದಿಯ ಬ್ರಾಹ್ಮಣರು

ಜ್ಞಾನೇಶ್ವರನನ್ನು ಕುರಿತು-'ಪೈಠಣದ ಬ್ರಾಹ್ಮಣಶ್ರೇಷ್ಠರು ಸನ್ಯಾಸಿಯ ಮಗನನ್ನು ಸವಮಾಜದೊಳಗೆ ಸವ್ಯವಹಾರಕ್ಕೆ ತೆಗೆದುಕೊಳ್ಳಲು ಒಪ್ಪುತ್ತಾರೆಯೋ ಕೇಳು - ಅವರು ಒಪ್ಪಿದರೆ ನಾವೂ ಒಪ್ಪಿದಂತೆಯೇ' ಎಂದು ಹೇಳಿ, ಪೈಠಣದ ಬ್ರಾಹ್ಮಣ ವರ್ಗದ ವಿದ್ವತ್ತನ್ನೂ-ಮಹತ್ವವನ್ನೂ ಹೆಚ್ಚಿಸಿದ್ದ ಉದಾಹರಣೆಯುಂಟು. ಸದಾಚಾರ ಶೀಲತೆಗೆ ಮುಖ್ಯಸ್ಥಾನವೆನ್ನಿಸಿ, ಪೈಠಣವು ದಕ್ಷಿಣಭಾರತದ ಕಾಶೀನಗರವೆಂದು ಸುಪ್ರಸಿದ್ಧವಾಗಿದ್ದ ಈ ಕಾಲದಲ್ಲೇ-ಎಂದರೆ ಹದಿನೈದನೆಯ ಶತಮಾನದ ಮಧ್ಯಕಾಲದಲ್ಲೇ ಅಲ್ಲಿ ಭಾನುದಾಸನೆಂಬೊಬ್ಬ ಬ್ರಾಹ್ಮಣ ಶ್ರೇಷ್ಠನು ಜೀವಿಸಿದ್ದನು. ಆತನು ವೇದಶಾಸ್ತ್ರ ಸಂಪನ್ನನೂ ಆಚಾರಶೀಲನೂ ಸಾಧು ಸ್ವಭಾವದವನೂ ಆಗಿ ತನ್ನ ನೆರೆಹೊರೆಯುವರಲ್ಲೂ ಸುತ್ತುಮುತ್ತಿನ ಊರುಗಳವರಲ್ಲೂ ಎಲ್ಲರ ಗೌರವಾದರಗಳಿಗೂ ಪಾತ್ರನಾಗಿದ್ದನು. ಆತನು ವಿದ್ವಾಂಸನಾಗಿದ್ದಂತೆಯೇ, ಪಂಢರಪುರಿಯ ಶ್ರೀ ವಿಠಲಸ್ವಾಮಿಯಲ್ಲಿ ಅಗಾಧ ಭಕ್ತಿಶ್ರದ್ಧೆಗಳನ್ನುಂಟಾಗಿದ್ದನು. ವಿಠ್ಠಲಮೂರ್ತಿಯ ವಿಷಯದಲ್ಲಿ ಆತನಿಗಿದ್ದ ಭಕ್ತಿ ಪಾರವಶ್ಯತೆಯನ್ನು ನಿರ್ದೇಶಿಸುವ ಒಂದು ವಿಚಾರವನ್ನು ಇಲ್ಲಿ ಕೊಡುವುದು ಸೂಕ್ತವೆಂದು ತೋರುತ್ತದೆ. ಕರ್ಣಾಟಕ ರಾಜ್ಯದ ರಾಜಧಾನಿಯಾದ ವಿಜಯನಗರದಲ್ಲಿ ಆಳಿದ ಸಾರ್ವಭೌಮರಲ್ಲಿ ಸರ್ವಶ್ರೇಷ್ಠನೆನ್ನಿಸಿದ ಶ್ರೀ ಕೃಷ್ಣದೇವರಾಯನು, ತನ್ನ ಆಳ್ವಿಕೆಯ ಒಂದು ಕಾಲದಲ್ಲಿ ಪಂಢರಾಪುರದ ವಿಠ್ಠಲಸ್ವಾಮಿಯ ದರ್ಶನಕ್ಕೆಂದು ಬಂದಿದ್ದನಂತೆ. ಆಗ ಆತನು ವಿಠೋಬಾಮೂರ್ತಿಯ ಸೌಂದರ್ಯಕ್ಕೆ ಬೆರಗಾಗಿ, ಅದನ್ನು ತನ್ನೊಂದಿಗೆ ತನ್ನ ರಾಜಧಾನಿಗೆ ತೆಗೆಸಿಕೊಂಡು ಹೊರಟನು. ಮಹಾಕ್ಷೇತ್ರವೆನ್ನಿಸಿದ ಆ ಸ್ಥಳದಲ್ಲಿ ದೇವಮೂರ್ತಿಯೇ ಸ್ಥಳಪಲ್ಲಟ ಹೊಂದುವುದೆಂಬುದು ಭಕ್ತಾದಿಗಳಿಗೆಲ್ಲ, ಮಹದನರ್ಥಕಾರ್ಯವೆಂದು ತೋರಿ ವಿಶೇಷ ದುಃಖದಾಯಕವಾಯಿತು. ಆದರೆ ಆ ಚಕ್ರೇಶ್ವರನ ಕೃತಿಯನ್ನು ಆಕ್ಷೇಪಿಸಿ, ತಮ್ಮ ದೇವ ಮೂರ್ತಿಯನ್ನು ಹಿಂದಿರುಗಿ ಪಡೆವ ಧೈರ್ಯವು ಯಾವನಿಗುಂಟು! ಎಲ್ಲರೂ ಮುಂದೇನು ಮಾಡುವುದೆಂದು ಹತಾಶರಾಗಿ ಕುಳಿತಿದ್ದ ಸಂದರ್ಭದಲ್ಲಿ, ನಮ್ಮ ಕಥಾನಾಯಕನ ವಂಶಕ್ಕೆ ಮೂಲಪುರುಷನಾದ ಭಾನುದಾಸನು ವಿಜಯನಗರಕ್ಕೆ ಪ್ರಯಾಣಮಾಡಿ, ಮಧ್ಯರಾತ್ರಿಯಲ್ಲಿ ಆ ಮಹಾನಗರವನ್ನು

ಹೊಕ್ಕು ಸಾರ್ವಭೌಮನ ಅರಮನೆಯಲ್ಲಿದ್ದ ಶ್ರೀ ವಿಠ್ಠಲ ವಿಗ್ರಹವನ್ನು ಆಲಿಂಗಿಸಿ ಕಣ್ಣೀರಿಟ್ಟನು. ಆಗ ವಿಠ್ಠಲಸ್ವಾಮಿಯು ತನ್ನ ಭಕ್ತನ ಪ್ರೇಮಪಾಶಕ್ಕೆ ಬದ್ಧನಾಗಿ, ತನ್ನ ಕೊರಳಲ್ಲಿದ್ದ ಶ್ರೇಷ್ಠವಾದ ರತ್ನಹಾರವನ್ನು ಆತನ ಕೈಗಿತ್ತು,-ನಾನು ತಪ್ಪದೆ ನಿನ್ನೊಂದಿಗೆ ಪಂಢರಾಪುರಕ್ಕೆ ಬರುವೆನೆಂದು ವಾಗ್ದಾನವಮಾಡಿದನು. ಮಾರನೆಯ ಪ್ರಾತಃಕಾಲ ವಿಠ್ಠಲಸ್ವಾಮಿಯು ಕಂಠದಲ್ಲಿದ್ದ ರತ್ನಹಾರವು ಆ ಬಡ ಬ್ರಾಹ್ಮಣನ ಬಳಿಯಲ್ಲಿದ್ದುದನ್ನು ರಾಜದೂತರು ಕಂಡು ಆತನನ್ನು ರಾಜನ ಮುಂದೆ ನಿಲ್ಲಿಸಿದರು. ರಾಜನು ಒಡನೆ ದೈವದ್ರೋಹಿಯಾದ ಆತನನ್ನು ಶೂಲಕ್ಕೇರಿಸಿರೆಂದು ಅಜ್ಞಾಪಿಸಿ ಕಳುಹಿಸಿದನು. ಆದರೆ ಭಾನುದಾಸನನ್ನು ಶೂಲಾರೋಹಣಕ್ಕೆಂದು ಆ ಮರದಬಳಿಗೊಯ್ಯಲು, ಆತನ ಪ್ರಭಾವದಿಂದ, ಎಷ್ಟೋ ವರ್ಷಗಳಿಂದ ಒಣಗಿ ನಿಂತಿದ್ದ ಆ ಮರದ ಕೊರಡು ಚಿಗುರಿ ಫಲಪುಷ್ಪಭರಿತವಾಗಿ ನೇತ್ರಾನಂದಕರವಾಗಿ ಪ್ರಕಾಶಿಸತೊಡಗಿತು. ಈ ಪರಮಾದ್ಭುತವನ್ನು ಕಂಡ ರಾಜನು, ವಿಠ್ಠಲಸ್ವಾಮಿಯ ಅಂತರಂಗಭಕ್ತನಾದ ಭಾನುದಾಸನ ಮಹತ್ವವನ್ನರಿತು, ಆತನ ಪಾದಕ್ಕೆ ಮಣಿದು ಕ್ಷಮೆಬೇಡಿ, ಆತನು ಶ್ರೀ ವಿಠ್ಠಲಮೂರ್ತಿಯನ್ನು ತನ್ನೊಂದಿಗೆ ಪಂಢರಾಪುರಕ್ಕೆ ಕೊಂಡೊಯ್ಯಲು ಅನುಮತಿಸಿದನು.

ಈ ಕಥೆಯಿಂದ ನಮ್ಮ ಚರಿತ್ರನಾಯಕನ ವಂಶವು ಎಷ್ಟು ಪವಿತ್ರವಾದುದೆಂಬುದೂ, ಎಷ್ಟುಮಟ್ಟಿಗೆ ಭಗವದನುಗ್ರಹಕ್ಕೆ ಪಾತ್ರವಾದುದೆಂಬುದೂ ಗೋಚರವಾಗುತ್ತದಲ್ಲವೆ ? ಈ ಭಾನುದಾಸನಿಗೆ ಚಕ್ರಪಾಣಿಯೆಂಬ ಮಗನಾದನು. ಆತನ ಮಗನಾದ ಸೂರ್ಯನಾರಾಯಣನೆಂಬಾತನೇ ಏಕನಾಥನ ತಂದೆ. ಏಕನಾಥನು ೧೫೪೮ನೆಯ ಸಂವತ್ಸರದ ಸುಮಾರಿನಲ್ಲಿ ಜನ್ಮಗ್ರಹಣಮಾಡಿದನೆಂದು ಪ್ರಕಟವಾಗಿದೆ. ಮಗನು ಹುಟ್ಟಿದ ಸ್ವಲ್ಪ ದಿನಗಳಲ್ಲೇ ತಂದೆಯಾದ ಸೂರ್ಯನಾರಾಯಣನೂ ಆತನ ಪತ್ನಿಯೂ ಮೃತರಾದರು. ಹಾಗೆ ಶೈಶವದಲ್ಲೇ ಮಾತಾಪಿತೃಗಳನ್ನು ಕಳೆದುಕೊಂಡು ತಬ್ಬಲಿಯಾದ ಆ ಮಗುವಿನ ಪೋಷಣೆಯ ಭಾರವನ್ನು ವೃದ್ಧನಾದ ಚಕ್ರಪಾಣಿಯು ವಹಿಸಿಕೊಂಡು, ತಂದೆತಾಯಿಗಳಿಲ್ಲದ ಮಗುವೆನ್ನಿಸದಂತೆ ಅದನ್ನು ಪ್ರೀತಿಯಿಂದ ಪೋಷಿಸಿದನು. ತಬ್ಬಲಿ ಮಗುವೆಂದು ವಿಶೇಷ ಪ್ರೇ

ಮಾದರಗಳಿಗೆ ಪಾತ್ರನಾಗಿ ಬೆಳೆದ ಆ ಮಗುವು-ಹಿಂದಿನ ಪರದೇಶಿ ಚಂದ್ರಹಾಸನಂತೆ ದುಃಖವೆಂದರೇನೆಂದು ಅರಿಯದೆ ಬೆಳೆದು ಕಳೆಗೊಂಡನು. ಹಟಮಾರಿತನವಾಗಲಿ, ಕೋಪತಾಪಗಳಾಗಲಿ, ಇತರ ಕ್ಷುದ್ರ ಸ್ವಭಾವವಾಗಲಿ ಆ ಬಾಲಕನಲ್ಲಿ ಎಂದೂ ಕಂಡುಬಂದುದಿಲ್ಲ. ವಿಶೇಷ ಉತ್ಸಾಹಿಯೂ ಸಂತೋಷಚಿತ್ತನೂ ಆದ ಆ ಬಾಲಕನು ಇತರ ಬಾಲಕರಂತೆ, ಕೆಲಸಕ್ಕೆಬಾರದ ಆಟಪಾಟಗಳಲ್ಲಲ್ಲದೆ ಸಮೀಪದಲ್ಲಿದ್ದ ಪವಿತ್ರ ಗೋದಾವರಿಯ ತೀರಪ್ರದೇಶಕ್ಕೆ ನಡೆದು ಅಲ್ಲಿ ಮರಳರಾಶಿಯಲ್ಲಿ ಬಿದ್ದಿರುತ್ತಿದ್ದ ಬಗೆ ಬಗೆಯ ಬಣ್ಣದ ಕಲ್ಲುಗಳನ್ನು ಎತ್ತಿಕೊಂಡು, ಒಂದು ಶುದ್ಧವಾದ ಸ್ಥಳದಲ್ಲಿಟ್ಟು ಅವನ್ನು ಶಿವಲಿಂಗಗಳೆಂದು ಭಕ್ತಿಭಾವದಿಂದ ಪೂಜಿಸುವನು. ಇತರ ಚಿಕ್ಕಮಕ್ಕಳು, ಒಂದು ಕೋಲನ್ನೇ ಕುದುರೆಯನ್ನಾಗಿ ಮಾಡಿಕೊಂಡು ಆಟಕ್ಕೆ ತೊಡಗುತ್ತಿರಲು, ಏಕನಾಥನು ಅಂತಹ ಕೆಲಸಕ್ಕೆ ಬಾರದ ಆಟವನ್ನು ಮೆಚ್ಚದೆ, ಅಂತಹ ಕೋಲನ್ನೇ ಭುಜದಮೇಲಿಟ್ಟುಕೊಂಡು, ತಾನು ಹರಿದಾಸನೆಂದೂ, ಧರ್ಮಪ್ರಚಾರಕ್ಕಾಗಿ ಕೆಲಸಮಾಡುವುದೇ ತನ್ನ ಕೆಲಸವೆಂದೂ ಆಟವಾಡುವನು. ಯಾರೊಂದಿಗೂ ಎಂದೂ ಜಗಳ ಕದನಗಳನ್ನಾಡದೆ, ಮುಖವನ್ನು ಗಂಟಿಕ್ಕಿಕೊಳ್ಳದೆ, ವಿನಯ ವಿಧೇಯತೆಗಳಿಂದಲೂ ಹಸನ್ಮುಖದಿಂದಲೂ ಇರುತ್ತಿದ್ದನಾದುದರಿಂದ ಎಲ್ಲರೂ ಆ ಬಾಲಕನನ್ನು ಮೆಚ್ಚಿಕೊಂಡು, ಆತನ ಸಹವಾಸದಲ್ಲಿ ಸಂತೋಷವನ್ನು ಪಡೆಯುತ್ತಿದ್ದರು. ಹೀಗೆ ಮಾತಾಪಿತೃಗಳನ್ನು ಕಳೆದುಕೊಂಡರೂ, ಬಾಲಕನು ಜನನಾರಭ್ಯ ಸದ್ಬ್ರಾಹ್ಮಣನಾದ ಚಕ್ರಪಾಣಿಯ ಪರಾಮರಿಕೆಯಲ್ಲಿದ್ದು ಬಾಲ್ಯದ ತನ್ನ ವಿಚಿತ್ರ ಆಟಪಾಟಗಳಿಂದ ವೃದ್ಧನಾದ ಆ ಸಾಧು ಬ್ರಾಹ್ಮಣನನ್ನು ಸಂತೋಷಪಡಿಸುತ್ತಿದ್ದನು.



## ಅಧ್ಯಾಯ ೨ "ಗುರೂಪದೇಶ"

ಬಾಲಕ ಏಕನಾಥನ ತೀಕ್ಷ್ಣಮತಿಯನ್ನೂ, ವಿನಯ ವಿಧೇಯತೆ ಮುಂತಾದ ಸದ್ಗುಣಗಳನ್ನೂ ಕಂಡು ಸಂತುಷ್ಟನಾದ ಚಕ್ರಪಾಣಿ ವಿಪ್ರನು, ಅವನಿಗೆ ಚಿಕ್ಕಂದಿನಿಂದಲೇ ಗ್ರಂಥವ್ಯಾಸಂಗಮಾಡಿಸಬೇಕೆಂದು ಇಚ್ಛಿಸಿ ಆರನೆಯ ವಯಸ್ಸಿನಲ್ಲೇ ಉಪನಯನ ಕರ್ಮವನ್ನು ನೆರವೇರಿಸಿದನು. ಈವರೆಗೆ ಕಲ್ಲುಗಳನ್ನಿಟ್ಟು ಶಿವನೆಂದು ಪೂಜಿಸುತ್ತಿದ್ದ ಬಾಲಭಾವದ ಅವನ ಭಕ್ತಿಯೂ, ಹರಿದಾಸನೆಂದು ಹೊರಡುತ್ತಿದ್ದ ಅವನ ಉತ್ಸಾಹವೂ, ಈಗ ಆಳತೆಮೀರಿ ಹೆಚ್ಚಿ, ತನ್ನ ಪಿತಾಮಹನು ಏರ್ಪಡಿಸಿದ ಗ್ರಂಥವ್ಯಾಸಂಗದಲ್ಲೂ ಉಪಾಧ್ಯಾಯರೂ ಇತರ ಧರ್ಮಬೋಧಕರೂ ಮಾಡುತ್ತಿದ್ದ ಬೋಧನೆಗಳನ್ನು ಕೇಳುವಲ್ಲೂ ಪರಿಣಾಮಹೊಂದಿತು ಹಾಗೆ ಸ್ವತಃ ಶ್ರದ್ಧಾಯುಕ್ತನಾಗಿ ವಿದ್ಯಾಭ್ಯಾಸಮಾಡುವುದರೊಂದಿಗೆ, ಅವನು ತನಗೆ ಸಂದೇಹತೋರಿದ ವೇದಾಂತ ವಿಚಾರದ ಅನೇಕ ಪ್ರಶ್ನೆಗಳಿಗೆ ಸಮಂಜಸ ಉತ್ತರಗಳನ್ನು ಪಡೆಯಕೋರಿ ತನ್ನ ಗುರುಗಳನ್ನೂ ಧರ್ಮಬೋಧಕರನ್ನೂ ವಿನಯದಿಂದಲೂ ಮೃದುವಾಕ್ಯಗಳಿಂದಲೂ ಕೇಳುವನು. ಅನೇಕವೇಳೆ, ತಮಗೇ ತೋರದ ಅಂತಹ ಗಹನ ವಿಚಾರವು ಅಷ್ಟು ಚಿಕ್ಕ ಬಾಲಕನಿಗೆ ಹೇಗೆ ಹೊಳೆಯಿತೋ ಎಂದು ಆತನ ಬುದ್ಧಿಶಕ್ತಿಗಾಗಿ ಅವರು ಪರಮಾಶ್ಚರ್ಯಪಡುತ್ತಿದ್ದರಲ್ಲದೆ, ತಮಗೆ ಅದರ ಉತ್ತರವು ತಿಳಿಯದೆಂದು ಒಪ್ಪಿಕೊಳ್ಳಬೇಕಾಗುತ್ತಿದ್ದಿತು. ಗ್ರಂಥವ್ಯಾಸಂಗ ಸ್ನಾನಸಂಧ್ಯಾದಿಗಳು ಧರ್ಮಶ್ರವಣ ಮುಂತಾದುವುಗಳು ಮುಗಿದ ತರುವಾಯ ಆ ಬಾಲಕನು, ಶಿವದೇವಾಲಯಕ್ಕೆ ನಡೆದು ಅಲ್ಲಿ ಹಲವು ಗಂಟೆಗಳಕಾಲ ಧ್ಯಾನಾಸಕ್ತನಾಗಿ ಇದ್ದುಬಿಡುವನು. ಅಲ್ಲಿ ಏಕಾಂಗಿಯಾಗಿ ಮೌನವಾಗಿ ಕುಳಿತಿರುತ್ತಿದ್ದ ಆ ಚಿಕ್ಕವನ ಮನಸ್ಸಿನಲ್ಲಿ ಏನು ನಡೆಯುತಿತ್ತೆಂಬುದನ್ನು ಯಾರು ಹೇಳಬಲ್ಲರು !

ಏಕನಾಥನು ಹೀಗೆ ಹನ್ನೆರಡು ವರ್ಷ ವಯಸ್ಸಾಗುವವರೆಗೆ ತನ್ನ ಅಜ್ಜನ ಪೋಷಣೆಯಲ್ಲಿದ್ದು ವಿದ್ಯಾಭ್ಯಾಸಮಾಡಿದನು. ಆ ವೇಳೆಗೆ ಅವನ ಮನಸ್ಸಿಗೆ ಏನು ತೋರಿತೋ - ಮುಂದೊಂದುದಿನ ಬೆಳಗಿನ ಜಾವದಲ್ಲಿ ಮನೆಯಲ್ಲಿ ತನ್ನ ಅಜ್ಜನಿಗಾಗಲೀ ಅಜ್ಜಿಗಾಗಲೀ ಅಥವಾ ಜೊತೆಯ ಬಾಲಕರಲ್ಲಿ

ಮತ್ತಾರಿಗಾಗಲಿ ತಿಳಿಯಗೊಡದೆ ಮನೆಯಿಂದ ಹೊರಟುಬಿಟ್ಟನು. ಬಾಲಕನು ಎಲ್ಲಿಗೆ ಹೋದ - ಏನಾದ ಎಂಬ ವಿಚಾರವು ಮುಂದೆ ಹನ್ನೆರಡುವರ್ಷಕಾಲ ಯಾರಿಗೂ ತಿಳಿಯಬರಲಿಲ್ಲ. ಹಿಂದಿನರಾತ್ರಿ ಉಂಡು ಮನೆಯಲ್ಲಿ ಮಲಗಿದ್ದವನನ್ನು ಕಂಡಿದ್ದವರು, ಮಾರನೆಯ ಪ್ರಾತಃಕಾಲ ಕಣ್ಮರೆಯಾದ ಆ ಚಿಕ್ಕವನನ್ನು ಕಾಣದೆ ಬಹು ವಿಚಾರಗ್ರಸ್ತರಾದರು. ಆ ವೃದ್ಧ ದಂಪತಿಗಳಂತೂ ಎಲ್ಲಿ ಹೋದನೋ, ಎಲ್ಲಿ ನದಿ ಭಾವಿಕೆರೆಗಳ ಪಾಲಾದನೋ, ಅಥವಾ ಎಲ್ಲಿ ಕಾಡುಮೇಡುಗಳಲ್ಲಿ ದುಷ್ಟಮೃಗಗಳಿಗೆ ತುತ್ತಾದನೋ ಎಂದು ವಿಶೇಷವಾಗಿ ಪರಿತಪಿಸಿದರು. ಸಾಧ್ಯವಿದ್ದ ಪರಿಯಿಂದಲೆಲ್ಲ ಹುಡುಕಿಸಿದರು. ಆದರೆ ಅವನು ಎಲ್ಲಿದ್ದನೆಂಬ ವಿಚಾರವು ಗೊತ್ತಾಗಲೇ ಇಲ್ಲ.

ಕೇವಲ ಹನ್ನೆರಡನೆಯ ವರ್ಷ ಪ್ರಾಯದಲ್ಲಿ ಆಪ್ತೇಷ್ಟರನ್ನೂ, ಮಿತ್ರಬಾಂಧವರನ್ನೂ ತ್ಯಜಿಸಿ, ಧರ್ಮ - ದೇವರು ಎಂಬ ಭಾವನೆಗಳನ್ನು ಮನಸ್ಸಿನಲ್ಲಿಟ್ಟುಕೊಂಡು, ಮನೆಬಿಟ್ಟು ಹೊರಟ ನಮ್ಮ ಕಥಾನಾಯಕನ ಚರಿತ್ರೆಯು ವಾಸ್ತವವಾಗಿ ಪರಮಾಶ್ಚರ್ಯಕರವಾದುದೇ ಸರಿ! ದುರ್ಮಾರ್ಗಿಗಳಾಗಿ, ದುಷ್ಟರ ಸಹವಾಸದಿಂದ ಮನೆಯಲ್ಲಿ ಎಲ್ಲರನ್ನೂ ಕಿರುಕುಳಕ್ಕೆ ಈಡುಮಾಡಿ, ಜೀವಿತಕ್ಕೊಂದು ಗೊತ್ತಾದ ಮಾರ್ಗವನ್ನರಿಯದೆ, ಹಿರಿಯರ ಕಠಿಣ ನಿರ್ಬಂಧಗಳಿಗಾಗಿ ರೋಷಿ ಮನೆಬಿಟ್ಟು ದೇಶಾಂತರಗತರಾಗುವ ಹಲವುಮಂದಿ ಯುವಕರ ವಿಚಾರವನ್ನು ಕೇಳಿಯುಂಟು. ಅಲ್ಲದೆ, ದುರ್ದೈವವಶವಾಗಿ, ಚಿಕ್ಕಂದಿನಲ್ಲೇ ತಂದೆತಾಯಿಗಳನ್ನು ಕಳೆದುಕೊಂಡು - ಹೇಳಿಕೇಳುವವರಿಲ್ಲದೆ ಜೀವಿತವೇ ಬೇಸರತೋರಿ - ಮುಂದೇನೂ ತೋರದೆ ಹತಾಶರಾಗಿ ಕಾಡು ಸೇರಿರುವವರ ಕಥೆಗಳನ್ನೂ ಕೇಳಿಯುಂಟು. ಆದರೆ ಏಕನಾಥನ ವಿಚಾರವು ಅಂಥದಲ್ಲ ಚಿಕ್ಕಂದಿನಲ್ಲೆ ತಂದೆ ತಾಯಿಗಳನ್ನು ಕಳೆದುಕೊಂಡರೂ, ಅವನು ಯಾವ ಬಗೆಯ ಕಷ್ಟನಿಷ್ಠುರಗಳಿಗೂ ಒಳಪಡದ ಸುಖಜೀವಿಯಾಗಿಯೇ ಇದ್ದು ಹನ್ನೆರಡು ವರ್ಷಗಳ ತನ್ನ ಬಾಲ್ಯಜೀವಿತವನ್ನೂ ಕಳೆದನು. ತಂದೆಯು ಹೋದನೆಂದು ಅವನೇನು ಪರದೇಶಿಯಾಗಿ ಬೀದಿಯಲ್ಲಿ ನಿಲ್ಲುವಂತಿರಲಿಲ್ಲ. ಅವನ ಪಿತಾಮಹನೇ, ಅವನಿಗೆ ಸರ್ವಸ್ವವೂ ಆಗಿದ್ದು, ತಂದೆಯಿಲ್ಲದ ಮಗುವೆಂದು ಅತಿಶಯ ಪ್ರೀತಿ ವಿಶ್ವಾಸಗಳಿಂದ ಅವನನ್ನು ಕಾಪಾಡಿಕೊಂಡು ಬಂದಿದ್ದನು. ಮುಂದೆ ಆತನ

ಸಕಲ ಆಸ್ತಿಗೂ ಏಕನಾಥನೇ ಏಕಮಾತ್ರ ಅಧಿಕಾರಿಯಾಗಿದ್ದನು. ಇಷ್ಟು ಬಗೆಯ ಅನುಕೂಲಗಳನ್ನೂ - ಸುಖಜೀವಿತವನ್ನೂ ಲಕ್ಷ್ಯಮಾಡದೆ, ಅವನು ಪುರಾಣ ಪ್ರಸಿದ್ಧನಾದ ಧ್ರುವರಾಜಕುಮಾರನಂತೆ ಏಕಾಂಗಿಯಾಗಿ ಗೃಹತ್ಯಾಗಮಾಡಿ ಹೊರಟನೆಂದರೆ, ಅವನ ಮನಸ್ಸು ತನ್ನ ಧ್ಯೇಯವನ್ನು ಕುರಿತು ಎಷ್ಟುಮಟ್ಟಿಗೆ ದಾರ್ಢ್ಯಗೊಂಡಿದ್ದಿತು ಎಂಬುದನ್ನು ಗ್ರಹಿಸಬಹುದಾಗಿದೆ. ತನ್ನನ್ನು ಬಾಲ್ಯದಿಂದ - ಶಿಶುತನದಿಂದ ಎತ್ತಿ ಆಡಿಸಿ, ಹಾಲು-ನೀರುಗಳನ್ನೆರೆದು ಪೋಷಿಸಿದ ಪರಮ ಪ್ರೇಮಾಸ್ಪದರಾದ ತನ್ನ ಅಜ್ಜನನ್ನೂ ಅಜ್ಜಿಯನ್ನೂ ಬಿಟ್ಟುಹೋಗಬೇಕೆಂಬ ಯೋಚನೆ ಬಂದಾಗ ಅವನ ಕರಳು ಮರುಗಿರಲಾರದೇ, ಎದೆಯು ಕಂಪಿಸಿರಲಾರದೆ! ಆದರೆ, ಏಕನಾಥನು ಮನೆಯಲ್ಲಿ ನಿಲ್ಲುವುದಾಗಲೀ ಅಥವಾ ದೇಶಾಂತರಗತನಾಗಿ ಹೊರಡುವುದಾಗಲೀ ಅವನಿಗೆ ಸ್ವಾಧೀನವಿದ್ದ ಕಾರ್ಯವಾಗಿರಲಿಲ್ಲ. ಅವನು ಅನನ್ಯಭಾವದಿಂದ ನಂಬಿ ಆರಾಧಿಸುತ್ತಿದ್ದ ಭಗವಾನ್ ಶಂಕರನು, ಅವನಿಗೆ-ನಿನ್ನ ಆತ್ಮ ಸಾಕ್ಷಾತ್ಕಾರಕ್ಕಾಗಿ ನೀನು ದೇವಘರ್ (ದೌಲತಾಬಾದ್) ಎಂಬ ಊರಿಗೆ ಹೋಗು ಎಂದು ಸ್ಪಷ್ಟ ನುಡಿಗಳಿಂದ ಆಜ್ಞಾಪಿಸಿದ್ದನಂತೆ! ಅದೃಶ್ಯನಾದ ದೇವರು, ಕೇವಲ ಮನುಷ್ಯ ಸಾಮಾನ್ಯವಾದ ವಚನಗಳಿಂದ ಹಾಗೆ ಆಜ್ಞಾಪಿಸುವುದು ಸಾಧ್ಯವೆ - ಇದೆಲ್ಲ ಕೇವಲ ಮರುಳು ವಿಚಾರಗಳು ಎಂದು ಈ ವಿಜ್ಞಾನಯುಗದ ನಾಗರಿಕರು ನಂಬದಿರಬಹುದು. ಆದರೆ ಆತ್ಮಸಿದ್ಧಿಗಾಗಿ ಇಂತಹ ಕರೆಬಂದಿರುವುದು ಈತನ ಒಂದೇ ಉದಾಹರಣೆಯಲ್ಲಿಲ್ಲ. ಸಮರ್ಥ ರಾಮದಾಸರು, ಈಚಿನ ಶ್ರೀ ರಾಮಕೃಷ್ಣ ಪರಮಹಂಸರು ಮುಂತಾದ ಮಹನೀಯರೆಲ್ಲರೂ ತಮ್ಮ ಹೃದಯಾಂತರ್ವರ್ತಿಯಾದ ಭಗವಾನನ ಈ ಬಗೆಯ ಅಂತರ್ವಾಣಿಯನ್ನು ಕೇಳಿಯೇ ಐಹಿಕವಾದ ಸಮಸ್ತಕ್ಕೂ ತಿಲಾಂಜಲಿಯನ್ನಿತ್ತು, ಭಗವತ್ಕಾರ್ಯವಾದ ಲೋಕಸೇವೆಗೆ ತನುಮನಗಳನ್ನು ಧಾರೆಯನ್ನೆರೆದು ಕುಳಿತವರು.

ಏಕನಾಥ ಬಾಲಕನಿಗೆ ದೇವಾಲಯದಲ್ಲಿ - 'ನೀನು ದೌಲತಾಬಾದಿಗೆ ಹೋಗಿ ಅಲ್ಲಿ ಸುಪ್ರಸಿದ್ಧನಾದ ಗೃಹಸ್ಥ ಸಾಧುವೆಂದು ಹೆಸರಾಗಿರುವ ಮಹನೀಯನ ಚರಣ ಸನ್ನಿಧಿಯಲ್ಲಿ ಕುಳಿತು, ಆತ್ಮಸಾಕ್ಷಾತ್ಕಾರದ ಪಾಠಗಳನ್ನು ಕಲಿ'ಯೆಂದು ಒಂದು ವಾಣಿ ಕೇಳಿಸಿದಂತಾಯಿತು. ಜನಾರ್ದನಸ್ವಾ

ಮಿಯು ಸಾಮಾನ್ಯನಲ್ಲ. ಆತನು ನಯನಡತೆ ನಂಬಿಕೆ ವಿಶ್ವಾಸಗಳಲ್ಲೂ, ಧೈರ್ಯ ಸಾಹಸಾದಿಗಳಲ್ಲೂ, ರಾಜನೀತಿಯಲ್ಲೂ, ಕೈದುವನ್ನು ಹಿಡಿದು ರಣ ರಂಗದಲ್ಲಿ ಶತ್ರುದಳವನ್ನು ಎದುರಿಸುವಿಕೆಯಲ್ಲೂ ಇದೆಲ್ಲಕ್ಕೂ ಹೆಚ್ಚಾಗಿ ದೈವಭಕ್ತಿ - ತತ್ವಜ್ಞಾನಗಳಲ್ಲೂ ಅದ್ವಿತೀಯನಾಗಿದ್ದನು. ಆತನು ಶ್ರೀ ದತ್ತಾತ್ರೇಯಮೂರ್ತಿಗೆ ಅಚ್ಚಿನ್ನ ಭಕ್ತಿಭಾವದಿಂದ ನಡೆದುಕೊಳ್ಳುತ್ತಿದ್ದ ನು. ಆ ಸಾಧುಶೇಖರನ ಪೂಜಾ ವಿಷಯದಲ್ಲಿ ಗೌರವಭಾವವನ್ನು ತೋರಿ ಸಲೋಸುಗ ಆ ಸಂಸ್ಥಾನದ ಮಹಮ್ಮದೀಯ ರಾಜನು ಗುರುವಾರದ ದಿನ ಅಲ್ಲಿಯ ಎಲ್ಲ ಕಛೇರಿಗಳೂ ಮುಚ್ಚಲ್ಪಟ್ಟು, ಸಮಸ್ತರಿಗೂ ವಿರಾಮಕೊಡ ಬೇಕೆಂದು ಆಜ್ಞೆಮಾಡಿದ್ದನು. ಇಂತಹ ಪ್ರತಿಭಾವಂತನಾದ ಗುರುವಿನ ಬಳಿ ಸೇರಬೇಕೆಂದು ಏಕನಾಥನಿಗೆ ಆಜ್ಞೆಯಾಯಿತು. ಅಷ್ಟು ಚಿಕ್ಕವನಾದರೂ ಏಕನಾಥನು ಸಂದೇಹಿಸದೆ, ಬೆದರದೆ, ಚಪಲಗೊ ಳ್ಳದೆ, ದೃಢಭಾವದಿಂದ ಮನೆಯಿಂದ ಹೊರಟು, ಅನೇಕ ದಿನಗಳ ಪ್ರಯಾ ಣವನ್ನು ನಿರ್ಭಯದಿಂದ ಸಾಗಿಸಿ, ಬಳಲಿ ಬೆಂಡಾಗಿ, ಕೊನೆಗೆ ದೌಲತಾಬಾ ದನ್ನು ತಲುಪಿ, ಸಾಧು ಜನಾರ್ದನಸ್ವಾಮಿಯ ಮನೆಯಮುಂದೆ ನಿಂತನು. ಆ ಮಹನೀಯನ ಮನೆಯು ಅತಿಥಿ ಅಭ್ಯಾಗತರಿಗೆ ತೆರೆದ ಬಾಗಲಾಗಿದ್ದಿತು. ಪರಸ್ಥಳೀಕರಿಗೂ ಸಾಧುಗಳಿಗೂ ಮುಕ್ತದ್ವಾರದಂತಿದ್ದ ಆ ಮನೆಯನ್ನು ಹೊಗುವುದು ಎಷ್ಟು ಸುಲಭವಾಗಿತ್ತೋ, ಅಷ್ಟು ಸುಲಭವಾಗಿಯೇ ಅವನು ಸ್ವಾಮಿಯನ್ನು ಕಾಣಲು ಸಾಧ್ಯವಾಗಲಿಲ್ಲ. ಏಕನಾಥನು, ಅನೇಕ ಬಗೆ ಯಿಂದ ನಿರುತ್ಸಾಹಗೊಳಿಸಲ್ಪಟ್ಟರೂ ಅವುಗಳನ್ನೆಲ್ಲ ಲಕ್ಷ್ಯಮಾಡದೆ, ಒಮ್ಮೆ ಧೈರ್ಯದಿಂದ ಮುಂದೆ ಹೋಗಿ ಆತನನ್ನು ಸಂದರ್ಶಿಸಿ ನಮಸ್ಕರಿಸಿ ನಿಂತನು. ಸ್ವಾಮಿಯು ಮೃದುಮಧುರ ವಚನದಿಂದ ಬಹುದೂರದಿಂದ ಬಂದಿದ್ದ ಆ ಬಾಲಕನನ್ನು ಆದರಿಸಿ, ಆತನ ಮುಖವನ್ನು ನಿಟ್ಟಿಸಿನೋಡಿ - ಆ ದಿನ ಪ್ರಾತಃಕಾಲದ ತನ್ನ ಧ್ಯಾನದೃಷ್ಟಿಗೆ ಗೋಚರನಾಗಿದ್ದವನು ಅದೇ ರೂಪು ಚರ್ಯೆಗಳ ಬಾಲಕನೆಂದು ತಿಳಿದು ಪರಮ ಸಂತುಷ್ಟನಾದನು. ಬಾಲಕನಾದರೋ ಆಸೆನಿರಾಶೆಗಳ ಮಧ್ಯದಲ್ಲಿ ತೊಳಲುತ್ತ, ತಾನು ಯಾರೆಂ ಬುದನ್ನೂ, ಎಲ್ಲಿಂದ-ಯಾವ ಉದ್ದೇಶದಿಂದ ಅವರ ಸನ್ನಿಧಿಗೆ ಬಂದನೆಂಬು ದನ್ನೂ ತಿಳಿಸಿ, ಉದ್ಧಾರಮಾಡಬೇಕೆಂದು ಕೇಳಿಕೊಂಡನು.

ಅಷ್ಟು ಚಿಕ್ಕ ಬಾಲಕನು, ತಿಂಡಿ ತೀರ್ಥಗಳು-ಆಟಪಾಟಗಳು-ಅಥವ ಬಂಧು ಬಾಂಧವರು ಬಟ್ಟೆಬರೆ ಮುಂತಾದ ಯಾವ ಮೋಹಕ ವಸ್ತುವನ್ನೂ ಅಪೇಕ್ಷಿಸದೆ, ದೇವರು ಧರ್ಮ ಆತ್ಮ ಮುಂತಾದ ವಿಚಾರಗಳನ್ನು ಕುರಿತು ಪ್ರಸ್ತಾಪಿಸುತ್ತ, ಆ ಪ್ರಯತ್ನದಲ್ಲೇ ಮಗ್ನವಾದ ಮನಸ್ಸುಳ್ಳವನಾಗಿ, ಆಹಾರ ನಿದ್ರಾದಿಗಳ ಲಕ್ಷ್ಯವೂ ಇಲ್ಲದೆ ಎಷ್ಟೋ ದೂರದಿಂದ ಏಕಾಂಗಿಯಾಗಿ ಪ್ರಯಾಣಮಾಡಿ ಬಂದುದನ್ನೂ ಅವನ ಶ್ರದ್ಧಾಭಕ್ತಿಗಳನ್ನೂ ಕಂಡು ಜನಾರ್ದನಸ್ವಾಮಿಯು ಪರಮಾನಂದಪಟ್ಟು - 'ಮಗು ನಿನ್ನ ಶ್ರದ್ಧೆ ಉತ್ಸಾಹಗಳನ್ನು ಕಂಡು ನನಗೆ ಬಹು ಸಂತೋಷವುಂಟಾಗಿದೆ. ನಿನ್ನ ಇಷ್ಟಾರ್ಥವು ಸಿದ್ಧಿಯಾಗಲು, ನನ್ನಿಂದ ಸಾಧ್ಯವಿರುವ ಎಲ್ಲಾ ಸಹಾಯಗಳನ್ನೂ ಮಾಡುತ್ತೇನೆ. ಶಂಕಿಸಬೇಡ' ಎಂದು ಭರವಸೆಕೊಟ್ಟು, ವಿಶ್ವಾಸಪೂರ್ವಕವಾಗಿ ತನ್ನ ಬಳಿಯಲ್ಲೇ ಇರಿಸಿಕೊಂಡನು.

ಏಕನಾಥನು ಮುಂದೆ ಗುರುಸೇವೆ ಮತ್ತು ವಿದ್ಯಾಭ್ಯಾಸ ಈ ಕಾರ್ಯಗಳಿಗೇ ತನ್ನ ಸಂಪೂರ್ಣ ಗಮನಕೊಟ್ಟು ಜನಾರ್ದನಸ್ವಾಮಿಯ ಬಳಿ ವಾಸಿಸಿದನು. ಪೂರ್ವಕಾಲದ ಶಿಷ್ಯವೃತ್ತಿ - ಗುರುಸೇವೆ ಗುರುಕುಲವಾಸ ಮುಂತಾದುವುಗಳ ಅನುಭವಗಳನ್ನು ಕೇಳಿದರೆ, ಈ ಕಾಲದ ನವನಾಗರಿಕ ತರುಣರು ಅಪಹಾಸ್ಯಮಾಡಿ ನಗಬಹುದು. ವಿದ್ಯಾಭ್ಯಾಸವನ್ನು ಅಪೇಕ್ಷಿಸಿ ಶಿಷ್ಯವೃತ್ತಿಗಾಗಿ ನಿಲ್ಲುತ್ತಿದ್ದ ವ್ಯಕ್ತಿಯು, ನಾನು ಎಂಬ ಅಹಂಕಾರವನ್ನೂ ನನ್ನದು ಎಂಬ ಅಭಿಮಾನವನ್ನೂ ನಿಶ್ಶೇಷವಾಗಿ ತನ್ನ ಹೃದಯದಿಂದ ಹೊರಕ್ಕೆ ಅಟ್ಟಿ, ವಿನಯ ವಿಧೇಯತೆ, ನಿಶ್ಚಲ, ಬ್ರಹ್ಮಚರ್ಯ ಮುಂತಾದ ಸದ್ಗುಣಗಳನ್ನೂ ಅಭ್ಯಸಿಸಬೇಕಾಗಿತ್ತು. ಪೂರ್ವಕಾಲದ ವಿದ್ಯಾಭ್ಯಾಸವೆಂದರೆ ಇಲ್ಲದ ಸಲ್ಲದ ವಿಚಾರಗಳಿಂದ ತಲೆಯನ್ನು ತುಂಬಿಸಿದರಾಯಿತು ಎಂಬುದಲ್ಲ. ಜ್ಞಾನವು ಹೇಗೆ ಬೆಳೆಯಬೇಕೋ ಆದರೊಂದಿಗೆ ಅಂತಃಕರಣವೂ ಹಾಗೆಯೇ ಅಭಿವೃದ್ಧಿಯಾಗಬೇಕೆಂಬುದೂ, ಸಮಾಧಾನ, ಪ್ರೇಮ, ವಿಶ್ವಾಸ ಮುಂತಾದುವುಗಳೂ ಅನುಭವಕ್ಕೆ ಬರಬೇಕೆಂಬುದೂ ಪೂರ್ವಕಾಲದ ವಿದ್ಯಾಭ್ಯಾಸದ ಮುಖ್ಯಧ್ಯೇಯಗಳಾಗಿದ್ದುವು. ಅಂದು ದಾಸ್ಯಮನೋಭಾವದಿಂದ ಗುರುಗಳು ಹೇಳಿದ್ದನ್ನೆಲ್ಲ ಕುರಿಗಳಂತೆ ನಂಬಿಕೊಂಡಿರಬೇಕಾಗಿತ್ತೆಂದು ಯಾರೂ ಎಲ್ಲೂ ಹೇಳಿಲ್ಲ. ಯಾವವಿಷಯದಲ್ಲಾದರೂ ಸಂಶಯವು

ಸಂಪೂರ್ಣವಾಗಿ ಛೇದವಾಗಿ, ಪರಿಪೂರ್ಣ ಪ್ರಮಾಣದಿಂದ ನಂಬಿಕೆ ವಿಶ್ವಾಸಗಳು ಸ್ಥಿರಗೊಳ್ಳದಿದ್ದರೆ ಅಂಥವನಿಗೆ ಗುರುವಿನ ಬಳಿ ಪ್ರವೇಶವೇ ಸಿಕ್ಕುತ್ತಿರಲಿಲ್ಲ. ಏಕನಾಥನಲ್ಲಾದರೋ ಗುರುಭಕ್ತಿಯೂ ಸೇವಾಭಾವನೆಯೂ ಅಕ್ಷಯ ಸ್ವರೂಪದಿಂದ ಇದ್ದುವು. ಜನಾರ್ದನಸ್ವಾಮಿಗೆ ತಾನಲ್ಲದೆ ಇನ್ನೂ ಅನೇಕಮಂದಿ ಶಿಷ್ಯಂದಿರಿದ್ದರೂ, ಅರುಣೋದಯ ಕಾಲದಲ್ಲಿದ್ದರೆ, ರಾತ್ರಿ ಹತ್ತು ಹನ್ನೊಂದು ಗಂಟೆಗಳವರೆಗೆ ಆತನ ಸೇವೆಮಾಡಲು ಅವನು ಸರ್ವದಾ ಸಿದ್ಧನಾಗಿರುತ್ತಿದ್ದನು. ಗುರುಸೇವೆಯಲ್ಲಿ ಏಕನಾಥನಿಗೆ ಉಚ್ಚನೀಚ ಭಾವಗಳೆಂಬುದಿರಲಿಲ್ಲ—ಗುರುಭಕ್ತಿ ಎಂದರೆಂಥದು ಎಂಬುದನ್ನು ಕುರಿತು ಏಕನಾಥನೇ ಹೀಗೆಂದು ಒಂದೆಡೆಯಲ್ಲಿ ಬರೆದಿದ್ದಾನೆ.—'ಹೃದಯದಲ್ಲಿ ಭಕ್ತಿಭಾವವು ತುಂಬಿರುತ್ತಿರಲು ಶಿಷ್ಯನಾದವನು ಸರ್ವದಾ ತನ್ನ ಗುರುವಿನ ಪವಿತ್ರನಾಮವನ್ನು ಜಪಿಸುತ್ತಿರಬೇಕು. ಕಾರಣಾಂತರದಿಂದ ಗುರುವು ಕಣ್ಮರೆಯಾಗಿರುವಾಗ - ಗೂಡಿನೊಳಗಿನ ರೆಕ್ಕೆಬಾರದ ಹಕ್ಕಿಯಮರಿಯು ಹೇಗೆ ತನ್ನ ತಾಯಿ ಹಕ್ಕಿಗಾಗಿ ಕಾದು ಹಂಬಲಿಸುತ್ತಿರುವುದೋ ಶಿಷ್ಯನೂ ಹಾಗೆ ಗುರುವನ್ನೇ ಸ್ಮರಿಸಿಕೊಳ್ಳುತ್ತಿರಬೇಕು. ಗುರುಸನ್ನಿಧಿಯಲ್ಲಿ ಶಿಷ್ಯನಾದವನು, ತನ್ನ ವಿಷಯವಾದ ಸಮಸ್ತವನ್ನೂ ಮರೆತುಬಿಟ್ಟಿರುತ್ತಾನೆ. ತನಗೊಂದು ದೇಹವಿದೆ ಎಂಬ ವಿಚಾರವೂ, ತನ್ನ ತಾಯಿತಂದೆ ಹೆಂಡತಿ ಮಕ್ಕಳ ವಿಚಾರವೂ ಅವನ ಗಮನಕ್ಕೆ ಬರುವುದಿಲ್ಲ. ಗುರುಸೇವೆ ಎಂಬ ಕಡಲಿನಲ್ಲಿ ಧುಮುಕಿದ ಆತನು ಮತ್ತೇನನ್ನೂ ಅಪೇಕ್ಷಿಸದೆ, ಸರ್ವ ಇಷ್ಟಾರ್ಥಪ್ರದನೂ ತನ್ನ ಆ ಗುರುವೇ ಎಂದು ನಂಬಿ, ಆತನ ಕಟಾಕ್ಷವನ್ನೇ ಕಾಮಧೇನುವೋ ಎಂಬಂತೆ ವಿಶ್ವಾಸದಿಂದ ಆಸಿಸಿ ಮತ್ತೇನನ್ನೂ ಕಣ್ಣೆತ್ತಿಯೂ ನೋಡದಿರುತ್ತಾನೆ. ಅವನಿಗೆ ಗುರುವೇ ತಂದೆತಾಯಿ - ಬಂಧುಬಳಗ, ಹೆಚ್ಚೇನು, ಗುರುವೇ ಬ್ರಹ್ಮವಿಷ್ಣುಮಹೇಶ್ವರರು ಎಂಬ ಭಾವವು ಚಿತ್ತದಲ್ಲಿ ನೆಲೆಯಾಗಿರುತ್ತದೆ. ಇಂತಹ ಶಿಷ್ಯನು ತನ್ನ ಅನನ್ಯ ಭಕ್ತಿಯಿಂದ ಸಂಪೂರ್ಣಫಲವನ್ನೂ ಜೀವನ್ಮುಕ್ತಿ ಸ್ಥಿತಿಯನ್ನೂ ಆ ಗುರು ಸೇವೆಯ ಫಲವಾಗಿ ಪಡೆಯುವುದರಲ್ಲಿ ಆಶ್ಚರ್ಯವೇನಿದೆ?'

ಈ ಬಗೆಯ ಸೇವಾಮಾರ್ಗದಲ್ಲಿ ಗುರು ಮತ್ತು ಶಿಷ್ಯ ಇಬ್ಬರಿಗೂ ಬಹು ಅಪಾಯಕರವೆನ್ನಿಸಬಹುದಾದ ಸ್ಥಿತಿಯೊಂದುಂಟು. ಗುರುವು ಸಂಪೂ

ರ್ಣವಾಗಿ ಸಿದ್ಧಿಯನ್ನು ಪಡೆದವನಲ್ಲದಿದ್ದರೆ, ಶಿಷ್ಯನಿಗೆ ಪ್ರಯೋಜನವುಂಟಾಗುವುದಕ್ಕೆ ಪ್ರತಿಯಾಗಿ ಅವನು ಕೇವಲ ಗುಲಾಮನೇ ಆಗಿ ದುರ್ಗತಿಯನ್ನು ಹೊಂದುತ್ತಾನೆ. ಗುರುವೂ ಅಭಿಮಾನ ಅಹಂಕಾರಾದಿಗಳು ಹೆಚ್ಚಿ ನಾಶವಾಗುವುದು ತಪ್ಪದು. ಆದರೆ ನಮ್ಮ ಕಥಾನಾಯಕನ ವಿಚಾರದಲ್ಲಿ ಹಾಗಾಗಲಿಲ್ಲ. ಜನಾರ್ದನಸ್ವಾಮಿಯ ಗುರುಸೇವೆಯಿಂದ ಏಕನಾಥನಿಗೆ ಶಿಲಾಮೂರ್ತಿಯ ಸೇವೆಗಿಂತಲೂ ಅತಿಶಯ ಪ್ರಯೋಜನವುಂಟಾಯಿತು. ತನ್ನ ಶಿಷ್ಯರಲ್ಲಿ ಏಕನಾಥನು ಸರ್ವೋತ್ಕೃಷ್ಟನೆಂಬುದು ಸ್ವಲ್ಪ ದಿನಗಳಲ್ಲೇ ಆತನಿಗೆ ತಿಳಿದುಹೋಯಿತು. ಆಗಾಗ ಅವನನ್ನು ತಪಸ್ಯಕೆಂದು ನಿರ್ಜನವಾಗಿದ್ದ ಸಮೀಪದ ಗುಡ್ಡಕ್ಕೆ ಕಳುಹಿಸುವನು. ಆಗಾಗ, ಅವನು ಆತ್ಮಸಾಧನಾಮಾರ್ಗದಲ್ಲಿ ಎಷ್ಟುಮಟ್ಟಿಗೆ ಅಭಿವೃದ್ಧಿಗೊಂಡಿರುವನೆಂದು ಪರೀಕ್ಷಿಸುವನು. ರಾತ್ರಿಯಲ್ಲಿ ಎಲ್ಲರೂ ಮಲಗಿ ನಿದ್ರಿಸಿದ ಬಹು ಹೊತ್ತಿನಮೇಲೆ-ಏಕಾಂತದಲ್ಲಿ ತನ್ನಾಪ್ರಿಯ ಶಿಷ್ಯನೊಂದಿಗೆ ಭಗವತ್ಪ್ರಾಪ್ತಿ -ಆತ್ಮಾನುಭವಗಳೇ ಮುಂತಾದ ಗಹನ ವಿಚಾರಗಳನ್ನೆತ್ತಿ ಪ್ರಸ್ತಾಪಿಸುವನು. ಅನೇಕವೇಳೆ ಏಕನಾಥನು ತನ್ನ ಗುರುವರ್ಯನನ್ನು ಕುರಿತು—

'ಸ್ವಾಮಿ ನನಗೆ ಭಗವತ್ಪ್ರಾಪ್ತಿಯು ಹೇಗಾಗುವುದು - ಎಂದಿಗಾದೀತು' ಎಂದು ಪ್ರಾರ್ಥಿಸುವನು. ಗುರುವೂ ಸಹ - 'ಮಗೂ ಆತುರಪಡಬೇಡ - ನಿನ್ನಂತಹ ಶ್ರದ್ಧಾವಂತನಿಗಲ್ಲದೆ ಮತ್ತಾರಿಗೆ ಭಗವಂತನು ಕೃಪೆಮಾಡುವುದು' ಎಂದು ಹೇಳಿ ಎಂತೂ ಅಂತಹ ಒಂದು ಸಮಯವನ್ನು ಮುಂದೊತ್ತುತ್ತಿರುವನು. ಹೀಗೇ ಬಹುದಿನ ನಡೆಯಲು ಒಂದು ಸಂದರ್ಭದಲ್ಲಿ ಏಕನಾಥನು, ತನ್ನ ಗುರುವಿನ ಲೆಕ್ಕದಲ್ಲಿ ಒಂದು ಕಾಸಿನ ಖರ್ಚು ತಾಳೆ ಬಾರದೆ ಸುಮಾರು ಮಧ್ಯರಾತ್ರಿಯವರೆಗೆ ಅನನ್ಯ ಮನಸ್ಕನಾಗಿ ಎಚ್ಚತ್ತು ಹುಡುಕಿಕೊಂಡಿದ್ದನು. ಅನೇಕವೇಳೆ ಲೆಕ್ಕದ ಕಡತಗಳನ್ನೆಲ್ಲ ಪುನಃಪುನಃ ತಿರುಗಿಸಿ ತಿರುಗಿಸಿ ಲೆಕ್ಕವನ್ನು ಕಣ್ಣಿನೋವೆತ್ತುವಂತೆ ಹುಡುಕಿದ್ದಾಯಿತು.—'ಅಕ್ಕಟಾ ನನ್ನ ಕರ್ತವ್ಯದಲ್ಲಿ ಲೋಪವುಂಟಾಯಿತೆಂದು ತನ್ನ ಗುರುಮಹಾರಾಜರು ನನ್ನ ವಿಷಯದಲ್ಲಿ ಅತೃಪ್ತಿ ಹೊಂದುವರಲ್ಲಾ-ನನಗಿನ್ನೇನು ಗತಿ' ಎಂದು ಆ ಸಾಧುಶೀಲನು ಚಿಂತೆಗೊಳಗಾದನು. ಪುನಃ ದೀಪವನ್ನು ಉಜ್ವಲಗೊಳಿಸಿ, ನೂತನ ಉತ್ಸಾಹದಿಂದ ಮತ್ತೊಮ್ಮೆ ಪ್ರಾರಂಭದಿಂದ

ನೋಡಿ ಎಂತೂ ತಪ್ಪನ್ನು ಕಂಡುಹಿಡಿದೇ ತೀರಬೇಕೆಂದು ನಿರ್ಧರಿಸಿ ಕುಳಿತನು. ಹಾಗೆ ಬಹುಹೊತ್ತು ಹುಡುಕಿದಮೇಲೆ, ಕಳೆದು ಹೋಗಿದ್ದ ಒಂದು ಕಾಸಿನ ಲೆಕ್ಕವು ಸಿಕ್ಕಿತು. ಆಗ ಆತನಿಗುಂಟಾದ ಆನಂದಕ್ಕೆ ಮಿತಿಯಿಲ್ಲ. ಕೈ ಚಪ್ಪಾಳೆ ತಟ್ಟಿ ಹೋ ಎಂದು ಆನಂದ ಪ್ರದರ್ಶನಮಾಡಿ ಗಟ್ಟಿಯಾಗಿ ನಗಲಾರಂಭಿಸಿದನು. ಅಕಸ್ಮಾತ್ ಹಿಂದಿರುಗಲು ಅಲ್ಲೇ ತನ್ನ ಗುರುವು ದಯಾದೃಷ್ಟಿಯಿಂದ ತನ್ನ ಕಡೆಗೆ ನೋಡುತ್ತ, ಗಂಭೀರವಾದ ಮೌನಭಾವದಿಂದ ನಿಂತಿದ್ದುದನ್ನು ಏಕನಾಥನು ನೋಡಿದನು. ತಕ್ಷಣ ಮುಂದೇನೂ ತೋರದೆ - ಮೌನದಿಂದ ಆತನ ಪಾದಗಳಿಗೆ ಅಡ್ಡಬಿದ್ದನು. ಆ ಸಂದರ್ಭವನ್ನು ಉಪಯೋಗಪಡಿಸಿಕೊಂಡು ಗುರುವು— 'ಮಗೂ ಈಗ ನೋಡಿದೆಯಾ, ಭಗವತ್ಪ್ರಾಪ್ತಿಗೆ ಇಂತಹ ಅನನ್ಯ ಚಿತ್ತವೃತ್ತಿಯೇ ಸಾಧಕವಾದ ಮಾರ್ಗವು. ಈಗ ನೀನು ಪ್ರದರ್ಶಿಸಿದ ಶ್ರದ್ಧೆ ಉತ್ಸಾಹ ಏಕಾಗ್ರತೆ ಮುಂತಾದುವುಗಳನ್ನೇ ತಾತ್ವಿಕ ದೃಷ್ಟಿಯಿಂದ ಭಗವತ್ಪರವಾಗಿ ತಿರುಗಿಸು. ನಿನಗೆ ಆತ್ಮಸಾಕ್ಷಾತ್ಕಾರವೇನು ದುರ್ಲಭವಾಗದು' ಎಂದು ಉಪದೇಶಿಸಿದನು. ಶಿಷ್ಯನೂ, ತನ್ನಾ ಗುರುವಿನ ಉಪದೇಶವನ್ನು ಶ್ರದ್ಧಾಪೂರ್ವಕ ಕೈಕೊಂಡು-ಅಗತ್ಯವಾಗಿ ಹಾಗೇ ಮಾಡುವೆನೆಂದು, ಅಂದಿನಿಂದ ತನ್ನ ಶ್ರದ್ಧಾ ಉತ್ಸಾಹಗಳನ್ನು ಇಮ್ಮಡಿಗೊಳಿಸಿ ಕಾರ್ಯ ತತ್ಪರನಾದನು.



## ಅಧ್ಯಾಯ ೪　　'ವಿವಾಹಮಹೋತ್ಸವ'

ಗುರುವಿನ ಪರಮಾನುಗ್ರಹಕ್ಕೆ ಪಾತ್ರನಾದೆನಲ್ಲಾ ಎಂಬ ಉತ್ಸಾಹವು ಏಕನಾಥನ ಹೃದಯವನ್ನು ತುಂಬಿ, ಅವನಲ್ಲಿ-ಇನ್ನೇನು ಜಗತ್ತನ್ನಾದರೂ ಜಯಿಸೇನು, ಎಂಬಂತಹ ನಿರ್ಭೀತಿಯನ್ನೂ ಅಗಾಧವಾದ ಶ್ರದ್ಧೆಯನ್ನೂ ಉಂಟುಮಾಡಿತು. ಏಕನಾಥನು ಮುಂದೆ ತನ್ನ ಗುರುವಿನ ಆಜ್ಞೆಯನ್ನು ಪಡೆದು, ಆ ಊರಿನ ಕೋಟೆಯ ಒಂದು ಅಭುಕ್ತ ಮೂಲೆಯಲ್ಲಿ ಕುಳಿತು ಅತಿ ಕಠಿಣ ತಪಶ್ಚರ್ಯವನ್ನು ಆಚರಿಸಲಾರಂಭಿಸಿದನು. ಧ್ಯಾನಮಗ್ನ

ನಾಗಿ ಬಹಿಃಸ್ಪೃಷ್ಟಿಯಿಲ್ಲದೆ ಕೇವಲ ಅಂತರ್ಮುಖಿಯಾಗಿ ಆತನು ಕುಳಿತಾಗ ಲೆಲ್ಲ ಒಂದು ಸರ್ಪವು ಬಂದು ಆತನ ದೇಹವನ್ನು ಸುತ್ತಿಕೊಳ್ಳುತ್ತಿದ್ದಿ ತಂತೆ! ಪ್ರಾರಂಭಕ್ಕೆ ಅದಕ್ಕೆ ಆತನನ್ನು ಕಚ್ಚಬೇಕೆಂದು ಇಚ್ಛೆಯಾಯಿ ತಾದರೂ, ಆತನ ದೇಹವನ್ನು ಮುಟ್ಟಿದೊಡನೆಯೇ ಆತನ ತಪಸ್ಸಾಮರ್ಥ್ಯ ದಿಂದಲೋ ಎಂಬಂತೆ ಅದರ ದುಸ್ವಭಾವವೆಲ್ಲ ಅಣಗಿಹೋಗಿ ಅದು ಕೇವಲ ಸಾಧುವಾಗಿಹೋಯಿತು. ದಿನವೂ ಆತನು ಧ್ಯಾನಮಗ್ನನಾಗಿ ಕುಳಿತೊಡ ನೆಯೇ ಬರುತ್ತಿದ್ದುದಾದರೂ, ಆತನನ್ನು ಹಿಂಸಿಸಲಿಕ್ಕಲ್ಲದೆ, ಕೇವಲ ಯಾವುದಾದರೊಂದು ಬಗೆಯಿಂದ ಆತನ ಸೇವೆಯನ್ನು ಮಾಡಲಿಕ್ಕಾಗಿಯೇ ಆಗಿತ್ತು. ಇದೇನು, ಮಹಾ ದುಷ್ಟಪ್ರಾಣಿಯಾದ ಸರ್ಪವು ಸಾಧುವಾಗಿ ಒಬ್ಬ ಮನುಷ್ಯನಿಗೆ ಎಂತಹ ಸೇವೆಮಾಡೀತು? ಅದು ದಿನವೂ ಆತನ ದೇಹ ವನ್ನು ಸುತ್ತಿಕೊಂಡು ಬಿಸಿಲಿಗೆ ಮರೆಯಾಗಿರುವಂತೆ ಆತನ ತಲೆಯಮೇಲೆ ತನ್ನ ಹೆಡೆಯನ್ನೆತ್ತಿ ಕುಳಿತಿರುತ್ತಿದ್ದಿತಂತೆ! ಎಷ್ಟೋ ದಿವಸಗಳವರೆಗೆ ಈ ಸಂಗತಿಯು ಏಕನಾಥನಿಗೇ ತಿಳಿದಿರಲಿಲ್ಲವೆಂದೂ, ಆತನು ಅಂತರ್ಮುಖಿಯಾ ದಾಗ ಬಂದು ಹಾಗೆ ಸುತ್ತಿಕೊಳ್ಳುತ್ತಿದ್ದ ಸರ್ಪವು, ಆತನು ಬಹಿರ್ಮುಖಿ ಯಾಗುವುದಕ್ಕೆ ಮುಂಚೆಯೇ ಬಿಟ್ಟುಹೋಗುತ್ತಿದ್ದಿತಂತೆ! ಹೀಗಿರುವಲ್ಲಿ ಒಂದು ದಿನ ಒಬ್ಬ ಕುರಿಕಾಯುವವನು ಆ ಭಯಂಕರ ನೋಟವನ್ನು ಆಕ ಸ್ಮಾತ್ತಾಗಿ ಕಂಡು, ಒಡನೆ ಕಿಟ್ಟನೆ ಕಿರಚಿಕೊಂಡನಂತೆ! ಅದು ಒಡನೆ ಏಕ ನಾಥನನ್ನು ಎಚ್ಚರಗೊಳಿಸಿತು. ಸರ್ಪವಾದರೋ ಆ ಸುಳಿವನ್ನು ತಿಳಿದು ಬಿಟ್ಟು ಹೊರಡುವುದಕ್ಕೆ ಮುಂಚೆಯೇ ಏಕನಾಥನು ಕಣ್ಣುಬಿಟ್ಟು ಅದನ್ನು ನೋಡಿಬಿಟ್ಟನು. ಆದರೂ ಅಹಿಂಸೆಯನ್ನೇ ಪರಮಧರ್ಮವೆಂದು ಕೈ ಕೊಂಡು ಆಚರಿಸುತ್ತಿದ್ದ ಆ ಮಹಾನುಭಾವನಿಂದ ಆ ಸರ್ಪಕ್ಕೆ ಏನು ತೊಂದರೆಯುಂಟಾದೀತು ?

ಏಕನಾಥನ ಗುರುಭಕ್ತಿಯನ್ನೂ ಗುರುವಿನ ಸೇವಾವಿಷಯದಲ್ಲಿ ಆತನಿ ಗಿದ್ದ ಸ್ಫೂರ್ತಿಯನ್ನೂ ಕುರಿತು, ಈ ಹಿಂದಿನ ಸರ್ಪದ ಕಥೆಯಂತೆಯೇ ನಡೆ ಯಿತೆಂಬ ಮತ್ತೊಂದು ಕಥೆಯನ್ನೂ ಏಕನಾಥ ಸಾಧುವಿನ ಸ್ವಂತ ಹೇಳಿ ಕೆಯೇ ರುಜುಗೊಳಿಸುತ್ತದೆ. ಒಂದಾನೊಂದು ದಿನ ಜನಾರ್ದನಸ್ವಾಮಿಯು ತನ್ನ ದೈವಗೃಹದಲ್ಲಿ ಧ್ಯಾನಮಗ್ನನಾಗಿ ಕುಳಿತಿದ್ದ ವೇಳೆಯಲ್ಲಿ ಶತ್ರುಸೈನ್ಯ

ವೊಂದು ಅಕಸ್ಮಾತ್ತಾಗಿ ಬಂದು ದೇವಗಿರಿಯ ಕೋಟೆಯನ್ನು ಮುತ್ತಿದೆ ಯೆಂದೂ ತಾವು ಒಡನೆ ಬರದಿದ್ದರೆ ಶತ್ರುಸೈನ್ಯವು ಕೋಟೆಯನ್ನು ನುಗ್ಗಿ ಅರಮನೆಯನ್ನು ಮುತ್ತುವುದೆಂದೂ ಆ ಕೋಟೆಯ ರಕ್ಷಕನಾಗಿದ್ದ ಕಿಲ್ಲೇ ದಾರನು ಒಂದು ಪತ್ರವನ್ನು ಬರೆದು ಅದನ್ನು ಜನಾರ್ದನಸ್ವಾಮಿಯಲ್ಲಿಗೆ ಕಳುಹಿಸಿದನು. ಆಗ ಧ್ಯಾನಕೊಠಡಿಯ ದ್ವಾರರಕ್ಷಕನಾಗಿದ್ದ ಏಕನಾಥನು ಆ ಕಾಗದವನ್ನು ನೋಡಿ, ಕಾರ್ಯದ ಅಪಾಯ ಸಂದರ್ಭವನ್ನು ತಿಳಿದು ಆ ಸಂದರ್ಭದಲ್ಲಿ ಏನು ಮಾಡಬಹುದೆಂದು ಯೋಚಿಸಿದನು. ಒಂದು ಕ್ಷಣ ಸಾವಕಾಶವಾದರೂ ರಾಜಧಾನಿಗೂ, ರಾಜಕುಟುಂಬಕ್ಕೂ ವಿಶೇಷ ಅಪಾಯ ವುಂಟಾಗದೆ ತಪ್ಪದೆಂದು ತೋರಿತು. ತರುವಾಯ ಇನ್ನು ಸಾವಕಾಶಮಾಡ ಲಾಗದೆಂದು, ಪ್ರಾಪ್ತವಾಗಿದ್ದ ಅಪಾಯ ಸಂದರ್ಭವನ್ನೂ ತಾನು ಹೊರಟು ಆ ಕಾರ್ಯಸಾಧನೆಗಾಗಿ ಪ್ರಯಾಣಮಾಡಿದ್ದೇನೆಂದೂ ತನ್ನ ಗುರುವಿಗೆ ಒಂದು ಪತ್ರವನ್ನು ಬರೆದಿಟ್ಟು, ಅಲ್ಲಿಂದ ಹೊರಟು ತನ್ನ ಗುರುವು ಯುದ್ಧ ಕಾಲದಲ್ಲಿ ಧರಿಸುತ್ತಿದ್ದ ಉಡುಪನ್ನೂ ಶಿರಸ್ತ್ರಾಣ ಕವಚಾದಿಗಳನ್ನೂ ಧರಿಸಿ ಕುದುರೆಯನ್ನೇರಿ ಆವೇಶಗೊಂಡು ಶತ್ರುಸೈನ್ಯಕ್ಕೆ ಅಭಿಮುಖವಾಗಿ ತನ್ನ ಸೈನ್ಯವನ್ನು ನಡೆಯಿಸಿಕೊಂಡು ಹೊರಟನು. ಏಕನಾಥನು ಅಶ್ವಾರೂಢ ನಾಗಿ, ತನ್ನ ಗುರುವು ನಡೆಯಿಸುತ್ತಿದ್ದ ತಮ್ಮ ರಾಜ್ಯದ ಸೈನ್ಯಕ್ಕೆ ಶತ್ರು ಸೈನ್ಯದಮೇಲೆ ಬೀಳಲು ಆಜ್ಞೆಮಾಡಿದ್ದನ್ನು ಕಂಡು ಸೈನಿಕರೂ ಆವೇಶ ಗೊಂಡವರಂತೆ ಹರಹರ ಮಹಾದೇವ ಎಂಬ ಒಂದು ಘೋಷದಿಂದ ದಿಕ್ತಟಿ ಗಳನ್ನು ಬಿರಿಸುತ್ತ ಕೋಟೆಯ ಬಾಗಿಲನ್ನು ತೆಗೆಸಿಕೊಂಡು ಶತ್ರುಸೈನ್ಯದ ಮೇಲೆ ಬಿದ್ದರು. ಆಸೈನ್ಯವು ನಡೆದುಬಂದ ರಭಸಕ್ಕೇ ಅಂಜಿ ಶತ್ರುಸೈನ್ಯವು ಎದುರಿಸಲಾರದೆ ಪ್ರಾಣಭೀತಿಯಿಂದ ಓಡಿಹೋಯಿತು. ಏಕನಾಥನು ಇನ್ನೂ ಸ್ವಲ್ಪದೂರ ಅವರನ್ನು ಬೆನ್ನಟ್ಟಿಹೋಗಿ, ಅವರ ಭಂಡಾರವನ್ನೂ, ವಸ್ತು ಸಾಮಗ್ರಿಯನ್ನೂ ಸ್ವಾಧೀನಪಡಿಸಿಕೊಂಡು ರಾಜಧಾನಿಗೆ ಹಿಂದಿರುಗಿ ಕುದುರೆ ಯಿಂದಿಳಿದು ಪುನಃ ತನ್ನ ಗುರುವಿನ ಧ್ಯಾನಗೃಹದ ಸಮೀಪಕ್ಕೆ ಬಂದನು. ಆ ವೇಳೆಗೆ ಗುರುವು ಬಹಿರ್ಮುಖನಾಗಿ ಏಕನಾಥನು ತನಗಾಗಿ ಬಿಟ್ಟುಹೋ ಗಿದ್ದ ಕಾಗದವನ್ನು ನೋಡುತ್ತಿದ್ದನು ಅಷ್ಟರಲ್ಲಿ ಜಯಶಾಲಿಯಾಗಿ ಹಿಂದಿ ರುಗಿ ಬಂದ ಏಕನಾಥನು ನಡೆದ ಸಂಗತಿಯನ್ನೆಲ್ಲ ತಿಳಿಸಿ, ತನ್ನ ಈ ಧೂರ್ತ

ತನವನ್ನು ಕ್ಷಮಿಸಬೇಕೆಂದೂ, ಸಮಾಧಿಮಗ್ನರಾಗಿದ್ದ ತಮಗೆ ಈ ಸ್ವಲ್ಪ ಕಾರ್ಯಕ್ಕಾಗಿ ಏಕೆ ತೊಂದರೆ ಕೊಡಬೇಕೆಂದೂ ತಾನೇ ಹೊರಟೆನೆಂದೂ ತಿಳಿಸಿ ಪಾದಕ್ಕೆ ಬಿದ್ದನು. ಮೈಕಟ್ಟು ಎತ್ತರ ಆಳ್ತನ ಮುಂತಾದುವುಗಳಲ್ಲಿ ಹೆಚ್ಚು ಕಡಮೆ ತನ್ನಂತೆಯೇ ಇದ್ದ ಅವನನ್ನು, ಆ ಆತುರಕಾಲದಲ್ಲಿ ಆವೇಶಯುಕ್ತರಾಗಿದ್ದ ಸೈನಿಕರು ಕಣ್ಣಿಟ್ಟು ನೋಡಲವಕಾಶವಿಲ್ಲದೆ ತನ್ನ ಆಯುಧ ಉಡುಪು ಕುದುರೆ ಮುಂತಾದುವು ಇದ್ದುದರಿಂದ ತಾನೇ ಇರಬಹುದೆಂದು ವಿಧೇಯರಾಗಿ ನಡೆದರೆಂದು ಚಿಂತಿಸಿ ಎಂತೂ ತನ್ನ ಆಜ್ಞೆಯು ನೆರವೇರಿ ರಾಜಕಾರ್ಯವು ಸುಲಲಿತರೀತಿಯಿಂದ ನಡೆದು, ರಾಜ್ಯಕ್ಕೆ ಕ್ಷೇಮವಾದುದಕ್ಕಾಗಿ ಸಂತೋಷಗೊಂಡು ಏಕನಾಥನನ್ನು ಕ್ಷಮಿಸಿದುದಲ್ಲದೆ, ಅಭಿನಂದಿಸಿದ ನಂತೆ! ಈ ಎರಡು ಕಥೆಗಳನ್ನೂ ಏಕನಾಥನ ಹೇಳಿಕೆಯು ಆಧಾರದಮೇಲೆಯೇ ನಂಬಬೇಕಾಗಿದೆ.

ತನ್ನ ಶಿಷ್ಯನು ಈ ಬಗೆಯ ಹಲವು ಮಹತ್ವದ ಕಾರ್ಯಗಳಿಂದ ತನ್ನ ಯೋಗ್ಯತೆಯನ್ನು ಪ್ರಕಾಶಗೊಳಿಸಿದುದನ್ನು ಕಂಡ ಜನಾರ್ದನ ಸ್ವಾಮಿಯು ಪರಮ ಸಂತೋಷದಿಂದ ಅವನ ಮನೋಮಯಕೋಶವನ್ನು ಆವರಿಸಿದ್ದ ಲೇಶಮಾತ್ರದ ಅಜ್ಞಾನವೆಂಬ ತೆರೆಯನ್ನು ನಿವಾರಿಸಿ ಆತನಿಗೆ ಜ್ಞಾನೋಪದೇಶಮಾಡಿ ಉದ್ಧರಿಸಬೇಕೆಂದು ಸಂಕಲ್ಪಿಸಿ, ಒಂದಾನೊಂದು ಗುರುವಾರ ಪ್ರಾತಃಕಾಲ ತನ್ನ ಶಿಷ್ಯೋತ್ತಮನನ್ನು ಬಳಿಗೆ ಕರೆದು, ಆ ದಿನ ತನ್ನನ್ನು ಅನುಸರಿಸಿ ಬರುವಂತೆ ಕರೆವನು. ಗುರುಶಿಷ್ಯರಿಬ್ಬರೂ ಹೊರಟರು. ಸ್ವಾಮಿಯು, ತನ್ನ ಮನೆಯಿಂದ ಸುಮಾರು ಎರಡು ಮೈಲುದೂರವಿದ್ದ ಒಂದು ಮಾವಿನ ತೋಪಿಗೆ ತನ್ನ ಶಿಷ್ಯನನ್ನು ಕರೆದೊಯ್ದನು. ಏಕನಾಥನಿಗಾದರೋ ತನ್ನ ಗುರುಸ್ವಾಮಿಯು ಅಂದು ತನ್ನನ್ನು ಗುರುವು ಪರಮಾನುಗ್ರಹ ಮಾಡಲಿಕ್ಕಾಗಿಯೇ ಕರೆದೊಯ್ಯುತ್ತಿರುವನೆಂಬ ಒಂದು ಅಂತರ್ಭಾವವು ಹೇಗೋ ಮನಸ್ಸಿಗೆ ಬೋಧೆಯಾಗಿ, ಸಂತೋಷ-ಆಸೆ ಭಯ ಇವುಗಳಿಂದ ಆಗಿನ ತನ್ನ ಸ್ಥಿತಿಯಿಂಥದೆಂದು ಬಾಯಿಂದ ಹೇಳಲು ಸಾಧ್ಯವಿಲ್ಲದಂತಿರಲು, ತಾಯನ್ನು ಅನುಸರಿಸಿ ನಡೆವ ಎಳೆಗಂದಿಯ ಕರುವಿನಂತೆ ತನ್ನ ಗುರುವಿನ ಹಿಂದೆಯೇ ನಡೆದುಹೋದನು. ಗುರು ಶಿಷ್ಯರಿಬ್ಬರೂ ಉನ್ನತವಾದ ವೃಕ್ಷಗಳಿಂದ ಮನೋಹರವಾದ ಒಂದು ತೋಪಿಗೆ ಹೋಗಿ

ಸೇರಿದರು. ಆ ಸ್ಥಳವಾದರೋ ಧ್ಯಾನೇಶ್ವರೀ ಗ್ರಂಥದಲ್ಲಿ ತಪೋವನವು ಹೇಗಿರಬೇಕೆಂದು ವರ್ಣಿಸಲ್ಪಟ್ಟಿದೆಯೋ ಹಾಗೆಯೇ ಶಾಂತವೂ ಮನಃ ಪ್ರಸಾದಕವೂ ಆಗಿದ್ದಿತು.

ಧ್ಯಾನೇಶ್ವರಮಹಾರಾಜನು-ಅಂತಹ ಸ್ಥಳವು ತಂಪಾಗಿಯೂ, ಒತ್ತಾದ ಮರಗಳಿಂದ ಕೂಡಿ, ಶುಚಿಯಾಗಿಯೂ ಇರಬೇಕು. ಮಧ್ಯದಲ್ಲೊಂದು ದೇವಾಲಯ (ಶಿವಾಲಯ) ವಿರಬೇಕು. ಮರದೆಲೆಗಳ ಮಧ್ಯದಿಂದ ದೂರಿ ಬರುವ ಸೂರ್ಯಕಿರಣಗಳ ಕಾಂತಿಯು ಆ ಪ್ರದೇಶವನ್ನು ಪವಿತ್ರಗೊಳಿಸು ವಂತಿರಬೇಕು. ವಾಯುವು ತಂಪಾಗಿಯೂ, ಸುವಾಸಿತವಾಗಿಯೂ ಇರ ಬೇಕು. ಸಮೀಪದಲ್ಲೇ ಸ್ವಚ್ಛ ಜಲದ ಪ್ರವಾಹವೊಂದು ಸ್ಫಟಿಕಮಣಿ ಯಂತೆ ಹೊಳೆಯುತ್ತಾ ಜುಳುಜುಳುಶಬ್ದದಿಂದ ಹರಿಯುತ್ತಿರಬೇಕು. ಅಲ್ಲೊಂದಲ್ಲೊಂದು ಗಿಣಿಯಾಗಲಿ, ಚಕ್ರವಾಕವಾಗಲಿ ಮಧುರಸ್ವರಗೈ ಯ್ಯುತ್ತಿರಬೇಕು. ತುಂಬಿಗಳ ಝೇಂಕಾರವಾಗಲೀ ನವಿಲು-ಹಂಸೆಗಳ ಇರು ವಿಕೆಯಾಗಲೀ, ಕೋಗಿಲೆಯ ಗಾಯನವಾಗಲೀ ಅಪೇಕ್ಷಣೀಯವೆನ್ನಿಸದಿರು ವುದಿಲ್ಲ. ಒಟ್ಟಿನಲ್ಲಿ ಆ ಸ್ಥಳವು ಪ್ರಾಪಂಚಿಕನಿಗೆ ಮನೋರಂಜಕವಾ ಗಿಯೂ, ಶ್ರಾಂತನಿಗೆ ತಾಪಪರಿಹಾರಕವಾಗಿಯೂ, ಸಾಧಕನಿಗೆ ಮನಃಪ್ರಸಾ ದಕವಾಗಿಯೂ ಇರಬೇಕು. ಒಬ್ಬ ರಾಜನು ಆ ಸ್ಥಳವನ್ನು ಸಂದರ್ಶಿಸಿದ ನಾದರೆ, ಅವನಿಗೂ ಸಹ ತನ್ನ ಕಿರೀಟವನ್ನು ಕಿತ್ತೊಗೆದು ಶಾಂತಿಯಿಂದ ಧ್ಯಾನಮಗ್ನನಾಗುವಂತೆ ಚಿತ್ತವೃತ್ತಿಯನ್ನುಂಟುಮಾಡಲು ಯೋಗ್ಯವಾದು ದಾಗಿರಬೇಕು— ಎಂದು ವರ್ಣಿಸಿರುತ್ತಾನೆ. ಜನಾರ್ದನಸ್ವಾಮಿಯೂ ಏಕನಾಥನೂ ಪ್ರಯಾಣಮಾಡಿದ ಆ ತಪೋವನವು ಆ ವರ್ಣನೆಗನುಸಾರ ವಾಗಿಯೇ ಮನೋಹರವಾಗಿದ್ದಿತು. ಏಕನಾಥನ ಮನಸ್ಸು ಆ ಸ್ಥಳವನ್ನು ಸೇರಿದೊಡನೆಯೇ ಸುಪ್ರಸನ್ನವಾಯಿತು. ಸ್ವಾಮಿಯು ತನ್ನ ಶಿಷ್ಯೋತ್ತ ಮನನ್ನು ಬಳಿಗೆ ಕರೆದು-'ಮಗೂ ಇಲ್ಲಿ ಬಂದು ಸ್ವಸ್ಥಚಿತ್ತದಿಂದ ನಿಂತಿರು. ಈ ದಿನವು ನಿನ್ನ ಜೀವಿತದಲ್ಲೇ ಧನ್ಯತಮವಾದುದೆಂದು ತಿಳಿ. ದತ್ತಾ ತ್ರೇಯಮೂರ್ತಿಯು ಯಾವ ರೂಪದಿಂದ ಬಂದರೂ ಬೆದರದೆ ಸಂದರ್ಶಿಸಿ ಕೃತಕೃತನಾಗು' ಎಂದು ನುಡಿದನು.

ಗುರುಶಿಷ್ಯರು ಹೀಗೆ ಮಾತನಾಡಿ ಸ್ವಲ್ಪ ಹೊತ್ತಾಗುವುದರೊಳಗಾ

ಗಿಯೋ, ಭಯಂಕರ ಸ್ವರೂಪಿಯಾದ ಒಬ್ಬ ಮಹಮ್ಮದೀಯನು ದೃಷ್ಟಿಗೋಚರನಾದನು. ಅವನು ಕಪ್ಪಾಗಿ, ಎತ್ತರವಾಗಿ ಹೊಸದಾದ ಒಂದು ಮೃಗ ಚರ್ಮವನ್ನು ಹೊದ್ದುಕೊಂಡು, ರಕ್ತವರ್ಣದ ಕಣ್ಣುಗಳಿಂದ ಯಮನ ವಾಹನವೋ ಎಂದು ತೋರುವಂತೆ ಭೀತಿಜನಕವಾಗಿದ್ದ ಒಂದು ದೊಡ್ಡ ಕರಿಯ ಹೆಣ್ಣು ನಾಯಿಯನ್ನು ಕೈಯ್ಯಲ್ಲಿ ಹಿಡಿದುಕೊಂಡು ದೃಷ್ಟಿಗೋಚರನಾದನು. ಆ ದೃಶ್ಯವನ್ನು ಕಂಡೊಡನೆಯೇ ಏಕನಾಥನು ನಡುಗಿದಂತಾಗಿ-ಆದರೆ ತನ್ನ ಗುರುವು ಹೇಳಿದ್ದ ಮಾತನ್ನು ಜ್ಞಾಪಿಸಿಕೊಂಡು ಸ್ವಸ್ಥಚಿತ್ತನಾದನು. ಜನಾರ್ದನಸ್ವಾಮಿಯೂ ಆ ಮಹಮ್ಮದೀಯನೂ ಸಂಭಾಷಿಸ ತೊಡಗಿದರು. ಸ್ವಲ್ಪ ಹೊತ್ತಿನಮೇಲೆ ಸ್ವಾಮಿಯು ತನ್ನ ಶಿಷ್ಯನನ್ನು ಮುಂದಕ್ಕೆ ಕರೆದು ಆತನಿಗೆ ಪರಿಚಯಮಾಡಿಸಿ, ಆತನು ತಂದಿದ್ದ ಆ ಹೆಣ್ಣು ನಾಯಿಯಿಂದ ಹಾಲುಕರೆವಂತೆ ತನ್ನ ಶಿಷ್ಯನಿಗೆ ನೇಮಿಸಿದನು. ಏಕನಾಥನು ತನ್ನ ಗುರುವಿನ ಆಜ್ಞೆಯಂತೆಯೇ ಮಾಡುತ್ತಿರಲು-ಮುಂದೆ ಸ್ವಲ್ಪ ಹೊತ್ತಿನಲ್ಲಿಯೇ ಆ ಮಹಮ್ಮದೀಯನು ದತ್ತಾತ್ರೇಯಸ್ವಾಮಿಯ ರೂಪಾಂತರ ಹೊಂದಿ ಏಕನಾಥನ ಕಣ್ಣಿಗೆ ಒಡನೆ ಅದೃಶ್ಯವಾದಂತಾದನು. ತಾನು ಆವರೆಗೆ ಹಾಲುಕರೆಯುತ್ತಿದ್ದ ಆ ನಾಯಿಯಾದರೋ ಕಾಮಧೇನುವೇ ಎಂದು ಏಕನಾಥನ ತಿಳಿವಳಿಕೆಗೆ ಗೋಚರವಾಯಿತು. ದತ್ತಾತ್ರೇಯ ಸ್ವಾಮಿಯು ಪ್ರಸನ್ನನಾಗಿ ಏಕನಾಥನ ತಲೆಯಮೇಲೆ ವರದಹಸ್ತವನ್ನಿಟ್ಟು ಆಶೀರ್ವದಿಸಿ-ನೀನು ಮುಂದೆ ಭಾಗವತ ಮಹಾಪುರಾಣದ ಹನ್ನೊಂದನೆಯ ಸ್ಕಂಧಕ್ಕೆ ವ್ಯಾಖ್ಯಾನಮಾಡಿ ಜಗದುದ್ಧಾರಮಾಡೆಂದು ಅನುಗ್ರಹಿಸಿದನು.

ಇದಾದ ತರುವಾಯ ಏಕನಾಥನಿಗೆ ಬೇಕೆಂದಾಗ ಅತ್ರಿಪುತ್ರನಾದ ಶ್ರೀ ದತ್ತಾತ್ರೇಯಮೂರ್ತಿಯ ದಿವ್ಯದರ್ಶನವುಂಟಾಗುತ್ತಿತ್ತು. ಆತನು ಗ್ರಂಥ ರಚನೆಗೆ ತೊಡಗಿದಾಗಲೂ ತನಗೆ ಶ್ರೀ ದತ್ತಾತ್ರೇಯನೇ ತನಗೆ ಬೆಂಬಲವಾಗಿದ್ದನೆಂದೂ, ಯಾವ ಬಗೆಯ ಅಪಾಯವೂ ಉಂಟಾಗದಂತೆ ಸಹಾಯಕನಾಗಿದ್ದು ರಕ್ಷಿಸಿದನೆಂದೂ, ಆತನೇ ಹೇಳಿದ್ದಾನೆ. ಈಚೆಗಿನ ಶ್ರೀ ವಿವೇಕಾನಂದರಿಗೂ ಹೇಗೆ ಎಲ್ಲಿ ಹೋದರಲ್ಲಿ, ಏನು ಮಾಡಿದರದರಲ್ಲಿ ತಮಗೆ ಕಾಳಿಯ ವರದಹಸ್ತವು ಬೆಂಬಲವಾಗಿದ್ದಂತೆ ಬೋಧವಾಗುತ್ತಿದ್ದಿತೋ ಹಾಗೆಯೇ, ಏಕನಾಥಸ್ವಾಮಿಗೂ ಶ್ರೀ ದತ್ತಾತ್ರೇಯಮೂರ್ತಿಯು

ತನ್ನ ಸರ್ವಕಾರ್ಯಗಳಲ್ಲೂ ಬೆಂಬಲವಾಗಿದ್ದಂತೆ ಬೋಧವಾಗುತ್ತಿದ್ದಿತಂತೆ! ಈ ಬಗೆಯ ಅನುಭವದ ಪರಿಚಯವಿಲ್ಲದ ನಮ್ಮ ನವೀನನಾಗರಿಕ ಮಹಾಶಯರು, ಇದನ್ನೂ ಒಂದು ಬಗೆಯ ಹುಚ್ಚೆಂದು ಹೇಳಿಬಿಡಲು ಅಡ್ಡಿಯಿಲ್ಲ. ವಿಜ್ಞಾನಶಾಸ್ತ್ರದ ಪರಿಚಯವು ಅಗಾಧವೆಂಬಂತೆ ಬೆಳೆದು ಬಂದಿದ್ದರೂ ಸಹ ಅದು ಇನ್ನೂ ಪಾಂಚಭೌತಿಕ ವಿಚಾರವನ್ನೇ ಸಂಪೂರ್ಣವಾಗಿ ತಿಳಿದುಕೊಳ್ಳಲು ಶಕ್ತವಾಗಿಲ್ಲ. ಹಾಗಿರುವಲ್ಲಿ ಪಾರಲೌಕಿಕವಾದ ತತ್ವಶಾಸ್ತ್ರದಲ್ಲಿ ಮಹೌನ್ನತ್ಯಸ್ಥಿತಿಗೇರಿದ ಮಹರ್ಷಿಯರ ಮತ್ತು ಸಾಧುಸಂತರ ದಿವ್ಯಾನುಭವಗಳನ್ನು ಈ ವೈಜ್ಞಾನಿಕರು ಅಳೆಯುವುದೆಂದರೆ ಅದು ಕೇವಲ ಹಾಸ್ಯಾಸ್ಪದ ವಿಚಾರವಲ್ಲವೆ ?

ಏಕನಾಥಸ್ವಾಮಿಯು ಹೀಗೆ ಕೃತಕೃತ್ಯನಾದ ತರುವಾಯ, ಮುಂದೆ ತನ್ನ ಸ್ವಗ್ರಾಮಕ್ಕಾದರೂ ಹೊರಡಬಹುದಿತ್ತು, ಅಥವ ತನಗೆ ಇಷ್ಟಬಂದ ಮತ್ತಾವ ಸ್ಥಳಕ್ಕಾದರೂ ಹೋಗಬಹುದಾಗಿತ್ತು. ಆದರೆ ಆತನು ಹಾಗೆ ಯಾವ ಬಗೆಯ ಚಾಂಚಲ್ಯಕ್ಕೂ ಮನಸ್ಸಿನಲ್ಲಿ ಸ್ಥಳಕೊಡದೆ, ಎಂದಿನಂತೆ ಸಂತೋಷದಿಂದಲೂ ವಿನಯವಿಧೇಯತೆಗಳಿಂದಲೂ ತನ್ನ ಗುರುವನ್ನು ಸೇವೆ ಮಾಡಿಕೊಂಡು ಇದ್ದುಬಿಟ್ಟನು. ಇದನ್ನು ಕಂಡು ಜನಾರ್ದನ ಸ್ವಾಮಿಯು - 'ಏಕನಾಥಾ, ನೀನಿನ್ನು ಪ್ರಬುದ್ಧನಾದೆ. ನಿನ್ನ ವಿದ್ಯಾಭ್ಯಾಸವೂ, ತಪಸ್ಯವೂ ಮುಗಿದಿರುವಾಗ ಇನ್ನು ನೀನು ಹೊರಟು ತೀರ್ಥಕ್ಷೇತ್ರಾದಿಗಳನ್ನು ಸಂದರ್ಶಿಸಿ, ಲೋಕಾನುಭವವನ್ನು ಸಂಪಾದಿಸಿಕೊಳ್ಳಬೇಕಾದುದು ಯುಕ್ತ' ಎಂದು ಹೇಳಿದನು. ಆದರೆ ಏಕನಾಥನು - 'ಪ್ರಭೋ, ನಾನೀಗ ಸೇವಿಸುತ್ತಿರುವ ತಮ್ಮ ಪೂಜ್ಯಪಾದಗಳಿಗಿಂತಲೂ ಇನ್ನು ಶ್ರೇಷ್ಠವೆನ್ನಿಸುವ ತೀರ್ಥ ಕ್ಷೇತ್ರಗಳು ನನಗೆ ಮತ್ತೆಲ್ಲಿ ದೊರೆಯುವುವು !' ಎಂದು ನುಡಿದು ಎಂದಿನಂತೆ ಗುರುಸೇವಾತತ್ಪರನಾಗಿಯೇ ಇದ್ದುಬಿಟ್ಟನು. ಆಗ ಜನಾರ್ದನಸ್ವಾಮಿಯು ತಾನೂ ಆತನೊಡನೆ ಹೊರಡುವುದಾಗಿ ಭರವಸೆಕೊಡಲು, ಗುರುಶಿಷ್ಯರಿಬ್ಬರೂ, ದೌಲತಾಬಾದಿನಿಂದ ಹೊರಟು ನಾಸಿಕಪಟ್ಟಣದ ಬಳಿಯಿರುವ ಪಂಚವಟೀ ಕ್ಷೇತ್ರವನ್ನು ಸೇರಿದರು. ಆ ಕಾಲದಲ್ಲಿ ನಾಸಿಕವು ಸದಾಚಾರಶೀಲರ ಮುಖ್ಯಸ್ಥಾನವಾಗಿ ಅಲ್ಲಿ ಅನೇಕಮಂದಿ ಪಂಡಿತರೂ ಸಾಧುಶ್ರೇಷ್ಠರೂ ವಾಸಿಸಿದ್ದರು. ಪಂಚವಟಿಯಿಂದ ಮುಂದೆ ತ್ರ್ಯಂಬ

ಕೇಶ್ವರವೆಂಬ ಸ್ಥಳಕ್ಕೆ ಪ್ರಯಾಣಮಾಡಿದರು. ತ್ರ್ಯಂಬಕೇಶ್ವರವು ಸಾಮಾನ್ಯ ಸ್ಥಳವಲ್ಲ. ಭಾರತದೇಶದಲ್ಲಿ ಸ್ವಯಂವ್ಯಕ್ತ ಶಿವಲಿಂಗ ಕ್ಷೇತ್ರಗಳೆಂದು ಹೆಸರು ಪಡೆದಿರುವ ಹನ್ನೆರಡು ಸ್ಥಳಗಳಲ್ಲಿ ಇದೊಂದು ಪ್ರಸಿದ್ಧವಾಗಿದೆ. ಆ ಸ್ಥಳದಲ್ಲೇ ಧ್ಯಾನೇಶ್ವರ ಸಾಧುವರ್ಯನ ಗುರುವಾದ ಶ್ರೀ ನಿವೃತ್ತಿದೇವನು ಆತ್ಮಸಿದ್ಧಿಯನ್ನು ಹೊಂದಿದನೆಂದು ತಿಳಿದು ಜನಾರ್ದನ ಸ್ವಾಮಿಯೂ ಏಕನಾಥನೂ ಆ ಸಿದ್ಧಸ್ಥಳದಲ್ಲಿ ಕೆಲವು ದಿನಗಳವರೆಗೆ ವಾಸವಾಗಿದ್ದರು. ತರುವಾಯ ಜನಾರ್ದನಸ್ವಾಮಿಯು ತನ್ನ ಶಿಷ್ಯನನ್ನು ಕುರಿತು- 'ಇನ್ನು ನಾನು ದೌಲತಾಬಾದಿಗೆ ಹೋಗುತ್ತೇನೆ. ನೀನಿನ್ನು ತೀರ್ಥಯಾತ್ರೆಗೆ ಹೊರಡು. ಏಕಾಂಗಿಯೆಂದು ಚಿಂತಿಸಬೇಡ. ನಾನು ಯಾವಾಗಲೂ ನಿನ್ನೊಂದಿಗೇ ಇರುವೆನೆಂದು ಭಾವಿಸಿರು. ಮಾರ್ಗದಲ್ಲಿ ನಿನಗೆ ಹಲವು ಬಗೆಯ ಜನರ ಬಳಕೆಯುಂಟಾಗುವುದು. ಅವರಲ್ಲಿ ಧನಿಕರೂ ದರಿದ್ರರೂ, ಉತ್ತಮರೂ ನೀಚರೂ ಎಲ್ಲರ ಸಹವಾಸವೂ ಆಗುವುದು. ಆದರೆ ಎಂತಹ ಸಂದರ್ಭವೊದಗಿದರೂ, ನೀನು ನಿನ್ನ ತಪಸ್ಸಾಮರ್ಥ್ಯವನ್ನು ಮಾತ್ರ ವ್ಯಯ ಮಾಡದಂತೆ ಜಾಗ್ರತನಾಗಿರು' ಎಂದು ನುಡಿದನು.

ತರುವಾಯ ಏಕನಾಥನು ಗುರ್ವಾಜ್ಞೆಯನ್ನು ಅನುಸರಿಸಿ ಉತ್ತರ ಭಾರತದ ಸಕಲ ಪುಣ್ಯಕ್ಷೇತ್ರಗಳನ್ನೂ ಒಂದಾದಮೇಲೊಂದರಂತೆ ಸಂದರ್ಶಿಸಿದನು. ಈ ತೀರ್ಥಯಾತ್ರೆಯು ಆತನ ಜೀವಿತದಮೇಲೆ ವಿಶೇಷ ಪರಿಣಾಮವನ್ನುಂಟುಮಾಡಿತು. ಹೋದಹೋದೆಡೆಯಲ್ಲೆಲ್ಲ ಮಹಮ್ಮದೀಯರಿಂದ ನಡೆದ ಧಾಳಿಯು ಆತನ ಮನಸ್ಸಿನಲ್ಲಿ ವಿಶೇಷ ಮರುಕವನ್ನುಂಟು ಮಾಡಿತು. ಆತನ ಅನುಭವವನ್ನು ವಿಶೇಷ ರೀತಿಯಿಂದ ಹೆಚ್ಚಿಸಿತು. ಮತ-ಧರ್ಮಗಳ ವಿಚಾರದಲ್ಲಿ ಆತನಲ್ಲಿ ವಿಶೇಷ ಶ್ರದ್ಧಾಭಕ್ತಿಗಳನ್ನು ಉಂಟುಮಾಡಿತು. ಧಾರ್ಮಿಕ ಪುನರುದ್ಧಾರದಿಂದಲ್ಲದೆ, ದೇಶದ ದುರವಸ್ಥೆಯು ನೀಗಲು ಬೇರೆ ಮಾರ್ಗವೇ ಇಲ್ಲವೆಂಬುದು ಆತನ ಮನಸ್ಸಿನಲ್ಲಿ ಬೇರೂರಿತು. ಹೀಗೆ ಬಹುತಿಂಗಳಕಾಲ ದೇಶಸಂಚಾರಮಾಡಿ ವಿವಿಧ ಅನುಭವಗಳನ್ನು ಪಡೆದು, ಆತನು ಕೊನೆಗೆ ತನ್ನ ಜನ್ಮಸ್ಥಳವಾದ ಪೈಠಣಕ್ಕೆ ಹಿಂದಿರುಗಿದನು. ಜನಾರ್ದನಸ್ವಾಮಿಯು, ಮುಂದೆ ಗೃಹಸ್ಥಧರ್ಮ ಸ್ವೀಕಾರ ಮಾಡೆಂದು ಕಂಠೋಕ್ತವಾಗಿ ಆಜ್ಞಾಪಿಸಿದ್ದನಾದರೂ ಏಕನಾಥನ ಮನಸ್ಸು

ಇನ್ನೂ ದೇಶಸಂಚಾರವನ್ನೇ ಅಪೇಕ್ಷಿಸುತ್ತಿತ್ತು. ಆದುದರಿಂದಲೇ ಊರಿಗೆ ಬಂದೊಡನೇ ನೇರವಾಗಿ ಮನೆಗೆ ಹೋಗದೆ, ತನಗೆ ದೈವಾಜ್ಞೆಯಾಗಿದ್ದ ಶಿವದೇವಾಲಯವನ್ನು ಸೇರಿ, ತನ್ನ ಮನಸಾರೆ ಸ್ವಾಮಿಯನ್ನು ಸ್ತೋತ್ರಮಾಡಿದನು. ಆ ದಿನ ಸಾಯಂಕಾಲ ಎಂದಿನಂತೆ ಭಿಕ್ಷೆಗೆಂದು ಗ್ರಾಮದಲ್ಲಿ ಹೊರಟಾಗ್ಗೆ, ಅವನನ್ನು ಯಾರೊಬ್ಬರೂ ಗುರುತಿಸಲು ಶಕ್ತರಾಗಲಿಲ್ಲ ಏಕನಾಥನು, ವಯಸ್ಸು ಆಕೃತಿ ರೂಪ ಧ್ವನಿ ಮುಂತಾದ ಎಲ್ಲ ವಿಚಾರಗಳಲ್ಲೂ ವ್ಯತ್ಯಾಸಹೊಂದಿದ್ದುದರಿಂದ ಅವನೊಡನೆ ಉಂಡು ಆಡಿದ ಜ[illegible]ತರಿಗೆ ಸಹ ಆತನ ಗುರ್ತು ಸಿಕ್ಕಲಿಲ್ಲ. ಆದರೆ, ಆವರಿದ್ದ ವ[illegible] ಸಮೀಪಕ್ಕೆ ಬಂದಾಗ್ಗೆ ಮಾತ್ರ ಆತನ ಅಜ್ಜನಿಗೆ ತಿಳಿದುಹೋಯಿತು. ಆ ವೃದ್ಧನು ಹನ್ನೆರಡು ವರ್ಷಗಳಿಂದಲೂ, ಆ ಊರಿಗೆ ಬರುತ್ತಿದ್ದ ಪ್ರತಿಯೊಬ್ಬ ಬೈರಾಗಿಯನ್ನೂ ಕಣ್ಣಿಟ್ಟುನೋಡಿ ಪರೀಕ್ಷಿಸುತ್ತ, ತನ್ನ ಮೊಮ್ಮಗನ ಪರಿಚಯವು ಸಿಕ್ಕುವುದೋ ಎಂದು, ಅತ್ಯಂತ ಕಾತರನಾಗಿ ಕಾದಿದ್ದನು. ಏಕನಾಥನು ಮನೆಯಬಳಿಗೆ ಬಂದು 'ಜೈ ಸೀತಾರಾಂ' ಎಂದು ಒಂದು ಬಾರಿ ಕೂಗಿದೊಡನೆಯೇ, ಆ ಮುದುಕನಿಗೆ ಆತನೇ ತನ್ನ ಮೊಮ್ಮಗ ಏಕನಾಥನೆಂದು ತಿಳಿದುಹೋಯಿತು. ಒಡನೆ ಹರ್ಷವಿಷಾದಗಳು ಉಕ್ಕಿಬರಲು,-ಕಣ್ಣುಗಳು ನೀರಿನಿಂದ ತುಂಬಿಕೊಳ್ಳಲು, ಆ ವೃದ್ಧನು ತನ್ನ ಎರಡು ಕೈಗಳಿಂದಲೂ ಆ ಯುವಕಸಾಧುವಿನ ಕೊರಳನ್ನು ಕಟ್ಟಿಕೊಂಡು, -'ಮಗೂ ಏಕನಾಥ, ನಮ್ಮನ್ನು ಪರದೇಶಿಗಳನ್ನಾಗಿಸಿ ಬಿಟ್ಟು, ಎಲ್ಲಿ ಹೋಗಿಬಿಟ್ಟೆಯಪ್ಪಾ! ಇನ್ನುಮೇಲೆ ನಮ್ಮನ್ನು ಬಿಟ್ಟು ಹೋಗಬೇಡ ಕಂಡೆಯಾ!' ಎಂದು ಅಂಗಲಾಚಿಕೊಂಡನು.

ಏಕನಾಥನು-'ತಾತಾ, ನೀನು ಹೇಳುವುದು ಸರಿಯೇ, ಆದರೆ ನಾನು, ನನ್ನ ತೀರ್ಥಯಾತ್ರೆಯ ಸಂಕಲ್ಪವನ್ನು ಪೂರ್ತಿಗೊಳಿಸದೆ ಹೇಗೆ ಇರಲಿ? ದಕ್ಷಿಣಭಾರತದ ಪುಣ್ಯಸ್ಥಳಗಳನ್ನೆಲ್ಲ ಸಂದರ್ಶಿಸಬೇಕಲ್ಲ-ಅದಕ್ಕೇನುಮಾಡಲಿ?' ಎನಲು ವೃದ್ಧನು—'ಮಗು, ನನಗಾದರೋ ವಯಸ್ಸು ಗಳಿತವಾಯಿತು. ನಾನು ಮೃತನಾಗುವವರೆಗೂ ಆಸರೆಯಾಗಿ ಮನೆಯಲ್ಲಿರು; ತರುವಾಯ ನಿನ್ನ ಮನಸ್ಸು ಬಂದಂತೆ ಮಾಡು. ಮಾತ್ರವಲ್ಲ ಇಗೋ ನೋಡು, ನಿನಗೊಂದು ಪತ್ರವಿದೆ' ಎಂದು ಒಂದು ಪತ್ರವನ್ನು ಆತನ ಕೈಗಿತ್ತನು.

ಅದನ್ನು ಕಂಡೊಡನೆಯೇ ಏಕನಾಥನು, ಆ ಹಸ್ತಲೇಖನವು ತನ್ನ ಗುರುವಾದ ಜನಾರ್ದನಸ್ವಾಮಿಯದೇ ಎಂದು ತಿಳಿದು, ಅದನ್ನು ತನ್ನ ತಲೆಯ ಮೇಲಿಟ್ಟುಕೊಂಡು, ಕಣ್ಣಿಗೊತ್ತಿಕೊಂಡು, ಬಿಚ್ಚಿ ಓದಿಕೊಂಡನು. ಅದರಲ್ಲಿ, ತಾನು ಪಾಣಿಗ್ರಹಣ ಮಾಡಿಕೊಂಡು ಮುಂದೆ ಗೃಹಸ್ಥನಾಗಿಯೇ ಇರಬೇಕೆಂದು ತನ್ನ ಗುರುವು ಬರೆದುಕಳುಹಿಸಿದ್ದ ಆಜ್ಞೆಯಿದ್ದಿತು. ಗುರುವಿನ ಆ ಆಜ್ಞೆಯನ್ನು ಕಂಡೊಡನೆಯೇ ಪುನಃ ಬೇರೊಂದು ಮಾತನಾಡದೆ ಮದುವೆಗೆ ಸಮ್ಮತಿಸಿದನು. ಉತ್ತಮವಂಶ ಸಂಜಾತೆಯಾದ ಒಬ್ಬ ಕನ್ಯೆಯೊಂದಿಗೆ ಆತನ ವಿವಾಹ ಮಹೋತ್ಸವವು ನಡೆದುಹೋಯಿತು. ವೃದ್ಧರಾದ ಅಜ್ಜ ಅಜ್ಜಿಯರ ಮನಸ್ಸಿಗೆ ವಿಶೇಷ ಸಂತುಷ್ಟಿಯುಂಟಾಗುವಂತೆ, ಏಕನಾಥನು ತನ್ನ ಪತ್ನಿಯೊಂದಿಗೆ ವಿಹಿತರೀತಿಯಿಂದ ಕುಟುಂಬಯಾತ್ರೆಯನ್ನು ಸಾಗಿಸಿಕೊಂಡಿದ್ದನು.



## ಅಧ್ಯಾಯ ೪ "ವಿಶ್ವಕುಟುಂಬಿತ್ವ"

ಗುರುಕುಲವಾಸವನ್ನು ತೀರಿಸಿಕೊಂಡು, ತನ್ನ ಇಪ್ಪತ್ತೈದನೆಯ ವಯಸ್ಸಿನಲ್ಲಿ ಪೈಠಣಕ್ಕೆ ಹಿಂದಿರುಗಿದ ಏಕನಾಥನು ತರುವಾಯ ತನ್ನ ಆದ್ಯಂತ ಜೀವಿತಕಾಲವನ್ನೂ ಅಲ್ಲೇ ಕಳೆದನು. ಪಾಠಪ್ರವಚನ, ಗ್ರಂಥರಚನೆ, ಉಪದೇಶ, ಕೀರ್ತನ ಧ್ಯಾನಾದಿಗಳು ಮುಂತಾದುವುಗಳಿಂದ ಆತನ ಕಾಲವು ಸದ್ವ್ಯಯವಾಗುವುದು. ಧ್ಯಾನೇಶ್ವರ ಮಹಾರಾಜನ ಕಾಲದಿಂದ ಬಂದಂತೆ, ತಾವು ಕಲಿತ ಭಗವತ್ತತ್ತ್ವವಿಚಾರವನ್ನು ಲೋಕೋದ್ಧಾರಕ್ಕಾಗಿ ಗ್ರಂಥರಚನೆ ಮಾಡತಕ್ಕ ಕಾರ್ಯವನ್ನು ಸಾಧುಸಂತರೆಲ್ಲರೂ ಅನುಸರಿಸುತ್ತಾ ಬಂದರು. ಏಕನಾಥನ ಮೊದಲನೆಯ ಗ್ರಂಥವೆಂದರೆ ಚತುಃಶ್ಲೋಕೀಭಾಗವತದ ವ್ಯಾಖ್ಯಾನ. ಜನಸಾಮಾನ್ಯದ ಉದ್ಧಾರಕ್ಕಾಗಿ ಆತನು ಹೇಳಿರುವ ಮಾರ್ಗವು ಸರ್ವೋತ್ಕೃಷ್ಟವಾದುದೆನ್ನಬಹುದು. - 'ಕಲಿಯುಗದಲ್ಲಿ ಯಜ್ಞ ದಾನ ತಪಸ್ಸುಗಳು ಅತಿ ಕಷ್ಟಸಾಧ್ಯಗಳಾದುದರಿಂದ ಅವುಗಳ ಮೂಲಕ ಮನುಷ್ಯನು ಸದ್ಗತಿಯನ್ನು ಸಂಪಾದಿಸಬೇಕೆಂದು ಪ್ರಯತ್ನಿಸು

ವುದು ವ್ಯರ್ಥವು. ಶ್ರೀ ಹರಿಕೀರ್ತನವೊಂದೇ ಸರ್ವಪಾಪ ನಿವಾರಕವಾಗಿ, ಸ್ತ್ರೀ ಶೂದ್ರ ಬಾಲಕ ಎಂಬ ಭೇದಗಳಿಲ್ಲದಂತೆ ಸದ್ಗತಿಪ್ರದವಾಗಿರುವುದು. ಭಕ್ತಿಯುತನಾಗಿ ಮಾಡುವ ಹರಿಕೀರ್ತನೆಯ ಆನಂದದಲ್ಲಿ ಮಗ್ನನಾಗುವವನಿಗೆ ಮುಕ್ತಿಯಲ್ಲಿರುವ ಹೆಚ್ಚುಗಾರಿಕೆಯೇನು! ಅದರಲ್ಲಿ ಯೋಗ-ತ್ಯಾಗಗಳಲ್ಲಿರುವ ಕಷ್ಟಕ್ಲೇಶಗಳಿಲ್ಲದೆ ಅದು ಸರ್ವಸುಲಭವಾದ, ಸರ್ವೋತ್ಕೃಷ್ಟವಾದ, ಮಹಾ ಸುಖದಾಯಕವಾದ ದಿವ್ಯ ಸಾಧನವಾಗಿರುವುದು, ಎಂದು ಆತನು ಕೀರ್ತನ ಪದ್ಧತಿಯ ಮಹತ್ವವನ್ನು ಹೊಗಳಿರುವನು.

ಮಧುರವೂ ಮನೋಹರವೂ ಆದ ಕಂಠಸ್ವರದಿಂದ ಹರಿಗುಣಗಾನ ಮಾಡುತ್ತಾ ಆತನು ಕೀರ್ತನೆಗೆ ಪ್ರಾರಂಭಿಸಿದನೆಂದರೆ, ಸಾವಿರಾರು ಜನಗಳು ನೆರೆದು ಶ್ರವಣಾನಂದ ಹೊಂದುವರು. ಆತನ ಶ್ರದ್ಧೆಯೂ, ಭಕ್ತಿಯೂ, ಪವಿತ್ರಜೀವನವೂ, ಶಾಸ್ತ್ರಾರ್ಥಗಳ ಸಂಪೂರ್ಣಜ್ಞಾನವೂ ಆತನನ್ನು ಧರ್ಮಬೋಧಕಕಾರ್ಯಕ್ಕೆ ಯೋಗ್ಯ ಆಚಾರ್ಯನನ್ನಾಗಿಸಿದುವು. ಕೀರ್ತನದಲ್ಲಿ ಒಂದೊಂದುವೇಳೆ, ಶ್ರೀರಾಮ ಶ್ರೀಕೃಷ್ಣ ಮುಂತಾದ ಭಗವದವತಾರಗಳ ಚರಿತ್ರೆಯನ್ನು ಹೇಳುವನು. ಮತ್ತೊಮ್ಮೆ ಸನ್ಯಾಸಿಪುತ್ರನಾದ ಶ್ರೀ ಜ್ಞಾನೇಶ್ವರ ಸಾಧುವಿನ ಚರಿತ್ರೆಯನ್ನು ಹೇಳುವನು. ಇನ್ನೊಮ್ಮೆ, ಕ್ಷಾಮಕಾಲದಲ್ಲಿ ಅನ್ನಾಹಾರಗಳಿಲ್ಲದೆ ಪಡುತ್ತಿದ್ದ ಜನಗಳ ಸಂಕಟವನ್ನು ನೋಡಲಾರದೆ, ತನ್ನ ಅಧಿಕಾರಕ್ಕೆ ಒಳಪಟ್ಟಿದ್ದ ಸರ್ಕಾರದ ಧಾನ್ಯ ಭಂಡಾರವನ್ನು ತೆರೆದು-ಬಡಜನಗಳೆಲ್ಲರೂ ತಮಗೆ ಬೇಕಾದಷ್ಟನ್ನು ತೆಗೆದುಕೊಂಡುಹೋಗಿರೆಂದು ಅವಕಾಶಕೊಟ್ಟ ದಾಮಾಜಿಯ ಚರಿತ್ರೆಯನ್ನುಗಲೀ ಕೀರ್ತನವಾಗಿ ಹೇಳಿ, ಶ್ರೋತೃಗಳನ್ನು ಭಕ್ತಿಶರಧಿಯಲ್ಲಿ ಓಲಾಡಿಸುವನು. ಜ್ಞಾನೇಶ್ವರ ನಾಮದೇವ ಮುಂತಾದ ಭಕ್ತಶ್ರೇಷ್ಠರು ಬೋಧಿಸಿದ 'ಭಾಗವತ ಧರ್ಮವನ್ನು ಮುಂದರಿಸಬೇಕೆಂಬುದೇ ಆತನ ಮುಖ್ಯೋದ್ದೇಶವಾಗಿದ್ದಿತು.

ಭಾಗವತಧರ್ಮ ಪಂಥವನ್ನು ಮುಂದರಿಸಬೇಕೆಂಬ ಮಹದುದ್ದೇಶದಿಂದಲೇ, ಶ್ರೀ ಜ್ಞಾನೇಶ್ವರನು ಶ್ರೀ ಕೃಷ್ಣಪರಮಾತ್ಮನಿಂದ ಉಪದಿಷ್ಟವಾದ ಶ್ರೀ ಭಗವದ್ಗೀತೆಯಮೇಲೂ, ಏಕನಾಥನು ಶ್ರೀಮದ್ಭಾಗವತದ ಹನ್ನೊಂದನೆಯ ಸ್ಕಂಧದಲ್ಲಿ ಉದ್ಧವನಿಗೆ ಉಪದೇಶಿಸಲ್ಪಟ್ಟ ಭಾಗವತ ಧರ್ಮದಮೇಲೂ ವಿಸ್ತಾರವಾದ ವ್ಯಾಖ್ಯಾನಗಳನ್ನು ಬರೆದು ಜಗದುದ್ಧಾರ

ಮಾಡಿದರು. ಈ ಇಬ್ಬರು ಮಹನೀಯರೂ ಮಾಡಿದ ಮತ್ತೊಂದು ಮಹತ್ಕಾರ್ಯವೆಂದರೆ, ಶಾಸ್ತ್ರಪುರಾಣಗಳಲ್ಲಾಗಲೀ, ಅಥವ ಆದಿಕಾಲದಿಂದಲೂ ದೇಶಚರಿತ್ರೆಯಲ್ಲಾಗಲೀ ಕಂಡುಬಾರದಿರುವ ಪಂಢರಪುರದ ವಿಠೋಬನಿಗೂ, ಶ್ರೀ ಗೀತಾಪ್ರವರ್ತಕನಾದ ಶ್ರೀಕೃಷ್ಣನಿಗೂ ಏನೂ ಭೇದವಿಲ್ಲವೆಂದು ನಿರ್ಧರಪಡಿಸಿ ಮಹಾರಾಷ್ಟ್ರದ ಅಶೇಷ ಜನಾಂಗವೂ ಆ ದೇವರನ್ನು ತಮ್ಮೆಲ್ಲರ ಸದ್ಗತಿಪ್ರಾಪ್ತಿಗೆ ಒಂದು ಕೇಂದ್ರವನ್ನಾಗಿ ಏರ್ಪಡಿಸಿಕೊಳ್ಳಲು ಅವಕಾಶ ಕಲ್ಪಿಸಿದರು. ಪಂಡಿತರ ಚರ್ಚಾಮೂಲವಾದ ಶಾಸ್ತ್ರವಿಚಾರಗಳಿಗೂ ಜನಸಮಾಜಕ್ಕೂ ಸಂಬಂಧವುಂಟಾಗಲಾರದುದರಿಂದ, ಕೇವಲ ಶಾಸ್ತ್ರವಾದಿಗಳಾದ ಪಂಡಿತರನ್ನು ಅನುಸರಿಸಿ ನಡೆಯುವುದು ಅಜ್ಞಸಮಾಜಕ್ಕೆ ಸಾಧ್ಯವಿಲ್ಲದ ವಿಚಾರವಾಗುವುದು. ಆದುದರಿಂದಲೇ ಈ ಮಹನೀಯರು ಮತಸುಧಾರಣಾ ಎಂದರೆ ಧಾರ್ಮಿಕ ಸುಧಾರಣಾಕಾರ್ಯವನ್ನು ಕೈಕೊಂಡ ಮಿಕ್ಕ ಆಚಾರ್ಯರುಗಳಂತೆ (ಶ್ರೀ ಶಂಕರಾಚಾರ್ಯ, ಶ್ರೀರಾಮಾನುಜಾಚಾರ್ಯ ಮತ್ತು ಶ್ರೀಮಧ್ವಾಚಾರ್ಯ) ಪ್ರಸ್ಥಾನತ್ರಯೀ ಎಂದು ಪ್ರಸಿದ್ಧವಾದ ಬ್ರಹ್ಮಸೂತ್ರಗಳು, ಉಪನಿಷತ್ತುಗಳು ಮತ್ತು ಗೀತೆ ಈ ಮೂರಕ್ಕೂ ವ್ಯಾಖ್ಯಾನಮಾಡುವ ಗೊಡವೆಗೆ ಹೋಗದೆ, ಕೇವಲ ಭಕ್ತಿಪಂಥವನ್ನು ಬಲಪಡಿಸಲು ಸಾಕಾದ, ಭಾಗವತ ಮತ್ತು ಭಗವದ್ಗೀತಾ, ಈ ಎರಡಕ್ಕೆ ಮಾತ್ರವೇ ಜನಸಾಮಾನ್ಯದ ನಿತ್ಯವ್ಯವಹಾರದ ಮಹಾರಾಷ್ಟ್ರಭಾಷೆಯಲ್ಲಿ ವ್ಯಾಖ್ಯಾನಮಾಡಿದರು.

ಭಕ್ತಿಮಾರ್ಗವನ್ನು ಮಾತ್ರವೇ ಅಷ್ಟುಮಟ್ಟಿಗೆ ಬಲಪಡಿಸಲು ಅವರಿಗೆ ತಕ್ಕಷ್ಟು ಕಾರಣಗಳೂ ಒದಗಿದುವು. ಭಕ್ತಿಮಾರ್ಗಾನುಯಾಯಿಯು ಜ್ಞಾನಮಾರ್ಗಾನುಯಾಯಿಯಂತೆ ವಿಶೇಷ ಮೇಧಾವಿಯೂ ಮನೋನಿಗ್ರಹಶಕ್ತಿಯುಳ್ಳವನೂ, ಜಿತೇಂದ್ರಿಯನೂ ಆಗಿರಬೇಕೆಂಬ ನಿರ್ಬಂಧವಿಲ್ಲ ಧ್ಯಾನ, ಸಾಧನೆ ಮುಂತಾದ ಮನಃಕ್ಲೇಶಗಳಿಗೆ ಅವನು ಒಳಗಾಗಬೇಕಾದ ಆವಶ್ಯಕವಿಲ್ಲ. ಯಜ್ಞಯಾಗಾದಿಗಳೆಂಬ ಹಲವು ಬಗೆಯ ಕರ್ಮಬಂಧಕಗಳಿಗೆ ಸಿಕ್ಕು ಮಾಡಲು ಸಾಧ್ಯವಿಲ್ಲದೆ ನರಳಬೇಕಾದ್ದಿಲ್ಲ. ಆತನ ಕಾರ್ಯವೆಂದರೆ, ಒಂದೇ ಮನಸ್ಸಿನಿಂದ ಶ್ರೀಹರಿಯ ನಾಮೋಚ್ಚಾರಣೆಮಾಡುವುದೂ, ಆತನನ್ನು ಷೋಡಶೋಪಚಾರಗಳಿಂದ ಅರ್ಚಿಸುವುದೂ ಇಷ್ಟುಮಾತ್ರವೇ !

ಈ ಮಾರ್ಗದಲ್ಲಿ ಮುಂದುವರಿದುಹೋದಂತೆಲ್ಲ, ಕರ್ಮ ಮತ್ತು ಜ್ಞಾನ ಮಾರ್ಗಗಳನ್ನು ಅನುಸರಿಸಿಕೊಂಡು ಹೋಗುವವರಿಗೆ ಯಾವ ಫಲವು ಪ್ರಾಪ್ತವಾಗುವುದೋ ಅದೇ ಫಲವೇ ಪ್ರಾಪ್ತವಾಗುವುದು. ಜ್ಞಾನಿಗೂ-ಭಕ್ತನಿಗೂ ವಿಶೇಷ ವ್ಯತ್ಯಾಸವುಂಟು. ಜ್ಞಾನಿಯ ಸ್ಥಿತಿಯು ಒಬ್ಬ ರಾಜನ ಬಳಿ ಇರುವ ಒಬ್ಬ ಪ್ರಮುಖ ಅಧಿಕಾರಿಯಂತಿದ್ದರೆ, ಭಕ್ತನ ಸ್ಥಿತಿಯು ರಾಜನ ಸ್ವಂತ ಮಗನಂತಿರುವುದು. ಮಗನು ಯಾರ ನಿರ್ಬಂಧವೂ ಇಲ್ಲದೆ ಬೇಕೆಂದಾಗ ರಾಜನಬಳಿಗೆ ನಡೆದು, ಅವನ ತೊಡೆಯಮೇಲೆ ಕುಳಿತು, ಬೇಕೆನ್ನಿಸಿದ ಪದಾರ್ಥವನ್ನು ಕೊಡೆಂದು ಕಾಡುವಷ್ಟು ಸಲಿಗೆಯನ್ನು ಪಡೆದಿರುವನು. ಆದರೆ ಜ್ಞಾನಿಯ ಸ್ಥಿತಿಯು ಅಂಥದಲ್ಲ. ಅಧಿಕಾರಿಯು ರಾಜನಿಗೆ ಎಷ್ಟು ಆಪ್ತನೂ ಪ್ರೀತಿಪಾತ್ರನೂ, ಆದರೂ ಅವನ ಮಗನಂತೆ ತೊಡೆಯಮೇಲೆ ಕುಳಿತುಕೊಳ್ಳುವಷ್ಟು ಸ್ವಾತಂತ್ರ್ಯವನ್ನು ವಹಿಸಲಾರನು. ಆದುದರಿಂದ ಈ ಮಹನೀಯರು, ಜ್ಞಾನಮಾರ್ಗವನ್ನು ಘಟಪಟಗಳೆಂದು ಬಡಿದಾಡಲಿಚ್ಛೆಯುಳ್ಳ ಮೇಧಾವಿಗಳ ಪಾಲಿಗೂ, ಕರ್ಮಮಾರ್ಗವನ್ನು ದರ್ಭೆ, ಎಳ್ಳು-ನೀರು, ಚರುಘೃತಗಳಲ್ಲಿ ಆಸಕ್ತಿಯುಳ್ಳವರ ಪಾಲಿಗೂ ಬಿಟ್ಟುಕೊಟ್ಟು, ತಿಳಿಮನಸ್ಸಿನ ಎಳೆ ಹೃದಯದ ಸಾಮಾನ್ಯ ಜನಸಮುದಾಯಕ್ಕೆಂದು ಈ ಭಕ್ತಿಪಂಥವನ್ನು ಬಲಪಡಿಸಿ ಬೆಳೆಸಿದರು.

ಈ ಮಹನೀಯರ ಈ ಬಗೆಯ ಸುಧಾರಣೆಯಲ್ಲಿರುವ ಅಮೌಲ್ಯ ನೀತಿಯೊಂದುಂಟು. ಇವರು ಜ್ಞಾನ ಮತ್ತು ಕರ್ಮಮಾರ್ಗಗಳನ್ನು ಬಿಟ್ಟು ಭಕ್ತಿಮಾರ್ಗವೊಂದನ್ನೇ ಶ್ರೇಷ್ಠವೆನ್ನಿಸಿದರಾದರೂ ಮಿಕ್ಕ ಎರಡರ ಆಚರಣೆಯನ್ನು ನಿರಾಕರಿಸಲಿಲ್ಲ. ಅವು ಅನಾವಶ್ಯಕವೆನ್ನಲಿಲ್ಲ. ಆದರೆ ಭಕ್ತಿಮಾರ್ಗವನ್ನು ಸರ್ವೋತ್ಕೃಷ್ಟಸ್ಥಿತಿಗೇರಿಸಿದ ಸಂದರ್ಭದಲ್ಲಿ ಮಿಕ್ಕ ಎಲ್ಲವೂ ಅದರ ಕಣ್ಣೆದುರಿಗೆ ಅಲ್ಪವೆಂದು ಕಂಡುಬರುವಂತಾದುವು. ಆದುದರಿಂದಲೇ, ಈ ಪಂಥವು ಯಾರ ದ್ವೇಷದೂಷಣೆಗಳಿಗೂ ವಶವಾಗದೆ ಎದ್ದು ಬೆಳೆಯಲು ಆರಂಭವಾಯಿತು.

ಹೀಗೆ ಭಕ್ತಿಪಂಥಕ್ಕೆ ಪ್ರತಿಯಾಗಿ ದ್ವೇಷಿಸುವ ಮತ್ತಾವ ಪಂಥವೂ ಏರ್ಪಡದಿದ್ದರೂ, ಕೆಲಮಂದಿ ವಿಜ್ಞಾನಶುಂಠರೂ, ಕರ್ಮಜಡರೂ, ಹೀಗೆ ಧಾರ್ಮಿಕ ಸುಧಾರಣಾಕಾರ್ಯದಲ್ಲಿ ಪ್ರವರ್ತಿಸಿದ್ದ ಧ್ಯಾನದೇವ ಏಕನಾಥ

ಮುಂತಾದವರನ್ನು ಮನಬಂದಂತೆ ದೂಷಿಸದಿರಲಿಲ್ಲ. ಹಣೆಯಲ್ಲೊಂದು ಗುರುತಿಲ್ಲ - ದೇಹದಮೇಲೊಂದು ನಾಮನಾಗಲೀ, ಒಂದು ಧಾರ್ಮಿಕ ಚಿನ್ಹೆಯಾಗಲೀ ಇಲ್ಲ. ಎಷ್ಟೋ ಕಾಲದಿಂದ ನಡೆದುಬಂದ ವ್ರತನಿಯಮಗಳ ಆಚರಣೆಯಿಲ್ಲ. ಮಂತ್ರೋಚ್ಚಾರಣೆಗೆ ಒಂದು ರಹಸ್ಯವಿಲ್ಲ. ಸುಮ್ಮನೆ ಹರಿ-ಹರಿ ಎಂದು ಗಂಟಲೊಣಗುವಂತೆ-ಬಾಯಿನೋವೆತ್ತುವಂತೆ ನುಡಿಯುತ್ತಿರುವುದರಿಂದ ಆಗುವ ಪುರುಷಾರ್ಥವೇನು? ಹೀಗೆ ಮಾಡಿ ಜನಗಳನ್ನೆಲ್ಲ ಮೋಸಮಾಡಲು ಹವಣಿಸಿದ್ದಾರೆ' ಎಂದು ಈ ಭಕ್ತಿ ಪಂಥದವರನ್ನು ಮನಬಂದಂತೆ ಆಕ್ಷೇಪಿಸುತ್ತಿದ್ದರು.

ಆದರೆ ಮತ - ಧರ್ಮಗಳ ವಿಷಯದಲ್ಲಿ ಕರ್ಮಮಾರ್ಗಾನುಯಾಯಿಗಳು ರಹಸ್ಯರಹಸ್ಯ - ಗುಟ್ಟುಗುಟ್ಟು ಎಂದು ಇಟ್ಟಿದ್ದ ವಿಚಾರಗಳನ್ನೆಲ್ಲ ಬಯಲಿಗಿಡುವುದೇ ಈ ನವೀನ ಪಂಥದವರ ಮುಖ್ಯೋದ್ದೇಶವಾಗಿದ್ದಿತು. 'ಪಾಪ ದುಃಖಸಂಕಟಗಳೆಂಬ ಪದಾರ್ಥವನ್ನೇ ಕೊಳ್ಳುವ ಮತ್ತು ಮಾರುವ ವ್ಯಾಪಾರವನ್ನಾಗಿ ನಡೆಸುತ್ತಿರುವ ಈ ಮಾನುಷ ಜನ್ಮದಲ್ಲಿ ಲೇಶಾಂಶವಾದರೂ ಸುಖವೆಂಬುದುಂಟೆ? ಕುದಿದ ನೀರಿಗೆ ಹೆಪ್ಪಿಟ್ಟರೆ ಅದೇನು ಮೊಸರಾದೀತೆ? ಕೆಂಡಗಳ ಹಾಸಿಗೆಯಮೇಲೆ ನಿಶ್ಚಿಂತೆಯಿಂದ ಮಲಗಿ ನಿದ್ರಿಸುವವನಿರುವನೆ? ಜನನವೆಂಬುದೇ ಮರಣದ ಮೊಟ್ಟಮೊದಲಸ್ಥಿತಿಯಾಗಿರುವಲ್ಲಿ ಅಂತಹ ಸಂದರ್ಭದಲ್ಲಿ - ಇಂತಹ ದುಃಖಮಯವಾದ ಪ್ರಪಂಚದಲ್ಲಿದ್ದೂ ಇನ್ನೂ ಸುಖಾಪೇಕ್ಷೆಯುಂಟೆ?' ಎಂದು ಧ್ಯಾನೇಶ್ವರನು ನುಡಿದನು. ಈ ಬಗೆಯಲ್ಲಿ ಜೀವಿತವೆಂಬುದು ವೇಳಾಪತ್ರಿಕೆಯ ವಿಷಯಗಳಂತೆ, ತಿನ್ನುವ ಕೂಡುವ ಮಲಗುವ ವಿಚಾರಗಳ ಪರಂಪರೆಯಿಂದ ಸಾಗತಕ್ಕದಲ್ಲ, ಗೊತ್ತಾದ ಒಂದು ಧ್ಯೇಯವಿಲ್ಲದ ಜೀವಿತದಿಂದ ಪ್ರಯೋಜನವೇನು, ಎಂದು ಮುಂತಾಗಿ ಪ್ರತಿಯೊಬ್ಬನೂ ವಿಮರ್ಶಕದೃಷ್ಟಿಯಿಂದ ತನ್ನ ನಿತ್ಯಜೀವನವನ್ನು ಗಮನಿಸುವಂತೆ ಈ ಪಂಥವು ಸಾರಿತು. ಈ ಸಂದೇಹವು ವ್ಯರ್ಥವಾಗಲಿಲ್ಲ. ಸಮಾಜದ ಮೂಲೆಮೂಲೆಗೂ ವ್ಯಾಪಿಸಿ ಎಲ್ಲರಲ್ಲೂ ನವಜೀವನವನ್ನು ಉದ್ಭವಗೊಳಿಸಿತು. ಅಜ್ಞಾನಾಂಧಕಾರದಲ್ಲಿ ಮುಳುಗಿದ್ದ ಸಮಾಜವು ಈ ಸಂದೇಶವನ್ನು ಕೇಳಿ ಕೊಡಹಿಕೊಂಡೆದ್ದಿತು. ಪಂಚಮಕುಲದಲ್ಲಿ ಸಹ ಚೋಕಮೇಳನೆಂಬ ಹೆಸರಿನ ಒಬ್ಬ ಮಹಾಭಕ್ತನು ಜನಿಸಿ

ಹರಿಭಕ್ತಿಯ ಮಹತ್ವವನ್ನೂ ಭಗವತ್ಕೃಪಾಸಂಪಾದನೆಗೆ ಜಾತಿ ಮತಗಳು ಕಾರಣವಲ್ಲವೆಂಬಂಶವನ್ನೂ ಸ್ಪಷ್ಟಗೊಳಿಸಿದನು.— 'ಒಬ್ಬ ಮನುಷ್ಯನಿಗೆ ಹೃದಯದಲ್ಲಿ ದೇವರ ಭಕ್ತಿಯೂ, ಮನಸ್ಸಿನಲ್ಲಿ ಸಮಸ್ತರಲ್ಲೂ ಪ್ರೇಮವೂ ಇದ್ದಲ್ಲಿ ಅವನ ಜಾತಿಯಾವುದೆಂದು ಕೇಳಲೇಬೇಡ - ದೇವರಿಗೆ ತನ್ನ ಮಕ್ಕಳಿಗೆ ತನ್ನ ವಿಷಯದಲ್ಲಿರುವ ಪ್ರೇಮವನ್ನು ಕುರಿತು ದೇವರು ಮೆಚ್ಚುವನೇ ಹೊರತು, ಅವನು ಉತ್ತಮಜಾತಿಯವನೇ ನೀಚಜಾತಿಯವನೇ ಎಂಬುದನ್ನು ನೋಡುವುದಿಲ್ಲ' ಎಂದಿರುವನು.

ಪ್ರಾರಂಭದ ಕೆಲವು ಕಾಲ, ಏಕನಾಥನು ಸಂಪ್ರದಾಯಸ್ಥರ ದ್ವೇಷ ದೂಷಣೆಗಳಿಗೆ ಗುರಿಯಾಗಬೇಕಾಯಿತಾದರೂ, ಆತನ ನಿಷ್ಕಲ್ಮಷಸ್ವಭಾವ, ನಿರ್ಮಲಚರಿತ್ರ, ಉದಾರಹೃದಯ, ಎಲ್ಲರಲ್ಲೂ ಸ್ನೇಹಪ್ರೇಮಗಳು ಮುಂತಾದುವನ್ನು ಕಂಡ ಪಂಡಿತರು ಆಚಾರ್ಯರು ಮುಂತಾದವರು ಆತನನ್ನು ವಿಶೇಷ ರೀತಿಯಿಂದ ಆದರಿಸಲಾರಂಭಿಸಿದರು. ಏಕನಾಥನು, ಶೂದ್ರರಿಗೂ ಪಂಚಮರಿಗೂ ವೇದಾದಿಗಳನ್ನು ದೊರಕಿಸದಂತೆ ನಿರ್ಬಂಧವನ್ನು ಕಲ್ಪಿಸಿಟ್ಟುದನ್ನು ಮೆಚ್ಚಲಿಲ್ಲ. ಸಕಲ ವೇದವೇದಾಂಗಗಳಿಗಿಂತಲೂ ಶ್ರೇಷ್ಠವೆನ್ನಿಸಿದುದು ಭಗವನ್ನಾಮ,-ಅಂತಹ ನಾಮವು ಎಲ್ಲರ ಪಾಲಿಗೂ ದೊರೆಯುವಂತೆ ಲಭ್ಯವಾಗಿರುವಾಗ ವೇದಾದಿಗಳನ್ನು ಕೆಲವರ ಉಪಯೋಗಕ್ಕೆಂದು ಮಾತ್ರ ಇಟ್ಟುಕೊಂಡು, ಮಿಕ್ಕವರನ್ನು ಬಹಿಷ್ಕರಿಸುವುದು ಯುಕ್ತವಲ್ಲವೆಂದು ಆತನು ಹೇಳುತ್ತಿದ್ದನು.

ಉತ್ತಮ ಬ್ರಾಹ್ಮಣವಂಶದಲ್ಲಿ ಜನಿಸಿ, ಗುರುಕುಲವಾಸಮಾಡಿ, ಗುರ್ವನುಗ್ರಹದಿಂದ ತತ್ವದ ಅಂತರಾರ್ಥವನ್ನೂ ದೇವರ ದಿವ್ಯದರ್ಶನವನ್ನೂ ಪಡೆದಿದ್ದ **ಏ**ಕನಾಥನು—

> ವಿದ್ಯಾವಿನಯ ಸಂಪನ್ನೇ ಬ್ರಾಹ್ಮಣೇ ಗವಿಹಸ್ತಿನಿ
> ಶುನಿಚೈವಶ್ವಪಾಕೇಚ ಪಂಡಿತಾಸ್ಸಮದರ್ಶಿನಃ

ಎಂಬ ಭಗವದ್ವಾಕ್ಯದಂತೆ, ಸಕಲ ವಸ್ತುಗಳಲ್ಲೂ ಅಂತರ್ಯಾಮಿಯಾಗಿ ಅಡಗಿರುವ ಪರಮಾತ್ಮನ ದಿವ್ಯರೂಪವನ್ನು ಸ್ಪಷ್ಟವಾಗಿ ಕಾಣುತ್ತಿದ್ದನಾದುದರಿಂದ ಆತನಿಗೆ ಯಾವುದೊಂದು ಪದಾರ್ಥದ ವಿಷಯದಲ್ಲೂ ಯಾವ

ಬಗೆಯ ಮೇಲುಕೀಳು ಭಾವಗಳೂ ಉಂಟಾಗುತ್ತಿರಲಿಲ್ಲ. ಮಹಾಜ್ಞಾನಿಯಾದ ಆತನು ಲೋಕಸಾಮಾನ್ಯರು ಎಣಿಸುವಂತಹ ಜಾತಿಮತ ಪದ್ಧತಿಗಳ ಸ್ಪೃಶ್ಯಾಸ್ಪೃಶ್ಯತೆಗಳ ನಿರ್ಬಂಧವನ್ನು ಮೀರಿದ್ದನು. ಒಂದಾನೊಂದು ದಿನ ಮಧ್ಯಾಹ್ನಕಾಲದಲ್ಲಿ ಆತನು ಗೋದಾವರೀ ನದಿಗೆ ಸ್ನಾನಕ್ಕೆಂದು ಹೋಗುತ್ತಿದ್ದ ಕಾಲದಲ್ಲಿ ಮಧ್ಯಮಾರ್ಗದಲ್ಲಿ ಮಹಾರ್ (ಪಂಚಮ) ಕುಲದ ಒಂದು ಮಗುವು ಬಿಸಿಯಾದ ಧೂಳಿನಲ್ಲಿ ಬಿದ್ದು ಉರುಳುತ್ತಿದ್ದುದನ್ನು ಕಂಡು ಕನಿಕರಪಟ್ಟು, ಒಡನೆ ಅದರ ಬಳಿಗೆ ಓಡಿ, ಅದನ್ನೆತ್ತಿಕೊಂಡು, ಅದರ ತಾಯಿಬಳಿಗೆ ಕರೆದೊಯ್ದು ಕೊಟ್ಟನಂತೆ. ಮತ್ತೊಂದು ವೇಳೆ, ಆಗತಾನೇ ಸೆರೆಮನೆಯಿಂದ ಬಿಡುಗಡೆಹೊಂದಿ, ರೋಗಬಾಧೆಯಿಂದಲೂ ಅತಿಶಯ ದೇಹದೌರ್ಬಲ್ಯದಿಂದಲೂ, ಸಾಯುವ ಸ್ಥಿತಿಯಲ್ಲಿದ್ದ ಒಬ್ಬ ಮಹಾರನನ್ನು ಆ ಸಾಧುವರೇಣ್ಯನು ಬಳಿಯಲ್ಲಿ ಕುಳಿತು, ಔಷಧಾದಿಗಳಿಂದ ಉಪಚರಿಸಿ ಗುಣಪಡಿಸಿದನಂತೆ! ಬೇರೊಂದು ಸಂದರ್ಭದಲ್ಲಿ ತನ್ನ ಮನೆಯಲ್ಲೊಂದು ಪಿತೃಶ್ರಾದ್ಧ ಬರಲು, ಬ್ರಾಹ್ಮಣಭೋಜನಕ್ಕೆಂದು ಪಕ್ವಾನ್ನಾದಿಗಳನ್ನು ಅಡಿಗೆ ಮಾಡಿದ್ದನಂತೆ! ಬ್ರಾಹ್ಮಣಭೋಜನಕ್ಕೆ ಮುಂಚಿತವಾಗಿಯೇ, ಆ ಮನೆಯ ಪಕ್ಕದಲ್ಲಿ ನಡೆದುಹೋಗುತ್ತಿದ್ದ ಕೆಲಮಂದಿ ಮಹಾರರು,—'ಆಹಾ ಎಂತಹ ಮಧುರವಾದ ವಾಸನೆ, ಆ ಪದಾರ್ಥಗಳು ಎಷ್ಟು ರುಚಿಯಾಗಿರಬಹುದು' ಎಂದುಕೊಂಡರಂತೆ! ಆ ಮಾತುಗಳು ಏಕನಾಥನ ಕಿವಿಗೆ ಬಿದ್ದೊಡನೇ ಏಕನಾಥನು, ಮುಂದೆ-ತನ್ನಿಂದ ಆಹ್ವಾನಿತರಾಗಿದ್ದ ಬ್ರಾಹ್ಮಣರಿಗೆ ಬರಬಹುದಾದ ಕೋಪ ಮತ್ತು ಅದರ ಪರಿಣಾಮ ಮುಂತಾದ ಒಂದನ್ನೂ ಲಕ್ಷ್ಯಕ್ಕೆ ತಾರದೆ, ಅವರನ್ನು ಕರೆದು ಮಾಡಿದ ಅಡಿಗೆಯನ್ನೆಲ್ಲಾ ಅವರಿಗೆ ಬಡಿಸಿ ಕಳುಹಿಸಿದನಂತೆ! ಆತನ ಮನಸ್ಸು ಸರ್ವಸಮತೆ ಎಂಬ ವಿಷಯದಲ್ಲಿ ಅಷ್ಟು ಉನ್ನತ ಅಂತಸ್ತಿಗೆ ಏರಿದ್ದಿತು!

ನಿಜವಾದ ಭಗವದ್ಭಕ್ತನು ಹೇಗಿರುವನು, ಎಂಬುದನ್ನು ಕುರಿತು ಆತನು ಹೀಗೆಂದು ಹೇಳಿದ್ದಾನೆ.—'ನಿಜಭಕ್ತನು ಲೋಕದಲ್ಲಿರುವ ಪ್ರತಿಯೊಂದು ಪದಾರ್ಥವನ್ನೂ ಭಗವದ್ರೂಪವೆಂಬ ಭಾವನೆಯಿಂದಲೇ ನೋಡುತ್ತಾನೆ. ಕರ್ಮಾಚರಣೆಯಿಲ್ಲದವನ ಮುಖದರ್ಶನವು ನಿಷಿದ್ಧವೆಂದು ವೇದಗಳು ಹೇಳುವುವಾದರೂ, ಅದು ಪ್ರಾರಂಭದ ಕೆಲವು ತರಗತಿಗಳವರಿಗೆ

ಮಾತ್ರವಲ್ಲದೆ, ಸರ್ವಕಾಲ ಸರ್ವಾವಸ್ಥೆಗಳಿಗೂ ಅಲ್ಲ. ಕತ್ತಲಿರುವಲ್ಲಿ ಮಾತ್ರ ದೀಪದ ಆವಶ್ಯಕತೆಯುಂಟು. ಆದರೆ ಭಗವತ್ಸಂಬಂಧವಾದ ದಿವ್ಯಜ್ಞಾನ ಸೂರ್ಯನು ಪ್ರಜ್ವಲಿಸುತ್ತಿರುವಾಗ ಇನ್ನು ವೇದಗಳೆಂಬ ಬಡ ದೀಪದ ಸಹಾಯವನ್ನು ಕೋರಲೇಕೆ? ಸಕಲಶಾಸ್ತ್ರ ಪಾರಂಗತನಾದ ಬ್ರಾಹ್ಮಣನಲ್ಲಿ ಹೇಗೆ ಪರಮಾತ್ಮನು ಆಪಾದಮಸ್ತಕಪೂರ್ಣನಾಗಿರುತ್ತಾನೋ ಹಾಗೆಯೇ ಒಬ್ಬ ಹೀನಾತಿಹೀನ ವ್ಯಕ್ತಿಯಲ್ಲಿಯೂ ಪರಮಾತ್ಮನ ಸಾನ್ನಿಧ್ಯವಿದೆಯೆಂದು ಯಾವನು ತಿಳಿಯುವನೋ ಅವನೇ ಭಕ್ತನು. ಸೂರ್ಯನಲ್ಲಿರುವ ಮತ್ತು ಮಿಣುಕು ಹುಳುವಿನಲ್ಲಿರುವ ಚೈತನ್ಯದ ಪ್ರಮಾಣದಲ್ಲಿ ವ್ಯತ್ಯಾಸವಲ್ಲದೆ ವಸ್ತುತತ್ತ್ವವೊಂದೇ! ಇರುವೆಯಿಂದ ಬ್ರಹ್ಮಪರ್ಯಂತವಾಗಿ ಕಣ್ಣಿಗೆ ಕಾಣುವ ಸಮಸ್ತ ವಸ್ತುಗಳೂ ಆ ಪರಮಪುರುಷನ ಪ್ರತಿಮೆಗಳೆಂದೇ ತಿಳಿಯಬೇಕು. ಭಕ್ತನು ಪರರ ವಿಷಯದಲ್ಲಿ ಹೇಗೆ ನಡೆಯಬೇಕೆಂಬಿರೋ! ಒಂದು ಮರವು ತನಗೆ ನೀರಹಾಕಿ ಬೆಳೆಸಿದವನಿಗೆ ಹೇಗೆ ನೆರಳನ್ನೂ ಪುಷ್ಪಫಲಗಳನ್ನೂ ಕೊಡುವುದೋ ಹಾಗೆಯೇ ತನ್ನನ್ನು ಕಡಿದುರುಳಿಸಲಿಕ್ಕೆ ಬರುವವನಿಗೂ ಪಕ್ಷಪಾತವಿಲ್ಲದೆ ನೆರಳನ್ನೂ ಪುಷ್ಪಫಲಗಳನ್ನೂ ಕೊಡುವುದು ಭಕ್ತನಾದವನು ಸರ್ವರಲ್ಲಿಯೂ ಈ ಬಗೆಯ ಸಮತೆಯನ್ನೂ ಅಜಾತಶತ್ರುತ್ವವನ್ನೂ ಇಟ್ಟಿರಬೇಕು.'

ಈ ಬಗೆಯ ಅನನ್ಯಭಕ್ತಿಯೊಂದಿಗೆ ಆತನಲ್ಲಿ ಅನನ್ಯ ಸಾಧಾರಣವಾದ ಶಾಂತತೆಯೂ ಮನೆಮಾಡಿಕೊಂಡಿತ್ತು. ಆತನಂತೆಯೇ ವಿಠ್ಠಲಸ್ವಾಮಿಯ ಭಕ್ತರಾಗಿದ್ದ ಧ್ಯಾನೇಶ್ವರ ಮತ್ತು ತುಕಾರಾಮರಿಗಿಂತಲೂ ಈತನ ಕ್ಷಮಾಸ್ವಭಾವವು ಪ್ರಶಸಂನೀಯವಾದುದು. ಮನಸ್ಸನ್ನು ಉದ್ವೇಗಗೊಳಿಸುವಂತಹ ಎಂತಹ ಪರಿಸ್ಥಿತಿಯೊದಗಿದರೂ ಆತನ ಮನಶ್ಶಾಂತಿಯು ಲೇಶಮಾತ್ರವೂ ಚಲಿಸದೆ, ಬಲವಾದ ಬಿರುಗಾಳಿಗಾದರೂ ಚಲಿಸದ ವಿದ್ಯುದ್ದೀಪದಂತೆ ಪ್ರಕಾಶಮಾನವಾಗಿರುವುದು. ಒಂದಾನೊಂದು ಸಂದರ್ಭದಲ್ಲಿ ಇದರ ಪರೀಕ್ಷೆಯು ನಡೆಯಿತು. ಒಬ್ಬ ಮಹಮ್ಮದೀಯನು ಒಂದು ದಿನ ಆಕಸ್ಮಾತ್ತಾಗಿ ಗೋದಾವರಿಯಿಂದ ಸ್ನಾನಮಾಡಿಕೊಂಡು ತನ್ನ ಮಟ್ಟಿಗೆ ಮನೆಗೆ ಬರುತ್ತಿದ್ದ ಏಕನಾಥನಮೇಲೆ ಉಗುಳಿದನಂತೆ! ಆ ಮಹಮ್ಮದೀಯನನ್ನು ಏಕನಾಥನು, ಎಂದೂ ನೋಡಿಯಾಗಲೀ, ಅವನಿಗೆ ಯಾವುದೊಂದು ಬಗೆಯಿಂದ ಅಪಮಾನಗೊಳಿಸಿಯಾಗಲಿ ಇರಲಿಲ್ಲ. ಏಕ

ನಾಥನು ಮಹಾ ಅಪಮಾನಕರವಾದ ಈ ದುಷ್ಕೃತನಕ್ಕಾಗಿ ಲೇಶಮಾತ್ರವೂ ಕೋಪಿಸಿಕೊಳ್ಳದೆ, ಪುನಃ ಗೋದಾವರಿಗೆ ನಡೆದು ಸ್ನಾನಮಾಡಿಕೊಂಡು ಬಂದನು. ಆದರೆ ಆ ಮುಹಮ್ಮದೀಯನು ಆತನನ್ನು ಮುಂದಕ್ಕೆ ಹೋಗ ಬಿಡದೆ ಮತ್ತೊಮ್ಮೆ ಉಗುಳಿದನು. ಏಕನಾಥನಾದರೋ, ಪುನಃ ನದಿಗೆ ಹೋಗಿ ಸ್ನಾನಮಾಡಿಕೊಂಡು, ಮತ್ತೊಮ್ಮೆ ಅವನಿಂದ ಉಗುಳಿಸಿಕೊಳ್ಳ ಲಿಕ್ಕಾಗಿಯೇ ಆ ಮಾರ್ಗವಾಗಿ ಬಂದನು. ಹೀಗೆ ನಾಲ್ಕು ಬಾರಿಯಲ್ಲ-ಹತ್ತುಬಾರಿಯಲ್ಲ, ಐವತ್ತುಬಾರಿಯಲ್ಲ; ನೂರ ಎಂಟುಬಾರಿ, ಆ ಮುಹಮ್ಮದೀಯನು ಸ್ನಾನಮಾಡಿಕೊಂಡು ಬಂದಂತೆಲ್ಲ ಆತನಮೇಲೆ ಉಗುಳುವುದೂ, ಆತನು ಬಾಯಿಂದ ಏನೊಂದು ಮಾತನಾಡದೆ ಪುನಃ ಸ್ನಾನಕ್ಕೆ ನದಿಗೆ ನಡೆಯುವುದೂ ಹೀಗೆಯೇ ನಡೆಯಿತು. ಕೊನೆಯಲ್ಲಿ ಆ ಮುಸಲ್ಮಾನನಿಗೇ ವಿಶೇಷ ಪರಿತಾಪವೂ ನಾಚಿಕೆಯೂ ಉಂಟಾಗಲು, ಅವನು ಏಕನಾಥನಿಗೆ ದೀರ್ಘ ದಂಡ ನಮಸ್ಕಾರಮಾಡಿ, ತನ್ನನ್ನು ಕ್ಷಮಿಸಬೇಕೆಂದು ಬೇಡಿಕೊಂಡನು.

ಮತ್ತೊಮ್ಮೆ ಏಕನಾಥನ ಮನೆಗೆ ಕೆಲವರು ಕಳ್ಳರು ಪ್ರವೇಶಿಸಿ ಪಾತ್ರೆಪದಾರ್ಥಗಳನ್ನು ಅಪಹರಿಸಿಕೊಂಡು ಹೊರಡುತ್ತಿದ್ದರಂತೆ! ಅಷ್ಟರಲ್ಲಿ ಏಕನಾಥನು ದೃಷ್ಟಿಗೋಚರನಾಗಲು ಭಯಭೀತರಾಗಿ, ಅವುಗಳನ್ನೆಲ್ಲ ಬಿಟ್ಟುಹೋಗಲನುವಾದರು. ಆಗಲಾಕ್ಷಮಾನಿಧಿಯು ಅವರನ್ನು ಕರೆದು, ಅವರು ಕದ್ದುಕೊಂಡಿದ್ದ ಆ ಪದಾರ್ಥಗಳಲ್ಲಿ ಕೆಲವನ್ನಾದರೂ ಅವರು ತೆಗೆದುಕೊಂಡೇ ಹೋಗಬೇಕೆಂದು ನಿರ್ಬಂಧಪೂರ್ವಕವಾಗಿ ಅವರನ್ನು ಪ್ರಾರ್ಥಿಸಿಕೊಂಡುದಲ್ಲದೆ, ತನ್ನೊಂದಿಗೆ ಊಟಮಾಡಿಕೊಂಡು ಹೋಗಬೇಕೆಂದೂ ಬಲವಂತಗೊಳಿಸಿದನಂತೆ! ಸಮಾಜದಿಂದ ನೀತಿಬಾಹಿರಳೆಂದು ದೂಷಣೆಗೆ ಗುರಿಯಾಗಿದ್ದ ಒಬ್ಬ ಸ್ತ್ರೀಯು ತನ್ನನ್ನು ಉದ್ಧರಿಸಬೇಕೆಂದು ಪ್ರಾರ್ಥಿಸಲು, ಅವಳಿಗೆ ಮನಸ್ಸು ಪರಿವರ್ತನೆಯಾಗಿ, ಉತ್ತಮಳಾಗುವಂತೆ ಭಗವದನುಗ್ರಹವಾಗಲೆಂದು ಆಶೀರ್ವದಿಸಿದನು. ಆತನ ಈ ಬಗೆಯ ವಿಶ್ವಕುಟುಂಬಿತ್ವವೇ ಆತನಿಗೆ ಅನೇಕಮಂದಿ ಪೂರ್ವಾಚಾರ ಪರಾಯಣರಾದವರು, ಶತ್ರುಗಳಾಗುವಂತೆ ಮಾಡಿತೆನ್ನುವರು. ಆತನ ಆಚರಣೆಯು ಆಗಿನ ಕಾಲಕ್ಕೆ ವಿಶೇಷ ಸುಧಾರಣಾಪಥವನ್ನು ಹಿಡಿದಿತ್ತು ಎನ್ನಬಹುದಾದರೂ, ಇಂದಿನ ಸುಧಾರಣೆಗೂ ಅಂದಿನ ಸುಧಾರಣೆಗೂ ಅಜಗಜಾಂತರವಿರುವುದೆಂದರೆ ಅದರಲ್ಲಿ ಅತಿಶಯೋಕ್ತಿಯಿಲ್ಲ.

## ಅಧ್ಯಾಯ ೫ 'ಪರಂಧಾಮಕ್ಕೆ'

ಜೀವಿತಕ್ಕೆ ಗೊತ್ತಾದ ಒಂದು ಧ್ಯೇಯವನ್ನಿಟ್ಟುಕೊಂಡು ಅದರಂತೆ ತನ್ನ ಆಚರಣೆಯನ್ನೂ ಇಟ್ಟುಕೊಂಡಿರುವ ಮನುಷ್ಯನ ವರ್ಚಸ್ಸು ಸಮಾಜದಮೇಲೆ ಮೂಡುವುದೆಂಬುದರಲ್ಲಿ ಸಂಶಯವಿಲ್ಲ ಆದರೆ ಅಂತಹ ವ್ಯಕ್ತಿ ಶ್ರೇಷ್ಠನ ಸಂದೇಶವು ಚಿರಸ್ಥಾಯಿಯಾಗಿರಬೇಕಾಗಿದ್ದಲ್ಲಿ ಆತನು, ತನ್ನ ಸಿದ್ಧಾಂತವೇನೆಂಬುದನ್ನು ಕುರಿತು ಸ್ಥಾಪಿಸಲುಳ್ಳ - ಶಾಶ್ವತನಿಧಿ ಎನಿಸಬಲ್ಲ ಗ್ರಂಥರಚನೆ ಮಾಡಿದಲ್ಲದೆ ಅದು ಸಿದ್ಧಿಸಲಾರದು. ಆದ್ದರಿಂದ ನಮ್ಮಲ್ಲಿಯ ದ್ವೈತ ಅದ್ವೈತ ವಿಶಿಷ್ಟಾದ್ವೈತ ಮತಪ್ರವರ್ತಕರು ತಮ್ಮ ತಮ್ಮ ಸಿದ್ಧಾಂತಗಳನ್ನು ಸ್ಪಷ್ಟೋಕ್ತಿಗಳಿಂದ ಬೋಧಿಸಬಲ್ಲ ಶಿಲಾಲೇಖಗಳೋ ಎಂಬಂತಿರುವ ಅಮೌಲ್ಯ ಗ್ರಂಥರಚನೆ ಮಾಡಿ, ತಮ್ಮ ತಮ್ಮ ಸಿದ್ಧಾಂತಗಳಿಗೆ ಶಾಶ್ವತ ಜೀವಿತಗಳನ್ನು ಪ್ರಸಾದಿಸಿದ್ದಾರೆ. ಏಕನಾಥನು ಆತನ ಗುರುಕುಲವಾಸವನ್ನು ಬಿಟ್ಟು ದೌಲತಾಬಾದಿಗೆ ಹಿಂದಿರುಗುವ ಮುಂಚೆ, ಸ್ಫೂರ್ತಿಬಂದಂತಾಗಿ ಚತುಃಶ್ಲೋಕೀಭಾಗವತಕ್ಕೆ ಟೀಕೆಟಿಪ್ಪಣಿ ವ್ಯಾಖ್ಯಾನಗಳನ್ನು ಬರೆದಿದ್ದುದಲ್ಲದೆ, ಈಚೆಗೆ ಪೈಠಣದಲ್ಲಿ ವಾಸಿಸಿದ್ದ ಹದಿನೈದು ವರ್ಷಕಾಲದಲ್ಲಿ ಕೇವಲ ವ್ಯಾಖ್ಯಾನ, ವ್ಯಾಸಂಗ, ಹರಿಕೀರ್ತನೆ ಮುಂತಾದುವುಗಳಿಗಲ್ಲದೆ ಗ್ರಂಥರಚನೆಗೆ ಗಮನಕೊಡಲು ಅವಕಾಶವೇ ಆಗಿರಲಿಲ್ಲ. ಹೀಗಿರುವಲ್ಲಿ ಕೆಲಮಂದಿ ಶಿಷ್ಯರ ಪ್ರಾರ್ಥನೆಯಮೇಲೆ ಗ್ರಂಥರಚನೆ ಮಾಡಬೇಕೆಂಬ ಉದ್ದೇಶ ಹುಟ್ಟಲು, ಭಾಗವತ ಏಕಾದಶ ಸ್ಕಂಧಕ್ಕೆ ವ್ಯಾಖ್ಯಾನ ಬರೆಯಲಾರಂಭಿಸಿದನು. ಐದನೆಯ ಅಧ್ಯಾಯದ ವ್ಯಾಖ್ಯಾನವು ಮುಗಿವವೇಳೆಗೆ ಅವರ ಶಿಷ್ಯನೊಬ್ಬನ ಸೂಚನೆಯಂತೆ ಆ ಗ್ರಂಥವನ್ನು ಕಾಶೀನಗರಕ್ಕೆ ತೆಗೆದುಕೊಂಡುಹೋಗಿ ಅಲ್ಲಿಯ ಪಂಡಿತಮಂಡಲಿಯ ಅಭಿಪ್ರಾಯವನ್ನೂ ಸಮ್ಮತಿಯನ್ನೂ ಗಳಿಸಬೇಕೆಂಬ ಪ್ರಯತ್ನಮಾಡಿದನೆಂದು ತಿಳಿಯಬರುತ್ತೆ. ಆಗಿನ ಕಾಲದಲ್ಲಿ, ಕೇವಲ ಪ್ರಜಾಸಾಮಾನ್ಯದ ಮೆಚ್ಚುಗೆಯೇ ಗ್ರಂಥದ ಯೋಗ್ಯತೆಯನ್ನು ನಿರ್ಣಯಿಸುವಲ್ಲಿ ಸಾಕಾದ ಪ್ರಮಾಣವಾಗಿರಲಿಲ್ಲ. ಪಂಡಿತರ ಒಪ್ಪಿಗೆಯ ಮುದ್ರೆಬಿದ್ದಲ್ಲದೆ ಯಾವ ಗ್ರಂಥಕ್ಕೂ ಮಾನ್ಯತೆಯುಂಟಾಗುತ್ತಿರಲಿಲ್ಲ. ಆಗಿನ ಕಾಲದಲ್ಲಿ ಸಂಸ್ಕೃತ ಮತ್ತು ಮರಾಠಿ ಭಾಷೆಗಳ ವಿಷಯದಲ್ಲಿ ಪಂಡಿತರಲ್ಲೂ ಸಾಮಾನ್ಯರಲ್ಲೂ

ಇದ್ದ ಅಭಿಪ್ರಾಯವು, ಈಗ್ಗೆ ಸಂಸ್ಕೃತ ಕನ್ನಡ ಅಥವ ಮತ್ತಾವ ದೇಶ ಭಾಷೆಯ ವಿಷಯದಲ್ಲೂ ಸಾಧುವೆನ್ನಿಸುವಂತಿವೆ. ಆತನು ಆ ವಿಷಯದಲ್ಲಿ ಹೇಳಿದ ಅಮೌಲ್ಯ ವಾಕ್ಯಗಳಿವು—"ಸಂಸ್ಕೃತಗ್ರಂಥ ಲೇಖಕರು ಗಟ್ಟಿಗರೆನ್ನೋಣ; ಆದರೆ ಮರಾಠೀ ಗ್ರಂಥಕರ್ತರೂ ಅಷ್ಟೇ ಗಟ್ಟಿಗರೆನ್ನಬಾರ ದೇಕೆ? ಸಂಸ್ಕೃತ ಲೇಖಕರು ಲೋಕಕ್ಕೆ ಯಾವ ಸಂದೇಶವನ್ನಿತ್ತರೋ ಅದೇ ಸಂದೇಶವನ್ನೇ ತಮಗೆ ವಿಶಿಷ್ಟವೆನ್ನಿಸಿದ ಒಂದು ಮಾರ್ಗದಲ್ಲಿ ಅವರೂ ಕೊಡಲು ಪ್ರಯತ್ನಿಸಿದ್ದಾರಲ್ಲವೆ? ಸಂಸ್ಕೃತವೇನು ಪ್ರಾಚೀನ ಕಾಲದ್ದೆಂಬುದರಿಂದ ಅದನ್ನು ಗೌರವಿಸಬೇಕೇನು! ಏನು, ಸಂಸ್ಕೃತ ಮರಾಠಿಯೆಂಬೆರಡು ಗೋವುಗಳಲ್ಲಿ ಒಂದು ಹಾಲುಕೊಟ್ಟರೆ, ಮತ್ತೊಂದು ನೀರನ್ನು ಕೊಡುತ್ತದೆಯೇ? ಸಂಸ್ಕೃತದಲ್ಲಿ ಹೇಳಿದ ವಿಚಾರಗಳನ್ನೇ ಮತ್ತೊಂದು ಸಾಧನದಿಂದ ಹೇಳಿದ ಮಾತ್ರಕ್ಕೆ ಉಂಟಾದ ನಷ್ಟವೇನು? ಏನು ಸಂಸ್ಕೃತವು ದೇವತಾಭಾಷೆಯೆಂಬಿರಾ? ಹಾಗಾದರೆ ಮರಾಠಿಯೂ ದೇವತೆಗಳದಲ್ಲವೆ? ಹಾಗಲ್ಲದಿದ್ದರೆ, ಅದನ್ನೇನು ಕಳ್ಳಕಾಕರ ಮತ್ತು ದರೋಡೆಕೋರರ ಭಾಷೆಯೆನ್ನೋಣವೆ? ಮುಖ್ಯವೇನು, ಜನಾಂಗಕ್ಕೆ ಮತ ಬೋಧೆಯನ್ನು ಮಾಡುವುದು ಸಂಸ್ಕೃತವೇ ಮರಾಠಿಯೇ ಎಂಬ ಪ್ರಶ್ನೆ ಬೇಡ. - ಬೋಧನೆಯು ವಿಷಯವು ಒಂದೇ ಆಗಿದ್ದಮೇಲೆ ಯಾವ ಭಾಷೆ ಯಾದರೇನು?' ವಾಚಕಮಹಾಶಯರೇ, ನಮ್ಮ ಕಥಾನಾಯಕರು ಅಂದು ಮರಾಠಿಯ ವಿಷಯದಲ್ಲಿ ಹೇಳಿಕೊಂಡಿರುವ ಮಾತು, ಇಂದು ಕನ್ನಡಕ್ಕೂ ಸಂಬಂಧಿಸತಕ್ಕುದಾಗಿಲ್ಲವೆ?

ಸಾಧು ಏಕನಾಥನು ಮರಾಠಿಯ ಯೋಗ್ಯತೆಯನ್ನು ಅಷ್ಟು ಉನ್ನತ ಸ್ಥಿತಿಗೇರಿಸಿದನೆಂದು ಸಂಸ್ಕೃತವನ್ನು ಹೀನದೃಷ್ಟಿಯಿಂದ ನೋಡಲಿಲ್ಲ. ಆದರೆ ಪಂಡಿತಕುಲವನ್ನು ಮೇಲಿನ ಹೇಳಿಕೆಯಿಂದ ಮಾತ್ರವೇ ಶಾಂತ ಗೊಳಿಸಲು ಸಾಧ್ಯವಿರಲಿಲ್ಲ. ಆತನ ಕೀರ್ತಿಯು ಆತನಿಗಿಂತಲೂ ಮುಂಚೆ ಯೇ ಪ್ರಯಾಣಮಾಡಿತ್ತು. ಸಂಸ್ಕೃತ ಪಕ್ಷಪಾತೀ ಪಂಡಿತವರ್ಗವು, ಮುನ್ನೂರುಮಂದಿ ಅನುಯಾಯಿಗಳೊಂದಿಗೆ ದೊಣ್ಣೆ ಕಟ್ಟಿಗೆಗಳನ್ನು ಹಿಡಿದು ಏಕನಾಥನನ್ನು ಬೆದರಿಸಲೆತ್ನಿಸಿದರಂತೆ! ಆದರೆ, ಆತನಲ್ಲಿದ್ದ ಅನು ಪಮ ತೇಜಸ್ಸೊಂದು, ಅವರು ಆತನನ್ನು ಹಿಂಸಿಸಲೆಡೆಗೊಡದಂತೆ ತಡೆ ಯಲು - ಅವರು ಆತನನ್ನು ಹಿಂಸಿಸಲಾಗದಿದ್ದರೂ ವಿಶೇಷವಾಗಿ ದ್ವೇಷಿ

ಸುತ್ತ, ದೂಷಿಸುತ್ತ, ಆತನು ಓದಿದರೆ ಕೇಳಲೂ ಇಚ್ಛಿಸದೆ ನಿರಾಕರಿಸಿದ ರಂತೆ? ಅವರಲ್ಲಿ ಕೆಲವರಂತೂ ಆತನ ಮುಖದರ್ಶನಮಾಡಲೂ ಇಚ್ಛಿಸದೆ ಪರಧೆಯ ಹಿಂದೆ ಕುಳಿತು ಕೇಳಿದರಂತೆ! ಆದರೆ ಆತನ ವ್ಯಾಖ್ಯಾನವೈಖರಿಯೂ, ಅರ್ಥಸ್ವಾರಸ್ಯವೂ ಭಕ್ತ್ಯುದ್ರೇಕವನ್ನುಂಟುಮಾಡತಕ್ಕ ಭಗವದ್ಗುಣವರ್ಣನೆಯೂ ಅವರ ಮನಸ್ಸನ್ನು ಮೆಲ್ಲನೆ ತಿರುಗಿಸದಿರಲಿಲ್ಲ. ಕೊನೆಯಲ್ಲಿ ಅವರಲ್ಲೊಬ್ಬನು, ಅದನ್ನು ಗಂಗೆಯಲ್ಲೆಸೆದು, ಆಗಲೂ, ಅದು ಮುಳುಗದಿದ್ದಲ್ಲಿ, ಅದರಲ್ಲಿ ಸತ್ವಾಂಶವಿದೆಯೆಂದು ಸ್ವೀಕರಿಸಲಡ್ಡಿಯಿಲ್ಲ ಎಂದನಂತೆ! ಹಾಗೂ ಮಾಡಲಾಯಿತೆಂದೂ, ಮಾತಾ ಭಾಗೀರಥಿಯು ಅದನ್ನು ಮುಳುಗಗೊಡಲಿಲ್ಲವೆಂದೂ ಪ್ರಕಟವಾಗಿದೆ. ಇಷ್ಟಾದ ತರುವಾಯ ಮೊದಲು ಯಾರು ಏಕನಾಥನನ್ನೂ ಆತನ ವ್ಯಾಖ್ಯಾನವನ್ನೂ ದೂಷಿಸಿದ್ದರೋ ಅವರೇ ಅದನ್ನು ಹೊಗಳಲು ಮುಂದಾದರು. ಭಾಗವತ ಗ್ರಂಥವನ್ನು ಆನೆಯಮೇಲಿಟ್ಟು, ಕಾಶೀನಗರದ ರಾಜಬೀದಿಗಳಲ್ಲಿ ಮೆರೆವಣಿಗೆ ಮಾಡಿದರು. ಅದು ಏಕನಾಥನನ್ನಲ್ಲ- ಈವರೆಗೆ ಕಾಡುಜನರ ಭಾಷೆಯೋ ಎಂಬಂತೆ ನಿರಾಕರಿಸಲ್ಪಟ್ಟಿದ್ದ ಮರಾಠಿಯನ್ನು ಗೌರವಿಸಿದಂತಾಯಿತು. ಏಕನಾಥನು, ಪಂಡಿತರ ಪ್ರಾರ್ಥನಾನುಸಾರ ಮುಂದೆ ಎರಡು ಸಂವತ್ಸರಗಳ ಕಾಲ ಅಲ್ಲೇ ವಾಸಿಸಿದ್ದು, ಶ್ರೀ ರುಕ್ಮಿಣೀಸ್ವಯಂವರವೆಂಬ ಗ್ರಂಥರತ್ನವನ್ನೂ ರಚಿಸಿದನು. ರುಕ್ಮಿಣೀಸ್ವಯಂವರವು ೧೭೦೦ ಶ್ಲೋಕಗಳಿರುವ ಗ್ರಂಥ; ಭಾಗವತ ವ್ಯಾಖ್ಯಾನವು ೨೦೦೦೦ ಶ್ಲೋಕಗಳ ದೊಡ್ಡ ಗ್ರಂಥವಾಗಿವೆ.

ಏಕನಾಥಸ್ವಾಮಿಯ ಕಾಶೀನಗರವಾಸವು ಅಲ್ಲಿನ ಪಂಡಿತರ ಗರ್ವಖಂಡನೆಮಾಡಲು ದೊಡ್ಡ ಸಾಧನವಾಯಿತು. ಆತನ ಭಕ್ತಿಭಾವ, ನಮ್ರತೆ, ವಿನಯ, ಪರೋಪಕಾರಬುದ್ಧಿ, ನಿರಹಂಕಾರ, ಇವುಗಳೆದುರಿಗೆ ವಿದ್ಯಾವಂತರೆಂದು ಹೊಗಳಿಕೊಂಡ ತಮ್ಮ ನಾಸ್ತಿಕತೆ, ಅಲ್ಪಭಾವ, ಸ್ವಾರ್ಥತೆ, ಗರ್ವಾಂಧತೆ ಮುಂತಾದುವುಗಳು ತಮ್ಮನ್ನು ಎಷ್ಟುಮಟ್ಟಿಗೆ ಶೋಭಾಹೀನರನ್ನಾಗಿಸಿದುವೆಂಬುದು ಅವರ ಗಮನಕ್ಕೆ ಬಾರದಿರಲಿಲ್ಲ —ಏಕನಾಥಸ್ವಾಮಿಯು ಹೀಗೆ ಪಂಡಿತಮಂಡಲಿಯ ಮುಖ್ಯ ಸ್ಥಾನವಾದ ಕಾಶೀನಗರದಲ್ಲಿ ತನ್ನ ಗೌರವವನ್ನು ಪ್ರತಿಷ್ಠಿಸಿ ತರುವಾಯ ತನ್ನ ಸ್ವಂತ ಪ್ರಾಂತಕ್ಕೆ ಪ್ರಯಾಣ ಮಾಡಿ, ಹಿಂದಿನಿಂದ ತನ್ನ ಮನಸ್ಸಿನಲ್ಲಿದ್ದ ಜನಾಂಗಬೋಧೆ - ಸಾಧಾರಣೆ

ಮುಂತಾದ ಕಾರ್ಯಗಳನ್ನು ಹೆಚ್ಚು ವ್ಯವಸ್ಥೆಯಿಂದ ನಡೆಯಿಸಲುದ್ಯೋಗಿಸಿದನು. ಹಲವು ಸ್ಥಳಗಳಿಂದ ಅನೇಕರು ಆತನ ಅಮೃತಮಯ ಬೋಧನೆಗಳನ್ನು ಕೇಳಲು ಯಾತ್ರೆಗೋ ಎಂಬಂತೆ ಗುಂಪುಗುಂಪಾಗಿ ಬರತೊಡಗಿದರು. ಆತನೂ ಅನೇಕವೇಳೆ, ಬೇರೆಬೇರೆ ಸ್ಥಳಗಳಿಗೂ ಪ್ರಯಾಣಮಾಡಿ, ಬೋಧನಾಕಾರ್ಯವನ್ನು ಸಾಗಿಸುತ್ತಿದ್ದುದುಂಟು. ಈ ಸಂದರ್ಭದಲ್ಲೇ ಆತನು ಪಂಢರಾಪುರದ ಪಾಂಡುರಂಗಸ್ವಾಮಿಯ ಭಜನೆ ಆರಾಧನೆಗಳ ಮಹತ್ವವನ್ನು ಪ್ರಜಾವರ್ಗದಲ್ಲಿ ಹೆಚ್ಚಿಸಬೇಕೆಂದು ಯೋಚಿಸಿದನು. ಪಂಢರಾಪುರಕ್ಕೆ ಪ್ರಯಾಣಮಾಡಿ, ಅಲ್ಲಿ ಭಗವದ್ಭಕ್ತಿ ರಸಪೂರಿತವಾದ ಅಮೃತೋಪಮ ವಾಕ್ಯಸಮುದಾಯದಿಂದ ಕರ್ಣಾನಂದಕರವಾದ ಭಾಗವತ ಕಥೆಯೆಂಬ ಸುಧಾಪ್ರವಾಹವನ್ನು ಹರಿಸಲಾರಂಭಿಸಲು, ಆತನಲ್ಲಿ ಪ್ರಜಾಸಮುದಾಯವು ಹಿಂದಿನ ಧ್ಯಾನೇಶ್ವರ ಮಹಾರಾಜನಲ್ಲಿಟ್ಟಿದ್ದ ಭಕ್ತಿಗೌರವಗಳನ್ನಿಟ್ಟುಕೊಳ್ಳತೊಡಗಿದರು.

ಧ್ಯಾನೇಶ್ವರ ಮಹಾರಾಜನ ಕಾಲವಾದ ತರುವಾಯ ಮರಾಠಿಯು ಕಳೆಗುಂದತೊಡಗಿದ್ದು ಪ್ರಕೃತದಲ್ಲಿ ಆತನ ಗೀತಾವ್ಯಾಖ್ಯಾನದ ಗ್ರಂಥವು ಅನೇಕರಿಗೆ ಅರ್ಥವಾಗುತ್ತಲೇ ಇರಲಿಲ್ಲ. ಆದರೂ ಏಕನಾಥನು, ಮಹಾರಾಷ್ಟ್ರಭಾಷೆಯ ಹಿಂದಿನ ಆ ಗೌರವವನ್ನು ಕಾಪಾಡಲೋಸುಗ ಆ ಮಹನೀಯನ ಪ್ರೌಢಶೈಲಿಯನ್ನೇ ರಕ್ಷಿಸಲು ಸಂಕಲ್ಪಿಸಿ, ಹೊಸಪದ್ಧತಿಗಳನ್ನು ವಿಶೇಷ ಪ್ರಚಾರಕ್ಕೆ ತಾರದೆ ಮಾನಸಿಕ ಮಾಡಿದ್ದನು ಹೀಗೆ ಇರುತ್ತಿರಲು ಒಂದಾನೊಂದು ದಿನ ಧ್ಯಾನೇಶ್ವರಸಾಧುವು ಆತನ ಸ್ವಪ್ನದಲ್ಲಿ ಬಂದು ಆಳಂದಿಗೆ ಬಂದು ಹೋಗಬೇಕೆಂದು ಹೇಳಿದಂತಾಯಿತಂತೆ! ಒಡನೆ ಅಲ್ಲಿಗೆ ಪ್ರಯಾಣಮಾಡಲು, ಅಲ್ಲಿ ಧ್ಯಾನೇಶ್ವರ ಮಹಾರಾಜನ ನೆಲಮಾಳಿಗೆಯಲ್ಲಿನ ಸಮಾಧಿಯಲ್ಲಿ ಆತನಿಗೂ ಏಕನಾಥನಿಗೂ ಮೂರು ದಿನಗಳವರೆಗೆ ಮಾತುಕಥೆಗಳು ನಡೆದುವಂತೆ! ಏಕನಾಥನು ಪುರಾತನಗ್ರಂಥದ ಪ್ರತಿಯೊಂದನ್ನು ತಯಾರಿಸಿಕೊಂಡು ತಂದು, ಅದರ ಪ್ರಚಾರಕ್ಕೆಂದು ತನ್ನ ಶಿಷ್ಯರಲ್ಲಿ ಹಲವರನ್ನು ಮಹಾರಾಷ್ಟ್ರಪ್ರಾಂತದ ಮೂಲೆಮೂಲೆಗೂ ಕಳುಹಿಸಿ, ಮರಾಠಿಭಾಷೆಯ ಗೌರವವನ್ನು ಹೆಚ್ಚಿಸಿದನು. ಧ್ಯಾನೇಶ್ವರೀ ವ್ಯಾಖ್ಯಾನದ ಪ್ರಾಬಲ್ಯದಿಂದ ತನ್ನ ಗ್ರಂಥವು ಕಳೆಗುಂದುವುದೆಂಬುದನ್ನು ತಿಳಿದಿದ್ದರೂ,

ಈ ಮಹತ್ವದ ಕಾರ್ಯಮಾಡಿದುದು ಆತನ ಉದಾರ ಚರಿತ್ರೆಯನ್ನು ಸ್ಪಷ್ಟ ವಾಕ್ಯಗಳಿಂದ ಪ್ರದರ್ಶಿಸುತ್ತದೆ.

ಏಕನಾಥನ ಲೌಕಿಕ ಜೀವಿತವು ಸುಖಮಯವಾಗಿದ್ದಿತು. ಭಕ್ತ ತುಕಾರಾಮನ ಸುದಾಮದಾರಿದ್ರ್ಯವಾಗಲೀ, ಧ್ಯಾನೇಶ್ವರನಿಗೆ ಒದಗಿದ ಸಮಾಜ ಬಹಿಷ್ಕರಣದ ದುಃಖವಾಗಲೀ ಆತನನ್ನು ಎಂದೂ ಬಾಧಿಸಲಿಲ್ಲ. ಪಂಡಿತಮಂಡಲಿಯಿಂದ ಪ್ರಾರಂಭಕ್ಕೆ ಕೆಲ ದಿನಗಳವರೆಗೆ ಸ್ವಲ್ಪ ತೊಂದರೆ ಯುಂಟಾಯಿತಾದರೂ, ಆತನ ವಿಷಯದಲ್ಲಿದ್ದ ಜನಪ್ರೀತಿಯೂ, ಆತನ ನಿಸ್ವಾರ್ಥತೆ, ತ್ಯಾಗಬುದ್ಧಿ ಮುಂತಾದುವೂ ಸಕಲರ ಬಾಯನ್ನೂ ಮುಚ್ಚಿಸಿದುವು. ಜೀವಿತದಲ್ಲಿ ಪ್ರಾಪ್ತಿಸಿದ ಕಷ್ಟಸಂಕಟಗಳ ಪರ್ವತಗಳನ್ನೆಲ್ಲ ಆತನು ತನ್ನ ಅಗಾಧವಾದ ಕ್ಷಮಾಗುಣವೆಂಬ ವಜ್ರಾಯುಧದಿಂದ ಖಂಡಿಸಿ, ಸುಗಮಗೊಳಿಸಿಕೊಂಡನು. ಆತನಿಗೆ ತುಕಾರಾಮನಿಗೆ ದೊರೆತಿದ್ದಂತಲ್ಲದೆ, ಗುಣವಂತೆಯೂ ಅನುರೂಪಳೂ ಅನುಕೂಲಳೂ ಆದ ಸಾಧ್ವೀಮಣಿಯು ದೊರೆತು ಆತನ ಗೃಹಜೀವನವನ್ನು ಸುಖಮಯವನ್ನಾಗಿಸಿದ್ದಳು. ಉದ್ಧವನೆಂಬೊಬ್ಬ ಆಪ್ತಮಿತ್ರನ ಸಹವಾಸವೂ, ಯುಕ್ತವೆನ್ನಿಸುವಷ್ಟು ಧನ ಧಾನ್ಯ ಸಮೃದ್ಧಿಯೂ, ದಿವ್ಯ ಆರೋಗ್ಯಭಾಗ್ಯವೂ, ಆತನ ಇಹಜೀವಿತದ ವಿಷಯದಲ್ಲಿ ಯಾವನಿಗಾದರೂ ಅಸೂಯೆಯನ್ನು ಹುಟ್ಟಿಸುವಷ್ಟುಮಟ್ಟಿಗೆ ಸುಖಮಯವಾಗಿದ್ದುವು. ಇಷ್ಟು ಅನುಕೂಲತೆಗಳೊಡನೆ ಆತನ ಮನಸ್ಸೂ ಯೋಚನೆಯೂ ಸರ್ವದಾ ಸರ್ವೇಶ್ವರನ ಚರಣಕಮಲಗಳೆಡೆಯಲ್ಲೇ ಹೊಂದಿದ್ದು, ಹಸ್ತಗಳು ಭಗವತ್ಸೇವೆಯೆಂಬುದ್ದೇಶದಿಂದ ಪ್ರೇರಿತವಾಗಿ ಲೋಕ ಸೇವೆಯಲ್ಲಿ ತೊಡಗಿದ್ದು, ಹೀಗೆ ಆತನ ಪ್ರತಿಯೊಂದು ಕ್ಷಣವೂ ಸದ್ವೃತ್ತಿಯಲ್ಲೂ ಸತ್ಕಾಲಕ್ಷೇಪದಲ್ಲೂ ವ್ಯಯವಾಗುತ್ತಿದ್ದಿತು. ಆತನ ಮನೆಯು ಯಾವಾಗಲೂ, ಅತಿಥಿ ಅಭ್ಯಾಗತರಿಗೆ ತೆರೆದ ಬಾಗಿಲೋ ಎಂಬಂತೆ ಇರುವುದು. ಅನೇಕವೇಳೆ ಆತನು ಸಾಲಗಾರನಾದರೂ, ಭಕ್ತಾನುಕಂಪಿಯಾದ ಶ್ರೀ ವಿಠ್ಠಲನು ಆತನ ಸಾಲದ ಹೊರೆಯನ್ನೆಲ್ಲ ವಿವಿಧರೂಪಗಳಿಂದ ತಾನೇ ತೀರಿಸುತ್ತಿದ್ದನಂತೆ! ಭಕ್ತಾಭೀಷ್ಟಪ್ರದನಾದ ಶ್ರೀಹರಿಯು ತನ್ನ ಭಕ್ತನಾದ ಶ್ರೀ ಏಕನಾಥನ ಸೇವೆಗಾಗಿಯೋ ಎಂಬಂತೆ ಹನ್ನೆರಡು ವರ್ಷಕಾಲ ತನ್ನ ಸ್ವರ್ಗಧಾಮವನ್ನು ಬಿಟ್ಟು ಭೂಲೋಕಕ್ಕೆ ಬಂದಿದ್ದನೆಂದು ಆತನ ಸಮಕಾಲೀನರ ಹೇಳಿಕೆಯಿದೆ. ಅದೆಂತಾದರೂ ಇರಲಿ ಬಾಲ್ಯಾವಸ್ಥೆಯಿಂ

ದಲ್ಲೂ ದೇವರು, ಧರ್ಮಕಾರ್ಯಗಳು, ಸತ್ಕಾರ್ಯಾಚರಣೆ ಮುಂತಾದುವು ಗಳಲ್ಲೇ ಮಗ್ನವಾಗಿದ್ದ ಮನುಷ್ಯನು, ಜೀವಿತಕಾಲದಲ್ಲಿ ದೇವರೊಂದಿಗೇ ನಡೆದಾಡಿದನೆಂದರೆ ಅದರಲ್ಲಿ ಆಶ್ಚರ್ಯವೇನಿದೆ?

ಆದರೆ ಏಕನಾಥನ ಸುಖಜೀವನವೂ ಶಾಂತಮನಸ್ಕತೆಯೂ ಕೊನೆಯ ಭಾಗದಲ್ಲಿ ಆತನ ಮಗನಾದ ಹರಿಯೆಂಬುವನ ಮೂರ್ಖತಾಳಿಯಿಂದ ಸ್ವಲ್ಪ ಕಲಕಿಹೋಗಬೇಕಾಯಿತು. ಹರಿಯು ಯೌವನದ ಉದ್ಧಟತನದಿಂದ ತನ್ನ ತಂದೆಯು ದೇಶಭಾಷೆಯಲ್ಲಿ ಗ್ರಂಥರಚನೆಮಾಡಿ ಪೂಜ್ಯ ಸಂಸ್ಕೃತಭಾಷೆಯ ಗೌರವವನ್ನು ತಗ್ಗಿಸಿದನೆಂದು ದೂರಿದನು. ಸಾಮಾಜಿಕ ವಿಚಾರದಲ್ಲೂ ಸಹ, ಕೇವಲ ಆಚಾರಶೀಲ ಸ್ವಭಾವದ ಆ ಮಗನಿಗೆ, ಪಂಚಮನನ್ನೂ-ಬ್ರಾಹ್ಮಣನನ್ನೂ ಪಕ್ಷಪಾತವಿಲ್ಲದೆ ಒಂದೇ ಬಗೆಯ ಪ್ರೇಮಭಾವದಿಂದ ನೋಡುತ್ತಿದ್ದ ತನ್ನ ತಂದೆಯ ಸ್ವಭಾವವು ಸರಿಬೀಳಲಿಲ್ಲ. ಕೊನೆಗೆ ಮಗ ನಿಗೆ ತಂದೆಯ ಆಚರಣೆಗಳು ಬೇಸರಹುಟ್ಟಿ ಆತನು ಮನೆಯನ್ನು ಬಿಟ್ಟು ಕಾಶೀನಗರಕ್ಕೆ ಹೊರಟುಹೋದನು. ತಂದೆಯು ಅಲ್ಲಿಗೆ ಹೋಗಿ ಅವನನ್ನು ಉಚಿತವಾಕ್ಯಗಳಿಂದ ಸಮಾಧಾನಗೊಳಿಸಿ ಕರೆತಂದನು. ಮುಂದೆ ವೇದಾಂ ತವಿಚಾರ ಬೋಧನೆಯ ಕಾರ್ಯವನ್ನು ತನಗೆ ವಹಿಸಬೇಕೆಂದು ಪೀಡಿಸಿದ ಮಗನಿಗೆ ಅವನ ಇಷ್ಟದಂತೆಯೇ ತಂದೆಯು ವಹಿಸಿಕೊಟ್ಟನು ಆದರೇನು, ಆತನು ಉಪನ್ಯಾಸಕ್ಕೆ ಪ್ರಾರಂಭಿಸಿದನೆಂದರೆ ಶ್ರೋತೃಗಳ ಸಂಖ್ಯೆಯು ಹದಿ ನೈದು ಇಪ್ಪತ್ತುಮಂದಿಗೆ ಇಳಿಯುವುದು. ಅದೇ ಆತನ ತಂದೆಯು ವ್ಯಾ ಖ್ಯಾನಕೊಡಲಾರಂಭಿಸಿದರೆ ಶ್ರೋತೃಗಳು ಸಾವಿರಾರು ಸಂಖ್ಯೆಯಿಂದ ನೆರೆಯುವರು.

ಏಕನಾಥನು ಭೂಲೋಕದಲ್ಲಿ ತನ್ನ ಪಾಲಿನ ಕೆಲಸವನ್ನು ಮಾಡಿ ಮುಗಿಸಿದಂತೆ ತೋರಿತು. ಆತನಿಗೂ, ತಾನಿನ್ನು ಇಹಲೋಕವನ್ನು ಬಿಡ ಬೇಕೆಂಬುದು ಭಗವಚ್ಚಿತ್ತಕ್ಕೆ ಬಂದಿದೆಯೆಂದು ಬೋಧೆಯಾಯಿತು. ಆ ಸಂಗತಿಯನ್ನು ಆತನು ತನ್ನ ಮಿತ್ರರಿಗೂ ಶಿಷ್ಯರಿಗೂ ಅನುಯಾಯಿಗಳಿಗೂ ತಿಳಿಸಿದನು. ಏಕನಾಥನು ತನ್ನ ಕೊನೆಗಾಲದಲ್ಲಿ ಶ್ರೀರಾಮಕಥೆಯನ್ನು ಬರೆಯಲು ಪ್ರಾರಂಭಿಸಿದ್ದನು ಆದರೆ ಅದು ಮುಗಿಯುವುದಕ್ಕೆ ಮುಂಚಿತ ವಾಗಿಯೇ ಆತನು ಪ್ರಯಾಣಮಾಡಲಿರುವನೆಂದು ತೋರಿದ್ದರಿಂದ, ಆತನ ಆಪ್ತೇಷ್ಟರೂ, ಶಿಷ್ಯವರ್ಗವೂ ಆತನನ್ನು ಕುರಿತು,—'ಸ್ವಾಮಿಾ ಶ್ರೀರಾಮ

ಚರಿತ್ರೆಯನ್ನು ಬರೆಯಲು ಪ್ರಾರಂಭಿಸಿದ ನೀವು ಅದನ್ನು ಮುಗಿಸುವುದಕ್ಕೆ ಮುಂಚೆಯೇ ಪ್ರಯಾಣಮಾಡುವುದೆಂದರೇನು? ಹಿಂದೊಂದುವೇಳೆ ಕೃಷ್ಣದಾಸನೆಂಬ ಕವಿಗೆ ಜೀವಿತಕಾಲವನ್ನು ಹನ್ನೊಂದು ದಿನಗಳವುಟ್ಟಿಗೆ ನೀವೇ ಹೆಚ್ಚಿಸಿಕೊಡಲಿಲ್ಲವೆ?' ಎಂದು ಪ್ರಾರ್ಥಿಸಿದರು. ಏಕನಾಥನು-'ಮಿತ್ರರೇ ಅದು ನಿಜ. ಆದರೆ ಶ್ರೀರಾಮಾಜ್ಞೆಯಿಂದಲೇ ಪ್ರಾರಂಭವಾದ ಅದು ಮುಗಿಯಬೇಕೆಂಬುದು ಆತನ ಇಷ್ಟವಾಗಿದ್ದರೆ ಅದು ಹೇಗೂ ಆಗುವುದು. ಹಾಗಿಲ್ಲದಿದ್ದಲ್ಲಿ ಯಾರೇನು ಮಾಡಲಾದೀತು?' ಎಂದನು. ಆದರೆ ಆತನಲ್ಲಿ ವಿಶೇಷ ಭಕ್ತಿವಿಶ್ವಾಸಗಳನ್ನಿಟ್ಟುಕೊಂಡಿದ್ದ ಆ ಜನರು ತೃಪ್ತರಾಗಲಿಲ್ಲ. ಏಕನಾಥಸ್ವಾಮಿಯು ಹೇಗಾದರೂ ಮಾಡಿ, ವಿಠ್ಠಲನನ್ನೊಪ್ಪಿಸಿ ಇನ್ನೂ ಕೆಲಕಾಲ ಬದುಕಿದ್ದು ಅದನ್ನು ಮುಗಿಸಬೇಕೆಂದು ಪೀಡಿಸಿದರು. ಆಗಲಾತನು-'ಇದೇನು, ನನ್ನನ್ನೇಕೆ ಹೀಗೆ ಪೀಡಿಸುತ್ತೀರಿ? ಆ ಕಾರ್ಯವು ಪೂರ್ಣವಾಗಬೇಕೆಂಬುದು ಭಗವಚ್ಚಿತ್ತದಲ್ಲಿದ್ದರೆ, ಈ ಚಿಕ್ಕ ಹುಡುಗನು ಅದನ್ನು ಪೂರ್ತಿಮಾಡುವನು' ಎಂದು ನುಡಿದು ಸಮೀಪದಲ್ಲೇ ಕುಳಿತಿದ್ದ ಸುಮಾರು ಹದಿನೈದು ವಯಸ್ಸಿನ ಒಬ್ಬ ಹುಡುಗನನ್ನು ತೋರಿಸಿದನು. ಆ ಹುಡುಗನು ಅಷ್ಟುಮಟ್ಟಿನ ಚುರುಕುಬುದ್ಧಿಯುಳ್ಳವನೆಂದೂ ಹೆಸರಾದವನಲ್ಲ. ಆದರೆ ಹಾಗೆ, ಶ್ರೀ ಏಕನಾಥನ ಪ್ರಸಾದವಾದೊಡನೆಯೇ, ಆ ಹುಡುಗನು ಅಸ್ಖಲಿತವಾಣಿಯಿಂದ ಪ್ರಾರಂಭಿಸಿ, ಮುಂದೆ ಒಂದು ಅಧ್ಯಾಯದ ಶ್ಲೋಕಗಳನ್ನು ಬಾಯಿಪಾಠಮಾಡಿದ್ದನ್ನು ಒಪ್ಪಿಸುವನೋ ಎಂಬಂತೆ ನುಡಿದುಬಿಟ್ಟನು. ಅದನ್ನು ಕೇಳಿ ಎಲ್ಲರೂ ಮಹದಾಶ್ಚರ್ಯಮಗ್ನರಾದರು. ಇದಾದ ತರುವಾಯ ಏಕನಾಥಸ್ವಾಮಿಯು ಎಲ್ಲರೊಂದಿಗೆ ವಿಶೇಷ ಹರಿಭಜನೆ ಮಾಡಿಕೊಳ್ಳುತ್ತ, ಗೋದಾವರೀತೀರಕ್ಕೆ ನಡೆದನು. ಅಲ್ಲಿ ಏಕನಾಥನು ತನ್ನ ಬಟ್ಟೆಗಳನ್ನು ತೆಗೆದು ನದಿಯಲ್ಲಿ ಹೊಕ್ಕನು. ತರುವಾಯ ಸ್ನಾನಮಾಡಿ ಮೇಲಕ್ಕೆ ಬರಲೇ ಇಲ್ಲವೆಂದು ಕೆಲವರು ಹೇಳುತ್ತಾರೆ. ಮತ್ತೆ ಕೆಲವರು, ಆತನು ನದಿಯಲ್ಲಿ ಸ್ನಾನಮಾಡಿ ಮೇಲಕ್ಕೆ ಬಂದ ತರುವಾಯ, ಕಣ್ಣುಗಳನ್ನು ಮುಚ್ಚಿಕೊಂಡು ಧ್ಯಾನಮಗ್ನನಾಗಿ, ಸಮಾಧಿಸ್ಥನಾದವನು ತಿರುಗಿ ಬಹಿಃಪ್ರಜ್ಞೆಹೊಂದಲಿಲ್ಲವೆಂದು ಹೇಳುವರು. ಹೀಗೆ ಆ ಮಹನೀಯನು ವಿಚಿತ್ರರೀತಿಯಿಂದ ಪರಂಧಾಮವನ್ನು ಹೊಂದಿ, ತನ್ನ ಕೀರ್ತಿ

ಶರೀರವನ್ನು ಭೂಲೋಕದಲ್ಲಿ ಬಿಟ್ಟುಹೋದನು. ಇದು ೧೫೨೧ನೆ ಸಂವತ್ಸರದ(ಕ್ರಿ. ಶ. ೧೫೯೯) ಫಾಲ್ಗುಣಮಾಸದ ಬಹುಳ ಷಷ್ಠಿಯಲ್ಲಿ ಸಂಭವಿಸಿತು.

# ಉ ಪ ಸ ಂ ಹಾ ರ

ಧರ್ಮಕ್ಕೆ ಅವಸಾನವೂ ಅಧರ್ಮಕ್ಕೆ ಅಭ್ಯುದಯವೂ ಉಂಟಾದಾಗ್ಗೆ ಧರ್ಮೋದ್ಧಾರಕಾರ್ಯಕ್ಕಾಗಿ ಭಗವದಾಜ್ಞೆಯಿಂದ ವಿಭೂತಿಪುರುಷರು ಉದಯವಾಗುವರೆಂಬ ಆರ್ಯವಾಕ್ಯದಂತೆ, ವಿಜಯನಗರ ಸಾಮ್ರಾಜ್ಯವು ನಾಶವಾಗಿ ಬಹಮನೀ ರಾಜ್ಯಗಳು ವಿಭಾಗವಾಗಿ ಹಿಂದೂಮತವನ್ನು ಶೋಷಿಸಲು ಪ್ರಯತ್ನಿಸುತ್ತಿದ್ದ ಕಾಲದಲ್ಲಿ ಅದರ ಉದ್ಧಾರಕ್ಕೆಂಬ ಉದ್ದೇಶದಿಂದಲೋ ಎಂಬಂತೆ ಏಕನಾಥನು ಜನ್ಮಿಸಿ, ತನ್ನ ಧರ್ಮಬೋಧೆ, ಕೀರ್ತನ ಪದ್ಧತಿಯ ಪುನರುದ್ಧಾರಮಾಡುವಿಕೆ, ಮ ತ ಸ ಹ ನೆ ಮುಂತಾದುವುಗಳ ಮೂಲಕ ವಿಶೇಷ ಸೇವೆಮಾಡಿದನು. ಈತನಿಗೆ ಹಿಂದೆ ಬಂದಿದ್ದ ಶ್ರೀ ಜ್ಞಾನೇಶ್ವರ ಮತ್ತು ನಾಮದೇವ ಇವರಪರಿಶ್ರಮವೂ, ಈತನ ತರುವಾಯ ಜನಿಸಿದ ತುಕಾರಾಮಸಾಧು ಸಮರ್ಥ ರಾಮದಾಸ ಈ ಮಹನೀಯರ ನಿರಂತರ ಪರಿಶ್ರಮವೂ ಏಕತ್ರ ಸಮ್ಮಿಳಿತವಾಯಿತೋ ಎಂಬಂತೆ, ಧಾರ್ಮಿಕ ನೈತಿಕ ಸಾಮಾಜಿಕ ಉನ್ನತಿಯ ಕಾರ್ಯಗಳೆಲ್ಲವೂ ಶ್ರೀ ಛತ್ರಪತಿ ಶಿವಾಜಿ ಮಹಾರಾಜನ ಪ್ರತಾಪಚಂದ್ರಿಕೆಯಲ್ಲಿ ರಾಜಕೀಯದ ಬೆಂಬಲಹೊಂದಿ ಕಂಗೊಳಿಸಿ ಅಭಿವೃದ್ಧಿಗೊಂಡುವು.

ಯಾವ ಮಹನೀಯನು ಉತ್ತಮ ಬ್ರಾಹ್ಮಣವಂಶದಲ್ಲಿ ಜನಿಸಿ ವಿಶೇಷ ವಿದ್ಯಾಭ್ಯಾಸಮಾಡಿದನಾದರೂ, ಜ್ಞಾನ ಶುಂಠನಾಗದೆ, ಕರ್ಮಜಡನಾಗದೆ, ಕಾಲದೇಶಗಳನ್ನು ತಿಳಿದು ಉದಾರಚಿತ್ತವುಳ್ಳವನಾಗಿ ಪಾಮರ ಜನತೆಯ ಉದ್ಧಾರಕಾರ್ಯವೇ ಭಗವತ್ಸೇವೆಯೆಂಬ ಸ್ಥಿರಸಂಕಲ್ಪವುಳ್ಳವನಾಗಿ ತನ್ನ ತನುಮನಧನಗಳನ್ನೂ ಅದಕ್ಕಾಗಿ ವಿನಿಯೋಗಿಸಿ, ಅಕ್ಷಯ ಕೀರ್ತಿಶರೀರಿಯಾದನೋ, ಆ ಏಕನಾಥಸ್ವಾಮಿಯ ಉದಾಹರಣೆಯು ಸಕಲರಿಗೂ ಆದರ್ಶವಾಗಿದ್ದು, ಪ್ರಕೃತಪರಿಸ್ಥಿತಿಯಲ್ಲಿ ನಮ್ಮ ದೇಶೋದ್ಧಾರಕ್ಕೆ ಸಕಲರೂ ಸಹಕರಿಸುವಂತೆ ಭಗವಂತನು ಪ್ರೇರಿಸಲಿ.

ತಥಾಸ್ತು.

|| ಶ್ರೀರಾಮಸಹಾಯಂ ||

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸ ಪುಸ್ತಕಾವಳಿ)

**ಮುನ್ನುಡಿ:—**

ನಮ್ಮ ದೇಶದಲ್ಲಿ ಧಾರ್ಮಿಕ ಪುನರುದ್ಧಾರಕ್ಕಾಗಿ, ಪ್ರಯತ್ನಿಸಿದ ಮಹನೀಯರು, ಮಿಕ್ಕ ಪ್ರಾಪಂಚಿಕ ವೃತ್ತಿ ವ್ಯವಹಾರಗಳ ಅಭಿವೃದ್ಧಿಗಾಗಿ ಪ್ರಯತ್ನ ನಡೆಸಿದವರಿಗಿಂತಲೂ ಹೆಚ್ಚುಕಾಲ ಬಾಳುವರು - ಎಂದರೆ ಅಂಥವರ ಕೀರ್ತಿಶರೀರವು ಅಚ್ಚಳಿಯದೆ ಬಹುಕಾಲ ಕಂಗೊಳಿಸುತ್ತಿರುವುದು. ಏಕೆಂದರೆ, ಎಷ್ಟು ವೈಭವಸ್ಥಿತಿಯಲ್ಲಿದ್ದರೂ ಧನ ಅಧಿಕಾರ ರಾಜ್ಯಾಧಿಪತ್ಯ ಮುಂತಾದುವು ಶಾಶ್ವತವಾದುವಲ್ಲ - ಭಗವಂತನೊಬ್ಬನೇ ಶಾಶ್ವತವಾದವನು ; ಆದುದರಿಂದ ಆತನ ಪ್ರಾಪ್ತಿಗಾಗಿ ಮಾಡುವ ಪ್ರಯತ್ನವಾವುದೋ ಅದೇ ಸಾರ್ಥಕವಾದುದು ಎಂಬೊಂದು ಭಾವನೆಯು ನಮ್ಮಲ್ಲಿ ಪೂರ್ವದಿಂದಲೂ ಬಂದಿದೆ. ಧಾರ್ಮಿಕ ಪುನರುದ್ಧಾರಕ್ಕಾಗಿ ಪ್ರಯತ್ನಿಸುವವರ ದೃಷ್ಟಿಯಲ್ಲಿರುವುವು ಧನಕನಕಾದಿಗಳಲ್ಲ - ಸತ್ಯ ಧರ್ಮ ನ್ಯಾಯಗಳು, ಅವರು ಅಪೇಕ್ಷಿಸುವುದು, ತಮ್ಮ ಕೀರ್ತಿಪ್ರತಿಷ್ಠೆಗಳನ್ನಲ್ಲ- ಲೋಕದ ಜೀವಕೋಟಿಗಳ-ಮಾನವರ ಶ್ರೇಯಸ್ಸನ್ನು. ಆದುದರಿಂದ ಹಾಗೆ ಪರಹಿತಚಿಂತನೆಯಲ್ಲೇ ಮಗ್ನರಾದ ಮಹನೀಯರ ಕೀರ್ತಿಚಂದ್ರಿಕೆಯಾದರೂ ಲೋಕದಲ್ಲಿ ಬಹುಕಾಲ ಬಾಳುವುದು, ಜನಾಂಗವೂ ಅವರ ಪವಿತ್ರ ಚರಿತ್ರೆಯನ್ನೂ, ಪುಣ್ಯನಾಮವನ್ನೂ ಹಾಡಿ ಹರಸುತ್ತಿರುವುದು.

ನಮ್ಮ ಪ್ರಕೃತ ಚರಿತ್ರನಾಯಕರು ವಲ್ಲಭಾಚಾರ್ಯರೆಂಬ ಸಾಧುಶ್ರೇಷ್ಠರು. ಇವರು, ಮೊಗಲ್ ಚಕ್ರವರ್ತಿಗಳ ಕಾರ್ಯಭಾರವು ನಮ್ಮ ದೇಶದಲ್ಲಿ ನೆಲೆಗೊಂಡು, ನಮ್ಮವರು, ತಮ್ಮ ಧನ ಅಧಿಕಾರ ಸ್ವಾತಂತ್ರ್ಯ ಮುಂತಾದ ಎಲ್ಲಾ ಸೌಭಾಗ್ಯಗಳನ್ನೂ ಮಹಮ್ಮದೀಯರ ಪ್ರಾಬಲ್ಯಕ್ಕೆ ಸೂರೆಗೊಟ್ಟು, ಧಾರ್ಮಿಕ ವಿಚಾರದಲ್ಲೂ ಮಾರ್ಗಕಾಣದೆ ತೊಳಲುತ್ತಿದ್ದ

ಕಾಲದಲ್ಲಿ, ಪ್ರಜಾವರ್ಗಕ್ಕೆ ಮಾರ್ಗದರ್ಶಕರಾಗಿ, ರಾಜಪುಟಾಣ ಮತ್ತು ಗುಜರಾತು ಪ್ರಾಂತಗಳಲ್ಲಿ ವೈಷ್ಣವಧರ್ಮವನ್ನು ವಿಶೇಷವಾಗಿ ಹಬ್ಬಿಸಿದರು. ಇವರೂ ಇವರ ತರುವಾಯ ಇವರ ಸಂತತಿಯವರೂ, ಧರ್ಮ ಪ್ರಚಾರಕ್ಕಾಗಿ ಮಾಡಿದ ಕಾರ್ಯಗಳು ಸ್ತುತ್ಯರ್ಹವಾಗಿವೆ.

ಆ ಕಾಲದಲ್ಲಿ ಹಿಂದೂಧರ್ಮರಕ್ಷಣೆಗೆ ಇಂತಹ ಒಂದು ಸಾಧನವು ಒದಗದಿದ್ದಲ್ಲಿ ಏನಾಗುತ್ತಿತ್ತೆಂದು ಯೋಚಿಸುವುದೂ ಈ ಸಂದರ್ಭದಲ್ಲಿ ಅಪ್ರಕೃತವೆನ್ನಿಸುವಂತಿಲ್ಲ.— ಸಾಮಾನ್ಯ ಲೋಕವು ಯಾವಾಗಲೂ ಜೀವಿತಕ್ಕೊಂದು ಧ್ಯೇಯವಿಲ್ಲದೆ, ಸುಖಜೀವನವು ಯಾರ ಮೂಲಕ ನಡೆಯುವುದೋ ಅವರನ್ನೇ ಸಕಲ ವಿಷಯಗಳಲ್ಲೂ ಅನುಸರಿಸಲು ಹಿಂದೆಗೆಯದಿರುವುದೂ, ಸಧ್ಯಃಫಲವೇ ಮುಖ್ಯವೆಂದು ನಂಬಿರುವುದೂ, ಎಲ್ಲೆಲ್ಲೂ ಕಂಡು ಬರುತ್ತಿರುವುದಲ್ಲವೆ! ಆಗಿನ ಕಾಲದಲ್ಲಿ ರಾಜ್ಯಾಧಿಪತ್ಯವು ಮೊಗಲಾಯರ ವಶವಾಗಿ ದೇಶೀಯರು ಉಪಜೀವನಕ್ಕಾಗಿ ಲೌಕಿಕವಾಗಿ ಅವರನ್ನು ಅನುಸರಿಸಿಕೊಂಡು ಕಾಲಯಾಪನೆಮಾಡಬೇಕಾಗಿದ್ದುದರಿಂದ, ಧರ್ಮವಿಚಾರದಲ್ಲಿ ವಿಶೇಷ ದಾರ್ಢ್ಯವನ್ನುಂಟಾಗಿದ್ದ ಕೆಲವರಲ್ಲದೆ ಮಿಕ್ಕವರೆಲ್ಲರೂ, ಸಕಲ ವಿಷಯಗಳಲ್ಲೂ ಅವರನ್ನೇ ಅನುಸರಿಸಲು ಹಿಂದೆಗೆಯುತ್ತಿರಲಿಲ್ಲ ಆ ಮಾರ್ಗವು ಹಾಗೇ ನಡೆಯಲು ತಡೆಯಿಲ್ಲದಿದ್ದಲ್ಲಿ ಆ ಕಾಲದಲ್ಲಿ, ಹಿಂದೂ ಮತದಿಂದ ಲಕ್ಷಾಂತರಮಂದಿ ಮತಾಂತರಹೊಂದಿ ಮಹಮ್ಮದೀಯರಾಗುತ್ತಿದ್ದರೆನ್ನಲು ಏನೂ ಸಂದೇಹವಿಲ್ಲ. ಅಂತಹ ಕಾಲದಲ್ಲಿ, ವೈಷ್ಣವ ಧರ್ಮದ ಶ್ರೇಷ್ಠತೆಯನ್ನೇ ಮುಖ್ಯವನ್ನಾಗಿ ಪ್ರತಿಪಾದಿಸುತ್ತ, ಜನಸಾಮಾನ್ಯಕ್ಕೆ ಮಹದ್ವ್ಯಕ್ತಿಯೆಂಬಂತೆ ಅವರ ಭಕ್ತಿಗೌರವಗಳನ್ನು ಆಕರ್ಷಿಸಲು ಯೋಗ್ಯನಾದ ಒಬ್ಬ ವ್ಯಕ್ತಿಶ್ರೇಷ್ಠನಿಲ್ಲದಿದ್ದರೆ, ಹಿಂದೂಧರ್ಮದ ತಳಹದಿಯು ಸಡಿಲುವುದು ಕಷ್ಟವಾಗಿರಲಿಲ್ಲ. ಮಹನೀಯರು ಜಗತ್ತಿನಲ್ಲುದಿಸುವುದೇಕೆಂಬುದಕ್ಕೆ, ದೇಶಕಾಲ ವರ್ತಮಾನಗಳನ್ನನುಸರಿಸಿ ಈ ಕಾರ್ಯಕಾರಣಗಳನ್ನು ಯೋಚಿಸಿದಲ್ಲಿ, ಶ್ರೀ ಕೃಷ್ಣಪರಮಾತ್ಮನು ಭಗವದ್ಗೀತೆಯಲ್ಲಿ ಅಪ್ಪಣೆ ಕೊಡಿಸಿರುವಂತೆ:—

ಯದಾ ಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ
ಅಭ್ಯುತ್ಥಾನ ಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ

ಎಂದರೆ ಯಾವ ಕಾಲದಲ್ಲಿ ಧರ್ಮಕ್ಕೆ ಮಾಲಿನ್ಯವೂ, ಅಧರ್ಮಕ್ಕೆ ಅಭಿವೃದ್ಧಿಯು ಉಂಟಾಗುವುದೋ ಅಂತಹ ಕಾಲದಲ್ಲಿ, ಅವತಾರ ಮಾಡುತ್ತೇನೆಂದ ಮಾತು ವಾಸ್ತವವೆಂದು ನಂಬಬೇಕಾಗಿದೆ. ಭಗವಂತನ ಇಚ್ಛಾನುಸಾರ ಆತನ ಪ್ರೇರಣಾನುಸಾರ ಕಾರ್ಯಮಾಡುವುದೇ ಭಕ್ತಾದಿಗಳ ಕರ್ತವ್ಯವಾದ್ದರಿಂದ ಭಕ್ತರು ಯಾವ ಕೆಲಸಮಾಡುತ್ತಾರೋ ಅದು ಭಗವಂತನಿಗೆ ಸಮ್ಮತವಾದ ಕಾರ್ಯವೇ ಆಗಿರುತ್ತದೆನ್ನಲು ಅಡ್ಡಿಯಿಲ್ಲ.

ಭಾರತದೇಶದ ಕೀರ್ತಿಪ್ರತಿಷ್ಠೆಗಳನ್ನು ಸ್ಥಾಪಿಸುವಲ್ಲಿ ಈ ಬಗೆಯಲ್ಲಿ ಶ್ರಮವಹಿಸಿದ ಮಹನೀಯ ವ್ಯಕ್ತಿಗಳ ಜೀವಿತಾದರ್ಶಗಳನ್ನು ಪ್ರಕಟಿಸುವುದನ್ನೇ ಮುಖ್ಯ ಕಾರ್ಯವನ್ನಾಗಿ ಕೈಕೊಂಡಿರುವ ಸುಬೋಧ ಕುಸುಮಾಂಜಲೀ ಗ್ರಂಥಮಾಲೆಗೆ ಭಾಷಾಭಿಮಾನಿಗಳಾದ ವಾಚಕಮಹಾಶಯರು ಸ್ವಹಸ್ತಪರಹಸ್ತ ಪ್ರೋತ್ಸಾಹಕೊಟ್ಟು, ಅದರ ಸೇವಾಕಾರ್ಯವನ್ನು ಮುಂದರಿಸಲು ಸರ್ವವಿಧದಿಂದಲೂ ಸಹಾಯಕರಾಗಬೇಕೆಂದು ಪ್ರಾರ್ಥಿಸುತ್ತೇವೆ.

ಇತಿ ಸುಜನ ವಿಧೇಯ

ಬೆಂಗಳೂರು ನಗರ
ತಾ. ೨೧—೧—೩೩



|| ಶ್ರೀ ರಾಮಸಹಾಯಂ ||

### ಭಕ್ತ ಶಿರೋಮಣಿ

# ವಲ್ಲಭಾಚಾರ್ಯ

**ಅಧ್ಯಾಯ ೧** **'ಪಲಾಯನ'**

ನಮ್ಮ ಮಾತೃದೇಶವಾದ ಈ ಭಾರತಭೂಮಿಯಲ್ಲಿ ಜನ್ಮಿಸಿ, ತಮ್ಮ ಜೀವಿತಕಾರ್ಯವನ್ನೆಲ್ಲ ಸದ್ಧರ್ಮ ಪ್ರಚಾರಕ್ಕಾಗಿಯೇ ವಿನಿಯೋಗಿಸಿದ ಮಹನೀಯರು ಅನೇಕರಿರುವರು. ಮಹಮ್ಮದೀಯರು ಉತ್ತರದೇಶದಲ್ಲಿ ಪ್ರಬಲಿಸಿ, ತಮ್ಮ ದಬ್ಬಾಳಿಕೆಯಿಂದ ಹಿಂದೂ ಮತಾನುಯಾಯಿಗಳನ್ನು ನೆಲಸಮ ಮಾಡುತ್ತ, ಬಲವಂತದಿಂದ ಅವರನ್ನು ಮತಾಂತರಗೊಳಿಸುತ್ತ ಬಂದ ಕಾಲದಲ್ಲಂತು, ಹಲವುಮಂದಿ ಸಜ್ಜನರು ಜನ್ಮಿಸಿ, ಆರ್ಷೇಯ ಹಿಂದೂ ಧರ್ಮವನ್ನು ರಕ್ಷಿಸಿಕೊಂಡು ಬಂದಿದ್ದಾರೆ. ಮಹಮ್ಮದೀಯರ ಹಾವಳಿಯು ಉತ್ತರ ಭಾರತಕ್ಕೇ ಹೆಚ್ಚಾಗಿ ತಟ್ಟಿದುದರಿಂದ, ಇಂತಹ ಮಹನೀಯರ ಆವಶ್ಯಕತೆಯೂ ಅಲ್ಲೇ ಹೆಚ್ಚು ಸಂಖ್ಯೆಯಿಂದ-ಮೇಲೆಮೇಲೆ ಉಂಟಾ ದಂತೆ ಕಂಡುಬರುತ್ತದೆ. ಸಾಧು ರಾಮಾನಂದ, ಮೀರಾಬಾಯಿ, ಸೂರ ದಾಸ್, ನಾನಕ, ಕಬೀರ, ತುಲಸೀದಾಸ ಮುಂತಾದ ಸುಪ್ರಸಿದ್ಧ ಸಾಧು ವರೇಣ್ಯರೂ ಇವರ ಮಾರ್ಗದಲ್ಲಿ ನಡೆದ ಇತರ ಅನೇಕಾನೇಕಮಂದಿಯೂ, ಆ ದೇಶದಲ್ಲಿ ಪ್ರಾಪ್ತವಾದ ಪರಮತಗಳ ಧಾಳಿಗೆ ಎದೆಗೊಟ್ಟು, ಪ್ರಾಚೀನ ಧರ್ಮ-ಸಂಸ್ಕೃತಿಗಳನ್ನು ರಕ್ಷಿಸಿಕೊಂಡು ಬಂದರು. ಮೀವಾರ್ ಸಂಸ್ಥಾ ನದ ರಾಣಾನ ಪತ್ನಿಯಾದ ಮೀರಾಬಾಯಿಯು ಅದ್ವಿತೀಯ ವಿಷ್ಣುಭಕ್ತ ಳಾಗಿ ರಾಜ್ಯೈಶ್ವರ್ಯಗಳ ಮೋಹವನ್ನು ತೊರೆದು, ವೈರಾಗ್ಯ ಶಿಖರದಲ್ಲಿ ಕುಳಿತು, ಕೃಷ್ಣಭಕ್ತಿಪರವಾದ ನೂರಾರು - ಸಾವಿರಾರು ಕೀರ್ತನೆಗಳನ್ನು ಹಾಡಿ, ರಾಜಪುಟಾನಾದಲ್ಲಿ ಭಕ್ತಿಪಂಥವನ್ನು ವಿಶೇಷ ರೀತಿಯಿಂದ ಮುಂ

ದರಿಸಿದಳು. ಈ ಮಹಾತ್ಮಳ ಕೀರ್ತನ ಪ್ರವಾಹವು, ಮಹಮ್ಮದೀಯರ ದಾರುಣವಾದ ಧಾಳಿಯಿಂದ ಬೆಂದು ಬೇಗುದಿಗೊಂಡಿದ್ದ ರಾಜಪುಟಾನಾದಲ್ಲಿ ಭಕ್ತಿ ಜ್ಞಾನ ವೈರಾಗ್ಯಗಳೆಂಬ ತಿಳಿನೀರಿನ ಪ್ರವಾಹವನ್ನು ಹರಿಸಿ ಜನ ಮನವನ್ನು ಶಾಂತಗೊಳಿಸಿದುವು. ಆ ಪುಣ್ಯಶೀಲಳ ಭಕ್ತಿ ಮತ್ತು ವೈರಾಗ್ಯಗಳ ಪರಮಾವಧಿಯನ್ನು ಸೂಚಿಸತಕ್ಕ ಒಂದು ಪದವನ್ನು ಇಲ್ಲಿ ಉದಹರಿಸಲಿಚ್ಛಿಸುತ್ತೇವೆ.

### ರಾಗ ಖಮಾಚ್ ದಾದರಾ.

ಮೇರೆ ತೋ ಗಿರಿಧರ ಗೋಪಾಲ ದೂಸರಾ ನ ಕೋಯಿ ॥ ಪ.
ಜಾಕೆ ಶಿರ ಮೋರಾ–ಮುಕುಟ ಮೇರೋ ಪತಿ ಸೋಯಿ
ಶಂಕಚಕ್ರಗದಾ ಪದ್ಮ ಕಂಠಮಾಲ ಸೋಯಿ ೧
ತಾತ ಮಾತ ಸುತ ನಭ್ರಾತ, ಅಪನೋ ನಕೋಯಿ
ಛಾಂದ್ ದಯಿ ಕುಲಕೀಕಾನ್ ಕ್ಯಾಕರೇಗಾಕೋಯಿ ೨
ಸಂತನ ಸಂಗ ಬೈಠಬೈಠ ಲೋಕಲಾಜ ಖೋಯಿ
ಅಬತೋ ಬಾತ್ ಫೈಲಗಯಿ ಜಾನ್ಸೆಸಬ ಕೋಯಿ ೩
ಆಸು ಅನ ಜಲ ಸೀಂಚ ಸೀಂಚ ಪ್ರೇಮ ಬೇಲ ಬೋಯಿ
ಮೀರಾ ಪ್ರಭು ಲಗನ ಲಗೀ ಹೋನೀ ಸೋ ಹೋಯಿ ೪

ಈ ದಿವ್ಯಗೀತದಲ್ಲಿ ಆ ಮಹನೀಯಳು, ತನ್ನ ಸರ್ವಸ್ವವೂ, ಶ್ರೀ ಗೋವರ್ಧನೋದ್ಧಾರಿಯಾದ ಶ್ರೀ ಕೃಷ್ಣಸ್ವಾಮಿಯೇ ಎಂದು ನುಡಿದು ಸರ್ವಸಮರ್ಪಣೆಯೆಂಬ ಭಕ್ತಿಯ ಪರಮಾವಧಿ ಸ್ಥಿತಿಯನ್ನು ಪ್ರದರ್ಶಿಸಿರುವಳು.

ಈಕೆಯಲ್ಲದೆ ಆ ಪ್ರಾಂತದ ಭಕ್ತಿಪಂಥವನ್ನು ಮುಂದರಿಸಿದವರಲ್ಲಿ ಸೂರದಾಸ್ ರವಿದಾಸ್ ಎಂಬ ಕವಿಶ್ರೇಷ್ಠರೂ, ಶ್ರೀರಾಮಚರಿತ ಮಾನಸ ಎಂಬ ಗ್ರಂಥರತ್ನವನ್ನು ರಚಿಸಿದ ತುಲಸೀದಾಸ್ ಎಂಬ ಸಾಧುಶ್ರೇಷ್ಠನೂ ಪ್ರಖ್ಯಾತರು. ಇವರೆಲ್ಲರೂ ಅಕ್ಬರ್ ಚಕ್ರವರ್ತಿಯ ಕಾಲದಲ್ಲೇ ಜೀವಿಸಿದ್ದು ವೈಷ್ಣವ ಭಕ್ತಿಪಂಥವನ್ನು ವಿವಿಧ ಮುಖಗಳಿಂದ ಅಭಿವೃದ್ಧಿಗೊಳಿಸಿ ಕೀರ್ತಿಶೇಷರಾದರು. ನಮ್ಮ ಕಥಾನಾಯಕರೂ ಇವರ ಸಮಕಾಲೀನರೇ !—

ನಮ್ಮ ಕಥಾನಾಯಕರ ಕಾರ್ಯವು ಇನ್ನು ಮುಂದೆ ಹೇಳುವಂತೆ, ಗುಜರಾತ್ ದೇಶದಲ್ಲಿ ಪ್ರಾರಂಭಿಸುವುದಕ್ಕೆ ಪೂರ್ವದಲ್ಲಿ ಅಲ್ಲಿ ಶ್ರೀ ನರಸಿಂಹ ಮೆಹತಾ ಎಂಬೊಬ್ಬ ವೈಷ್ಣವ ಸಾಧುಶ್ರೇಷ್ಠನು ಜನ್ಮಿಸಿ ವಿಷ್ಣುಭಕ್ತಿ ಮಾಹಾತ್ಮ್ಯವನ್ನು ಬೋಧಿಸಿದ್ದನು. ವೈಷ್ಣವ ಭಕ್ತಿಪಂಥವು, ಕೇವಲ ಮತಭಲವನ್ನು ಮಾತ್ರ ಮುಂದುಮಾಡಿಕೊಳ್ಳದೆ, ಜನಗಳಲ್ಲಿ ನೀತಿಬೋಧೆ ಯನ್ನು ಮಾಡಿ ಅವರನ್ನು ಸಜ್ಜನರನ್ನಾಗಿಸಲು ಹೇಗೆ ಸಹಕಾರಿಯಾಯಿತು ಎಂಬುದನ್ನು ಮುಖ್ಯವಾಗಿ ಗಮನಿಸಬೇಕಾಗಿದೆ. ಅದನ್ನು ಪ್ರದರ್ಶಿಸಲು, ಸಾಧುವರ್ಯ ನರಸಿಂಹ ಮೆಹತಾಯವರ, ಈ ಒಂದು ಪದವನ್ನು ಉದಹರಿಸಿದರೆ ಸಾಕಾಗಿದೆ. ವೈಷ್ಣವನೆಂಬ ಹೆಸರಿಗೆ ಅರ್ಹನಾದವನಾರು? ಎಂಬ ವಿಚಾರದಲ್ಲಿ ಅವರ ಮಾತುಗಳಿವು.

### ರಾಗ ಖಮಾಚ್ ದುಮಾಳಿ.

*ವೈಷ್ಣವ್ ಜನ ತೋ ತೇನೇ ಕಹಿಯೇ, ಜೋ ಪೀರಪರಾಈ ಜಾಣೇರೇ |
ಪರದುಃಖೆ ಉಪಕಾರ್ ಕರೇತೋಯ, ಮನ ಅಭಿಮಾನ್ ನ ಆಣೇರೇ ಧೃ.

ಸಕಲ ಲೋಕಮಾಂ ಸಹುನೇ ವಂದೇ, ನಿಂದಾ ನ ಕರೇ ಕೇನೀರೇ
ವಾಚ, ಕಾಛ ಮನ ನಿಶ್ಚಳರಾಖೇ, ಧನಧನ ಜನನೀ ತೇನೇ ರೇ ೧

ಸಮ ದೃಷ್ಟೀನೇ ತೃಷ್ಣಾ ತ್ಯಾಗೀ, ಪರಸ್ತ್ರೀ ಜೇನೇ ಮಾತ ರೇ
ಜಿಹ್ವಾ ಥಕೀ ಅಸತ್ಯನಬೋಲೇ, ಪರಧನ್ ನವಝಾಲೇ ಹಾಥ್‌ರೇ ೨

ಮೋಹ್ ಮಾಯಾ ವ್ಯಾಪೇನಹಿ ಜೇನೆ, ದೃಢವೈರಾಗ್ಯ ಜೇನಾಮನ್ ಮಾರೇ,
ರಾಮನಾಮ ಶೂಂ ಟಾಳೀ ಲಾಗೀ, ಸಕಲ ತೀರಥ ತೇನಾತನ್ ಮಾಂ ರೇ ೩

ವಣ ಲೋಭೀನೇ ಕಪಟರಹಿತ ಛೇ, ಕಾಮಕ್ರೋಧ ನಿವಾರ್ಯಾರೇ
ಭಣೇ ನರಸೈಯಾ ತೇನುಂ ದರ್ಶನ ಕರತಾಂ, ಕುಲ ಏಕೋತ್ತೇರ ತಾರ್ಯಾರೇ ೪

ತಾತ್ಪರ್ಯ:—ಯಾವನು ಸಾಧುಗಳನ್ನು ಪ್ರೀತಿಸಿ, ದುರಭಿಮಾನವನ್ನು ತ್ಯಜಿಸಿ, ಪರರು ಕಷ್ಟದಲ್ಲಿರುವಾಗ ಅವರಿಗೆ ಸಹಾಯಮಾಡುವನೋ ಅವನೇ ವೈಷ್ಣವನೆಂದು ಹೇಳಬೇಕು.

---

*ಇದು ಮಹಾತ್ಮಾ ಗಾಂಧಿಯವರಿಗೆ ಅತ್ಯಂತ ಪ್ರಿಯಕರವಾದ ಪದ. ಅವರು ಯಾವ ಕಾರ್ಯವನ್ನು ಪ್ರಾರಂಭಿಸುವಾಗಲೂ, ನಿತ್ಯದ ಸಾಯಂ ಪ್ರಾತಃಕಾಲಗಳಲ್ಲೂ ಈ ಪದವನ್ನು ಹೇಳಿಸಿ ಕೇಳಿ, ತರುವಾಯ ಕೆಲಸಕ್ಕೆ ತೊಡಗುತ್ತಿರುವರು.

ಯಾವನು ಸಕಲರಿಗೂ ವಂದ್ಯನಾಗಿ, ಯಾರ ನಿಂದೆಯನ್ನೂ ಮಾಡದೆ, ಮನೋವಾಕ್ಕಾಯಗಳಲ್ಲಿ ನಿಶ್ಚಲತ್ವವನ್ನು ಧರಿಸಿರುವನೋ, ಅವನ ಜನನಿಯೇ ಧನ್ಯಳು—೧.

ಯಾವನು ಸಮದೃಷ್ಟಿಯುಳ್ಳವನಾಗಿಯೂ, ತ್ಯಾಗತೃಷ್ಣೆಯುಳ್ಳವನಾಗಿಯೂ, ಪರಸ್ತ್ರೀಯನ್ನು ಮಾತೆಯಾಗಿಯೂ ಭಾವಿಸುವನೋ, ಯಾವನ ನಾಲಿಗೆಯು ಅಸತ್ಯವನ್ನಾಡಿಲ್ಲವೋ, ಪರಧನಕ್ಕೆ ಯಾವನ ಕೈ ಸೋಕಿಲ್ಲವೋ ಅವನೇ ವೈಷ್ಣವನು.—೨.

ಮೋಹಮಾಯಾದಿಗಳು ಯಾವನನ್ನು ವ್ಯಾಪಿಸಿಲ್ಲವೋ, ಯಾವನ ಮನಸ್ಸು ದೃಢ ವೈರಾಗ್ಯಪೂರ್ಣವಾಗಿರುವುದೋ, ಯಾವನ ಹೃದಯದಲ್ಲಿ ರಾಮನಾಮವು ಸದಾ ತಾಳಹಾಕುತ್ತಿರುವುದೋ ಅಂತಹನ ತನುವಿನಲ್ಲಿಯೇ ಸರ್ವ ತೀರ್ಥಗಳೂ ಇರುವುವು.—೩

ನಿರ್ಲೋಭಿಯೂ ನಿಷ್ಕಪಟಿಯೂ ಕಾಮಕ್ರೋಧವರ್ಜಿತನೂ ಆದ ಅಂತಹ ವೈಷ್ಣವನ ದರ್ಶನದಿಂದ ಕುಲವೆಲ್ಲವೂ ಭವದುಃಖದಿಂದ ಪಾರಾಗುವುದೆಂದು ನರಸಿಂಹನು ಸಾರುತ್ತಾನೆ. ಜನಸಾಮಾನ್ಯದಲ್ಲಿ ಭಗವದ್ಭಕ್ತಿಯನ್ನು ಪ್ರವೇಶಗೊಳಿಸುವುದರೊಂದಿಗೆ, ವಿರಕ್ತಿಯನ್ನೂ, ಸತ್ಯಧರ್ಮ ನೀತಿನ್ಯಾಯಗಳನ್ನೂ ಬೋಧಿಸಿ ಅವರು ಸತ್ಯಶಾಂತಮಾರ್ಗಗಳಿಂದ ನಡೆದು ಲೋಕದಲ್ಲಿ ಸರ್ವತ್ರ ಶಾಂತಿಯ ಬೀಜಗಳನ್ನು ಬಿತ್ತಲು ವೈಷ್ಣವ ಧರ್ಮವು ಹೇಗೆ ಸಹಾಯಕವಾಯಿತು ಎಂಬುದನ್ನು ಇದರಿಂದ ಗ್ರಹಿಸಬಹುದಾಗಿದೆ. ನಮ್ಮ ಕಥಾನಾಯಕರೂ, ಈ ಸಾಧುವರೇಣ್ಯರು ಶುದ್ಧಿಗೊಳಿಸಿದ್ದ ಕ್ಷೇತ್ರದಲ್ಲೇ ಶ್ರೀ ಕೃಷ್ಣನಾಮಾಮೃತವೆಂಬ ಬೀಜವನ್ನು ನೆಟ್ಟು, ಅದನ್ನು ಕರ್ಮಾಚರಣೆ ಎಂಬ ಗೊಬ್ಬರ ನೀರುಗಳಿಂದ ಪೋಷಿಸಲು ಸಾಧಕವಾಗುವಂತೆ ಅದಕ್ಕೆ ಒಂದು ವೈದಿಕಧರ್ಮದ ಸ್ವರೂಪಕೊಟ್ಟು ಶ್ರಮಿಸಿದರು.

ವಲ್ಲಭಾಚಾರ್ಯರು ಗುಜರಾತು ಮುಂತಾದ ಉತ್ತರದೇಶ ಪ್ರಾಂತಗಳಲ್ಲಿ ಈ ಬಗೆಯ ಸೇವಾಕಾರ್ಯಗಳನ್ನು ಮಾಡಿದರಾದರೂ, ಅವರ ಜನ್ಮಸ್ಥಾನವು ಗುಜರಾತು ಪ್ರಾಂತವಲ್ಲ ಆಂಧ್ರದೇಶದಲ್ಲಿ ಜನ್ಮತಾಳಿದ ಅವರು, ಸಂಸ್ಕೃತದಲ್ಲಿ ಘನಪಾಂಡಿತ್ಯವನ್ನು ಸಂಪಾದಿಸಿ, ಪ್ರಾರಂಭಕ್ಕೆ ಮಧುರಾ

ನಗರಿಯಲ್ಲಿಯೂ ತರುವಾಯ ಕಾಶೀನಗರದಲ್ಲಿಯೂ ತಮ್ಮ ವೈಷ್ಣವ ಮತ ಸಿದ್ಧಾಂತಗಳನ್ನು ವಿಶೇಷ ವೈಭವದಿಂದ ಜನಗಳ ಮನಸ್ಸಿನಮೇಲೆ ಅಧಿಕವಾದ ಪರಿಣಾಮವುಂಟಾಗುವಂತೆ ಬೋಧಿಸಿದರು. ಭಾರತದೇಶದ ಇತರ ಸಾಧುವರೇಣ್ಯರಂತೆಯೇ,-ಮತಾಚಾರ್ಯರಂತೆಯೇ ಅವರೂ ಸಹ ಅದ್ಯಂತ ದೇಶದಲ್ಲೂ ಸಂಚಾರಮಾಡಿ, ಪರಪಂಥಗಳವರೊಂದಿಗೆ ವಿದ್ವದ್ವಾದ ನಡೆಸಿ, ತಮ್ಮ ಮತವನ್ನೂ ತತ್ವವನ್ನೂ ಸ್ಥಾಪಿಸಿ ಬೋಧಿಸಿದರು. ಈ ಬಗೆಯ ಪಾಂಡಿತ್ಯ, ಬೋಧನಾ ಸಾಮರ್ಥ್ಯಗಳೊಂದಿಗೆ, ಅವರಿಗೆ ಗೋವರ್ಧನಗಿರಿಯಲ್ಲಿ ದೊರೆತ ಒಂದು ಶ್ರೀಕೃಷ್ಣವಿಗ್ರಹವನ್ನು ಅಲ್ಲೇ ಪ್ರತಿಷ್ಠಿಸಿದ ಒಂದು ಮಹತ್ಕೀರ್ತಿಯೂ, ಸೇರಿ, ಅವರ ಧರ್ಮ ಬೋಧಕಕಾರ್ಯಕ್ಕೆ ಹೆಚ್ಚು ಕಳೆಯನ್ನುಂಟುಮಾಡಿತು.

ಆಂಧ್ರದೇಶದ ಕಂಕಾರಾವವೆಂಬೊಂದು ಗ್ರಾಮದಲ್ಲಿ ಕ್ರಿ. ಶ. ಹದಿನೈದನೆಯ ಶತಮಾನದ ಆದಿಭಾಗದಲ್ಲಿ ನಾರಾಯಣಭಟ್ಟನೆಂಬೊಬ್ಬ ಕರ್ಮನಿಷ್ಠನಾದ ವಿಪ್ರವರ್ಯನು, ಕುಟುಂಬಸಮೇತನಾಗಿ ವಾಸಮಾಡಿಕೊಂಡಿದ್ದನು. ಈತನು ಕೃಷ್ಣ ಯಜುರ್ವೇದವನ್ನು ಅಧ್ಯಯನಮಾಡಿ, ಸುತ್ತುಮುತ್ತಲಿನ ಪ್ರಾಂತಗಳಲ್ಲಿ ವಿಶೇಷ ಕೀರ್ತಿಪ್ರತಿಷ್ಠೆಗಳಿಗೆ ಪಾತ್ರನಾಗಿದ್ದನು. ಈತನ ವಂಶದಲ್ಲಿ ನಾಲ್ಕನೆಯ ತಲೆಯವನಾದ ಲಕ್ಷ್ಮಣಭಟ್ಟನೆಂಬಾತನು ತಮ್ಮ ವಂಶಕ್ಕೆ ಆಸ್ತಿಯಾಗಿ ಬಂದ ವೇದಾಧ್ಯಯನ ಸತ್ಕರ್ಮಾನುಷ್ಠಾನ ಮುಂತಾದುವುಗಳಿಗೆ ಲೋಪತಾರದೆ ಸಜ್ಜನನಾಗಿ ಲೌಕಿಕವನ್ನು ಸಾಗಿಸಿಕೊಂಡಿದ್ದನು. ಈತನಿಗೆ ಎಲಮಾಗರಮ್ಮ ಎಂಬ ಸಾಧ್ವೀಮಣಿಯು ಧರ್ಮಪತ್ನಿಯಾಗಿ, ಪತಿಯ ಮನೋನುಕೂಲಳಾಗಿ ಸಂಸಾರಯಾತ್ರೆಯನ್ನು ನಡಿಸಿಕೊಂಡಿದ್ದಳು. ಹೀಗಿರುತ್ತಿರುವಲ್ಲಿ ಆ ದಂಪತಿಗಳಿಗೆ ರಾಮಕೃಷ್ಣನೆಂಬೊಬ್ಬ ಸುತನು ಜನಿಸಿ ಅವರ ಗೃಹಜೀವಿತವನ್ನು ಸುಖಮಯವಾಗಿಸಿದ್ದನು. ಭಕ್ತಿಪರಚಿತ್ತವೃತ್ತಿಯುಳ್ಳವನಾಗಿದ್ದ ಲಕ್ಷ್ಮಣಭಟ್ಟನು ತನಗೆ ಮೂರುಮಂದಿ ಮಕ್ಕಳಾಗುವರೆಂದೂ ಅವರಲ್ಲಿ ಎರಡನೆಯ ಮಗನು, ಶ್ರೀಕೃಷ್ಣಪರಮಾತ್ಮನ ಅಂಶಭೂತನಾಗಿ ಲೋಕದಲ್ಲಿ ಧರ್ಮಸ್ಥಾಪನೆಯ ಕಾರ್ಯಕ್ಕೆ ತೊಡಗುವನೆಂದೂ ಒಂದು ಭವಿಷ್ಯವಾಣಿಯನ್ನು ಕೇಳಿ, ವಿಶೇಷ ಸಂತಸಗೊಂಡಿದ್ದನು.

ರಾಮಕೃಷ್ಣನೆಂಬ ಹೆಸರಿನ ಜ್ಯೇಷ್ಠಶಿಶುವಿನ ಜನನವಾದ ತರುವಾಯ ಲಕ್ಷ್ಮಣಭಟ್ಟನು, ತನ್ನ ಪತ್ನಿಯನ್ನೂ ಜೊತೆಗೆ ಕರೆದುಕೊಂಡು, ಪ್ರಯಾಗದ ಮಾರ್ಗವಾಗಿ ಪ್ರಯಾಣಮಾಡಿಕೊಂಡು ಕಾಶೀಯಾತ್ರೆಗೆಂದು ಹೊರಟನು. ಕಾಶೀನಗರವನ್ನು ಸೇರಿ ಅಲ್ಲಿ ಗಂಗಾಸ್ನಾನ ವಿಶ್ವೇಶ್ವರ-ಬಿಂದುಮಾಧವರ ಆರಾಧನೆ ಇವುಗಳಲ್ಲಿ ಮಗ್ನನಾಗಿ ಆ ಸಾಧುಶ್ರೇಷ್ಠನು, ಅಲ್ಲೇ ಕೆಲದಿನಗಳವರೆಗೆ ವಾಸಮಾಡಿಕೊಂಡಿರುತ್ತಿರಲು ಆ ನಗರದಲ್ಲಿ ಕಾರಣಾಂತರದಿಂದ ಮುಹಮ್ಮದೀಯರಿಗೂ ಹಿಂದೂ ಸಾಧುಸಂತರಿಗೂ ವಿಶೇಷವಾದೊಂದು ಕದನವು ಆರಂಭವಾಗಿ, ಕೈಗೆ ಕೈಹತ್ತಿ, ರಕ್ತಪ್ರವಾಹದಲ್ಲಿ ಪರಿಣಾಮಗೊಳ್ಳುವಂತಹ ದಾರುಣ ಸ್ವರೂಪವನ್ನು ಹೊಂದಿತು. ಲಕ್ಷ್ಮಣಭಟ್ಟನು, ಈ ದುರಂತ ಸಂಕಟವನ್ನು ತಪ್ಪಿಸಿಕೊಳ್ಳಲು, ತನ್ನ ಕುಟುಂಬದವರೊಂದಿಗೆ ಅಲ್ಲಿಂದ ಹೊರಟು, ಎಲ್ಲಾದರೊಂದು ಸುರಕ್ಷಿತಸ್ಥಾನವು ದೊರೆತೀತೇ ಎಂದು ದೇಶಾಂತರಗತನಾಗಿ ಓಡತೊಡಗಿದನು. ಮಾರ್ಗದಲ್ಲಿ ದೊರೆತ ಚಂಪಾರಣ್ಯವೆಂಬೊಂದು ಅರಣ್ಯಪ್ರದೇಶವು ನಿರ್ಜನವಾಗಿದ್ದು.-ಯಾರ ಭಯವೂ ಇದ್ದಂತೆ ಕಂಡುಬರಲಿಲ್ಲವಾಗಿ ಅಲ್ಲಿ ಉಸಿರಾಡಿಸಿಕೊಳ್ಳಲು ನಿಂತರು. ಆ ಕಾಲದಲ್ಲಿ ಲಕ್ಷ್ಮಣಭಟ್ಟನ ಭಾರ್ಯೆಯು ಪೂರ್ಣ ಗರ್ಭಿಣಿಯಾಗಿದ್ದಳು. ಪ್ರಾಣಭಯದಿಂದ ನಿಂತಲ್ಲಿನಿಲ್ಲಲು ಸಾವಕಾಶವಿಲ್ಲದೆ ಹಾಗೆ ಓಡುತ್ತಿದ್ದ ಆ ಅವಸ್ಥೆಯಲ್ಲಿ ಅವಳಿಗೆ ಪ್ರಸವವೇದನೆಯು ಪ್ರಾಪ್ತವಾಯಿತು. ನಿಲ್ಲಲು ನೆರಳಿಲ್ಲ, ನಿರ್ಜನಾರಣ್ಯ, ಎಲ್ಲೆಲ್ಲಿಯೂ ಕಾಡುಮೃಗ ಪಕ್ಷಿಗಳ ಭಯಂಕರ ಗರ್ಜನೆಗಳು, ನೀನೇ ಎಂದು ವಿಚಾರಿಸುವವರು ದಿಕ್ಕಿಲ್ಲ. ಅಂತಹ ಅರಣ್ಯಪ್ರದೇಶದಲ್ಲಿ ಆಕೆಯು ಪ್ರಸವವೇದನೆಯಿಂದ ನರಳುತ್ತಿರುವುದನ್ನು ಕಂಡು ಲಕ್ಷ್ಮಣಭಟ್ಟನು ಮುಂದೇನು ಮಾಡುವುದೆಂದು ತೋರದೆ, ಭಗವದಿಷ್ಟಕ್ಕೆ ಬಂದಂತಾಗಲೆಂದು ನಿರ್ವಿಣ್ಣನಾಗಿ ನಿಂತುಬಿಟ್ಟನು. ಆದರೆ ಭಗವಂತನು ಭಕ್ತಪರಾಧೀನನಲ್ಲವೆ? ಎಲಮಾಗರಮ್ಮನು ಭಯಾಕ್ರಾಂತಳಾದ್ದರಿಂದ ಅಕಾಲದಲ್ಲಿ ಪ್ರಸವವೇದನೆಗೆ ವಶಳಾಗಿ, ೧೫೩೫ನೆಯ ವಿಕ್ರಮಸಂವತ್ಸರ (ಕ್ರಿ. ಶ. ೧೪೭೯) ವೈಶಾಖ ಬಹುಳ ಏಕಾದಶೀ ಭಾನುವಾರದ ದಿನ, ಎಂಟು ತಿಂಗಳು ಮಾತ್ರ ಗರ್ಭವಾಸಮಾಡಿದ್ದ ಒಂದು ಪುರುಷ ಶಿಶುವನ್ನು ಪ್ರಸವಿಸಿದಳು.

ವಲ್ಲಭಾಚಾರ್ಯ ಪಂಥದ ಸಾಧುಶ್ರೇಷ್ಠರ ಚರಿತ್ರೆಗಳನ್ನೆಲ್ಲ ಉಲ್ಲೇಖಿಸಿರುವ **ನಿಜವಾರ್ತಾ** ಎಂಬೊಂದು ಗ್ರಂಥದಲ್ಲಿ, ಆ ಪಂಥದ ಸಂಸ್ಥಾಪಕರಾದ ನಮ್ಮ ಕಥಾನಾಯಕರ ಈ ಜನನ ವೃತ್ತಾಂತವನ್ನು ಹೇಳುವ ಸಂದರ್ಭದಲ್ಲಿ ಒಂದು ವಿಶೇಷ ವೃತ್ತಾಂತವು ಕೊಡಲ್ಪಟ್ಟಿದೆ. ಶಿಶುವು ಆ ಅರಣ್ಯ ಮಧ್ಯಪ್ರಾಂತದಲ್ಲಿ ಜನನವಾದಾಗ, ಶಿಶುವಿಗೆ ಬಿಸಿಲು ಗಾಳಿಗಳ ಬಾಧೆಯುಂಟಾಗದಂತೆ ಅಲ್ಲೊಂದು ಹೇಮಮಯವಾದ ಸೌಧವು ನಿರ್ಮಾಣವಾಯಿತಂತೆ. ದೇವತೆಗಳು ಸ್ವರ್ಗದಿಂದ ಪುಷ್ಪವೃಷ್ಟಿಯನ್ನು ಸುರಿಸಿದರಂತೆ; ಕಿನ್ನರರೂ ಗಂಧರ್ವರೂ ದಿವ್ಯಗೀತಗಳನ್ನು ಪಾಡಿಕೊಳ್ಳುತ್ತ, ತಮ್ಮ ವಿಮಾನಗಳಿಂದ ಆ ಪ್ರಾಂತ್ಯಕ್ಕೆ ಇಳಿದುಬಂದು, ಶಿಶುವನ್ನು ಕಂಡು ಸ್ತುತಿಸಿ ಹೋದರಂತೆ! ಈ ವರ್ಣನೆಯ ವಿಚಾರವು ಅಂತಿರಲಿ, ಶಿಶು ಜನನವಾದ ತರುವಾಯ, ಮುಂದೆ ಶಿಶುವನ್ನೂ ಜೊತೆಗೆ ಕರೆದುಕೊಂಡು, ಬಾಣಂತಿಯನ್ನೂ ಸಾಗಿಸಿಕೊಂಡು ಅಲ್ಲಿಂದ ಹೋಗುವುದು ಹೇಗೆ ಎಂಬ ಚಿಂತೆಯು, ಲಕ್ಷ್ಮಣ ಭಟ್ಟನನ್ನು ವಿಶೇಷವಾಗಿ ಬಾಧಿಸಿದಂತೆ ತೋರುತ್ತದೆ. ಆಗ, ತಮಗೆ ಒದಗಿದ ಕಷ್ಟಸಂಕಟಗಳಿಂದಲೂ, ತನ್ನ ಎರಡನೆಯ ಮಗನು ಭಗವದಂಶ ಸಂಭೂತನಾಗುವನೆಂದು ತಿಳಿದಿದ್ದ ಭವಿಷ್ಯವಾಣಿಯಲ್ಲಿದ್ದ ನಂಬಿಕೆಯಿಂದಲೂ, ಭಗವಂತನು ಆ ಶಿಶುವನ್ನು ಹೇಗಾದರೂ ಕಾಪಾಡುವನೆಂದು ನಂಬಿ, ಆಗತಾನೇ ಜನಿಸಿದ ಆ ಶಿಶುವನ್ನು ಅಲ್ಲೇ ಒಂದು ಘನವೃಕ್ಷದ ನೆಳಲಿನಲ್ಲಿ ಮೃದುವಾದ ಚಿಗುರುಗಳನ್ನು ಹಾಸಿ ಅದರಮೇಲೆ ಮಲಗಿಸಿ, ಶತ್ರುಗಳೆಲ್ಲಿ ಬೆನ್ನಟ್ಟಿಬಂದು ಕೊಲ್ಲುವರೋ ಎಂಬ ಭಯದಿಂದ ಎಲ್ಲರೂ ಆ ಸ್ಥಳವನ್ನು ಬಿಟ್ಟು ಪಲಾಯನಮಾಡಿಬಿಟ್ಟರು.



## ಅಧ್ಯಾಯ ೨ ‘ ತೀರ್ಥಯಾತ್ರಾದಿಗಳು ’

ಹೀಗೆ ಪ್ರಾಣಭಯದಿಂದ ಓಡತೊಡಗಿದ ಅವರು, ಚೌಡಾನಗರ್ ಎಂಬೊಂದು ಊರಿಗೆ ಬಂದು ಸೇರಿದರು. ಅಲ್ಲಿ ಕೆಲಕಾಲ ವಾಸವಾಗಿದ್ದ ತರುವಾಯ, ಕಾಶೀನಗರದಲ್ಲಿ ಶಾಂತಿಸ್ಥಾಪನೆಯಾಯಿತು, ಎಂಬ ವಾರ್ತೆಯು

ತಿಳಿದುಬರಲು, ಪುನಃ ಆ ಕ್ಷೇತ್ರವನ್ನು ಕುರಿತು ಪ್ರಯಾಣಮಾಡಬೇಕೆಂಬ ಇಚ್ಛೆಯುದಯಿಸಿತು. ಹೇಗೂ ಅಲ್ಲಿಗೆ ಹೋಗುವುದಾದಮೇಲೆ ಮೊದಲು ಬಂದ ಮಾರ್ಗದಲ್ಲೇ ಹೋಗೋಣವೆಂಬೊಂದು ಇಚ್ಛೆಯು ಬಾಧಿಸಲು, ಅದಕ್ಕೆ ವ್ಯತಿರಿಕ್ತವಾಗಿ ಹೋಗಲು ಅಸಾಧ್ಯತೋರಿ, ಹೊರಟು ಶೀಘ್ರವಾಗಿಯೇ ಪ್ರಯಾಣವನ್ನು ಸಾಗಿಸಿ, ತಾವು ಮೊದಲು ಶಿಶುವನ್ನು ಮರದಕೆಳಗೆ ಬಿಟ್ಟುಹೋಗಿದ್ದ ಸ್ಥಳಕ್ಕೆ ಬಂದು ಸೇರಿದರು.

ಆ ಸ್ಥಳವನ್ನು ಸೇರಿದೊಡನೆಯೇ ಅವರಿಗುಂಟಾದ ಆಶ್ಚರ್ಯಕ್ಕೆ ಪರಿಮಿತಿಯಿಲ್ಲದೆಹೋಯಿತು. ನಿರ್ಜನವಾದ ಆ ಅರಣ್ಯಪ್ರದೇಶದಲ್ಲಿ ಅಷ್ಟು ದಿನಗಳವರೆಗೆ ಯಾರು ಹೇಗೆ ಪೋಷಿಸಿದರು, ಎಂಬ ವಿಚಾರವೊಂದೂ ತಿಳಿಯದಿದ್ದರೂ, ತಮ್ಮ ಎಳೆಯ ಕಂದನು, ಹೋಮಾಗ್ನಿಗಾಗಿ ಮಾಡಿದ ಒಂದು ಗುಣಿಯ ಮಧ್ಯಭಾಗಲ್ಲಿ ಸುರಕ್ಷಿತವಾಗಿ ಆಡಿಕೊಂಡು ಮಲಗಿದ್ದುದನ್ನು ಕಂಡು ಪ್ರಾರಂಭಕ್ಕೆ ತಮ್ಮ ಕಣ್ಣುಗಳನ್ನೇ ತಾವು ನಂಬಲಾರದೆಹೋದರು. ಹಾಗೆ ಆನಂದಾಶ್ಚರ್ಯಮಗ್ನರಾಗಿ ಸ್ವಲ್ಪಹೊತ್ತು ಕಳೆದಮೇಲೆ, ತಂದೆಯು ಆ ಮಗುವನ್ನೆತ್ತಿ ತಾಯಿಯ ಕೈಯಲ್ಲಿ ಕೊಟ್ಟನು. ತರುವಾಯ, ತನ್ನ ಅನಾಥ ಶಿಶುವನ್ನು ಅಷ್ಟು ದಿನಗಳವರೆಗೆ ಸುರಕ್ಷಿತವಾಗಿಟ್ಟು-ಪುನಃ ತಮಗೆ ದೊರಕಿಸಿಕೊಟ್ಟುದಕ್ಕಾಗಿ ಅನಾಥ ಬಾಂಧವನಾದ ಶ್ರೀವರನನ್ನು ವಿವಿಧ ರೀತಿಯಿಂದ ಹೊಗಳಿ, ಶಿಶುವನ್ನೂ ಸಂಗಡ ಕರೆದುಕೊಂಡು ಹೊರಟು, ಮಾರ್ಗಕ್ರಮಣಮಾಡುತ್ತ ಕೊನೆಯಲ್ಲಿ ಕಾಶೀನಗರವನ್ನೇ ಸೇರಿದರು. ತಮ್ಮಗೊತ್ತಾದ ವಾಸಸ್ಥಳವನ್ನು ಸೇರಿದ ತರುವಾಯ ಶಿಶುವಿಗೆ ವಿಧ್ಯುಕ್ತವಾಗಿ ಜಾತಕರ್ಮ ನಾಮಕರಣಾದಿ ಸಕಲ ಕರ್ಮಗಳನ್ನೂ ನೆರವೇರಿಸಿ, ವಲ್ಲಭ ಎಂಬ ನಾಮಧೇಯದಿಂದ ಕರೆಯಲಾರಂಭಿಸಿದರು. ಮುಂದೆ ಅನೇಕ ಕಾಲಗಳಾದಮೇಲೆ ನಮ್ಮ ಚರಿತ್ರನಾಯಕನಾದ ವಲ್ಲಭಾಚಾರ್ಯನ ಅನುಯಾಯಿಗಳು, ಚಂಪಾರಣ್ಯದಲ್ಲಿನ ಆತನ ಜನನ ಸ್ಥಳದಲ್ಲಿ, ಅತ್ಯುತ್ಸಾಹಯುಕ್ತರಾಗಿ ವಿಶೇಷ ದ್ರವ್ಯ ಖರ್ಚುಮಾಡಿ, ಭವ್ಯವಾದ ಒಂದು ದೇವಾಲಯವನ್ನು ಕಟ್ಟಿಸಿದರು. ಆತನು ಜನನವಾದ ಸ್ಥಳದಲ್ಲೇ ದೇವರ ಮೂರ್ತಿಯನ್ನು ಪ್ರತಿಷ್ಠಿಸಿ, ಅದಕ್ಕೆ ನಿತ್ಯೋತ್ಸವಾದಿ ಸಮಸ್ತ ಉತ್ಸವಗಳನ್ನೂ ನಡೆಯಿಸಲು ಬೇಕಾದ ಏರ್ಪಾಡುಗಳನ್ನೂ ಮಾಡಿದ್ದಾರೆ. ಆ

ದೇವಸ್ಥಾನವು, ಈಗಲೂ ಇದೆಯಂತೆ! ನಮ್ಮ ಕಥಾನಾಯಕರ ಜನನವು ಹೀಗೆ ವಿಶೇಷ ಆಶ್ಚರ್ಯಕರವಾದ ರೀತಿಯಲ್ಲಿ, ಲಕ್ಷ್ಮಣಭಟ್ಟನ ಉದರದಲ್ಲಿ ಮತ್ತೊಬ್ಬ ಕುಮಾರನು ಜನ್ಮಿಸಿದನಂತೆ. ಆ ಮಗುವಿಗೆ ಅವರು ಕೇಶವ ನೆಂಬ ನಾಮಕರಣಮಾಡಿ, ಮೂವರು ಮಕ್ಕಳನ್ನೂ ಪ್ರೀತಿವಿಶ್ವಾಸಗಳಿಂದ ಕಾಪಾಡಿಕೊಂಡಿದ್ದರು.

ದುರಂತರ ಸಂಕಟ ಕಾಲದಲ್ಲಿ ಜನಿಸಿ ಹುಟ್ಟಿದೊಡನೆಯೇ ಅಗಾಧ ಕಷ್ಟಕ್ಕೆ ಈಡಾಗಿ ಆಶ್ಚರ್ಯಕರವಾದ ರೀತಿಯಲ್ಲಿ ರಕ್ಷಿಸಲ್ಪಟ್ಟು, ತಮ್ಮ ಕೈ ಸೇರಿದ ಆ ತಮ್ಮ ಕಂದನಮೇಲೆ ಸಂದೇಹವಿಲ್ಲದೆ ಭಗವಂತನ ಕೃಪೆಯಿರುವು ದೆಂದೂ ತನಗೆ ಆವರೆಗೆ ತಿಳಿದುಬಂದಿದ್ದ ಭವಿಷ್ಯವಾಣಿಯಂತೆ, ಆ ಬಾಲ ಕನು ಮುಂದೆ ವಿಶೇಷ ಪ್ರತಿಭಾಶಾಲಿಯಾಗಿ ಧರ್ಮಸಂಸ್ಥಾಪನೆಗಾಗಿ ಮಹಾ ಪ್ರಯತ್ನಮಾಡುವನೆಂದೂ, ತನ್ಮೂಲಕ ತಮ್ಮ ವಂಶದ ಕೀರ್ತಿಯು ಶಾಶ್ವತ ವಾಗಿ ನಿಲ್ಲುವುದೆಂದೂ ತಿಳಿದ ಆ ಮಾತಾಪಿತೃಗಳು, ಆ ಶಿಶುವನ್ನು ವಿಶೇಷ ಮಮತೆಯಿಂದ ಕಾಪಾಡಿಕೊಂಡಿದ್ದರೆಂದರೆ ಅದರಲ್ಲಿ ಆಶ್ಚರ್ಯವೇನಿದೆ?

ವಲ್ಲಭನಿಗೆ ಐದಾರು ವರ್ಷಗಳ ವಯಸ್ಸಾಯಿತು. ಲಕ್ಷ್ಮಣಭಟ್ಟನು, ಬಾಲಕನಿಗೆ ವಿಧ್ಯುಕ್ತವಾಗಿ ಅಕ್ಷರಾಭ್ಯಾಸಕರ್ಮವನ್ನು ನೆರವೇರಿಸಿ, ಯೋಗ್ಯ ಗುರುವಿನ ಬಳಿಯಲ್ಲಿ ವಿದ್ಯಾಭ್ಯಾಸಕ್ಕೆಂದು ಬಾಲಕನನ್ನು ಬಿಟ್ಟನು. ಅತಿಶಯ ಕುಶಲಮತಿಯಾದ ವಲ್ಲಭನು, ಗುರುವು ಒಂದೆರಡು ಸಾರಿ ಬೋಧಿ ಸುವುದರೊಳಗಾಗಿಯೇ ಗ್ರಹಿಸಿ, ಪುನಃ ಒಪ್ಪಿಸುತ್ತ, ತನ್ನ ಸಂಗಡಿಗರಾದ ಬಾಲಕರನ್ನೆಲ್ಲ ಮೀರಿಸಿ, ಎಲ್ಲರಿಗೂ ಆಶ್ಚರ್ಯವನ್ನುಂಟುಮಾಡಿಬಿಟ್ಟನು. ಆತನು ಬಾಲ್ಯ ವಿದ್ಯಾಭ್ಯಾಸಮಾಡಿದುದು ನಾರಾಯಣಭಟ್ಟನೆಂಬ ಗುರು ವಿನ ಬಳಿಯಲ್ಲಿ ಎಂಬ ಸಂಗತಿಮಾತ್ರ ಪ್ರಕಟವಾಗಿದೆಯಲ್ಲದೆ, ಬಾಲ್ಯ ವಿದ್ಯಾಭ್ಯಾಸವು ಆಂಧ್ರದೇಶದಲ್ಲಿ ನಡೆಯಿತೇ ಅಥವ ಕಾಶೀನಗರದಲ್ಲೇ ನಡೆಯಿತೇ ಎಂಬುದು ವ್ಯಕ್ತವಾಗಿ ಹೇಳಲ್ಪಟ್ಟಿಲ್ಲ. ವ್ರಜಭಾಷೆಯಲ್ಲಿ ವಲ್ಲಭಾಚಾರ್ಯನ ಜೀವಿತಕಾರ್ಯಗಳನ್ನು ವರ್ಣಿಸುವ ಗ್ರಂಥಗಳು ಬರೆ ಯಲ್ಪಟ್ಟಿವೆಯಂತೆ! ಅವುಗಳಲೊಂದರಲ್ಲಿ ಆತನ ವಿದ್ಯಾಭ್ಯಾಸವಿಚಾರವನ್ನು ಕುರಿತು ಪ್ರಕಟವಾಗಿರುವ ಒಂದು ಉಲ್ಲೇಖವು, ಬಹು ಆಶ್ಚರ್ಯಕರ ವಾಗಿದೆ. ಅದರಲ್ಲಿ ವಲ್ಲಭಾಚಾರ್ಯನ ಬುದ್ಧಿಶಕ್ತಿಯು ಅನುಪಮವಾಗಿದ್ದ

ತೆಂದೂ, ಆತನು ಅತ್ಯಲ್ಪಕಾಲವೆಂದರೆ ಕೇವಲ ನಾಲ್ಕು ತಿಂಗಳಕಾಲ ದಲ್ಲೇ ನಾಲ್ಕು ವೇದಗಳು, ಆರು ಶಾಸ್ತ್ರಗಳೂ, ಹದಿನೆಂಟು ಪುರಾಣಗಳು ಇವುಗಳನ್ನು ಪಾಠಮಾಡಿ ಅಗಾಧ ಪಾಂಡಿತ್ಯವನ್ನು ಸಂಪಾದಿಸಿಬಿಟ್ಟನೆಂದು ಹೇಳಲ್ಪಟ್ಟಿದೆ! ಈ ಕಥೆಯು ವಿಶೇಷವಾಗಿ ಅತಿಶಯೋಕ್ತಿಯೆಂದರೂ, ಆತನು ವಿಶೇಷ ಬುದ್ಧಿಶಾಲಿಯಾಗಿದ್ದು, ಸಂಸ್ಕೃತಭಾಷೆಯಲ್ಲಿ ಅಗಾಧ ವಿದ್ವತ್ತನ್ನು ಸಂಪಾದಿಸಿ, ಆ ಕಾಲದಲ್ಲಿ ಉಪಲಬ್ಧವಿದ್ದ, ಎಲ್ಲಾ ತತ್ವ ಗ್ರಂಥಗಳನ್ನೂ ಧರ್ಮಶಾಸ್ತ್ರಾದಿಗಳನ್ನೂ ಪಾಠಮಾಡಿ, ಈತನಿಗೆ ಇನ್ನು ಪರಿಚೋದಿಲ್ಲ, ಎಂಬಂತಹ ಪ್ರಶಂಸೆಗೆ ಪಾತ್ರನಾಗಿದ್ದ ವಿಚಾರದಲ್ಲಿ ಸಂಶಯ ವಿಲ್ಲವೆಂದು ಹೇಳಲ್ಪಟ್ಟಿದೆ.

ಇಷ್ಟು ಪ್ರತಿಭಾಸಂಪನ್ನನಾದ ವಿದ್ಯಾರ್ಥಿ ವಲ್ಲಭನು, ತನಗೆ ಹನ್ನೊಂದು ತುಂಬಿ ಹನ್ನೆರಡನೆಯ ವಯಸ್ಸು ಪ್ರಾರಂಭವಾದೊಡನೆಯೇ ತನ್ನ ತಂದೆಯನ್ನು ಕಳೆದುಕೊಂಡನು. ಮಾರನೆಯ ವರ್ಷವೇ ತನ್ನ ತಾಯಿ ಯಿಂದ ಅಪ್ಪಣೆ ಪಡೆದುಕೊಂಡು, ಮಧುರಾನಗರಿಗೆ ಸಮೀಪದಲ್ಲೇ ಯಮು ನಾತೀರದಲ್ಲಿರುವ ಗೋಕುಲವೆಂಬ ತಾವು ವಾಸವಾಗಿದ್ದ ಗ್ರಾಮವನ್ನು ಬಿಟ್ಟು, ಅಲ್ಲಿಂದ ತಮ್ಮ ಹಿರಿಯರು ಪೂರ್ವದಿಂದಲೂ ವಾಸಿಸುತ್ತಿದ್ದ ದಕ್ಷಿಣಾ ದೇಶಕ್ಕಾಗಿ ಪ್ರಯಾಣಮಾಡಿದನು.

ವಲ್ಲಭಾಚಾರ್ಯರು ಚಿಕ್ಕ ವಯಸ್ಸಿನವರಾಗಿದ್ದರೂ, ವೈಷ್ಣವ ಸಿದ್ಧಾಂತಕ್ಕೆ ಸಂಬಂಧಿಸಿದ ಸಕಲ ಶಾಸ್ತ್ರಗಳಲ್ಲೂ ವಿಶೇಷ ಪಾಂಡಿತ್ಯವನ್ನು ಸಂಪಾದಿಸಿದ್ದುದರಿಂದ, ತಮ್ಮ ಆ ಪ್ರಯಾಣದಲ್ಲಿ, ವೈಷ್ಣವ ಪಂಥವನ್ನು ಕುರಿತು ಬೋಧಿಸುತ್ತಲೂ, ಪಂಡಿತರೊಂದಿಗೆ ತರ್ಕವಾದದಲ್ಲಿ ತೊಡಗಿ, ಪ್ರತಿಪಕ್ಷವನ್ನು ತಮ್ಮ ವಿದ್ಯಾಸಾಮರ್ಥ್ಯದಿಂದ ನಿಗ್ರಹಿಸಿ ತಮ್ಮ ಪಂಥದ ಉತ್ಕೃಷ್ಟತೆಯನ್ನು ಸಮರ್ಥಿಸಿಕೊಳ್ಳುತ್ತಲೂ ಇದ್ದರು. ಮಾತ್ರವಲ್ಲ-ಹಾಗೆ ತಾವು ಗೆದ್ದ ತರುವಾಯ ಪ್ರತಿಪಕ್ಷದವನು ತಮ್ಮ ಪಂಥವನ್ನು ಅವ ಲಂಬಿಸಿ ಶಿಷ್ಯವರ್ಗಕ್ಕೆ ಸೇರುವಂತೆಯೂ ನಿಬಂಧನೆ ಮಾಡಿಕೊಳ್ಳುತ್ತಿದ್ದರು. ದಕ್ಷಿಣದೇಶವನ್ನು ಪ್ರವೇಶಿಸಿ ಮತಬೋಧನೆಗೆ ಪ್ರಾರಂಭಿಸಿದೊಡ ನೆಯೇ ಪ್ರಾರಂಭಕ್ಕೆ ಅವರ ಶಿಷ್ಯವರ್ಗಕ್ಕೆ ಸೇರಿದವನು, ದಾಮೋದರದಾಸ್ ಎಂಬಾತನು. ದಾಮೋದರದಾಸನು, ಬಹು ದೊಡ್ಡ ವರ್ತಕನೂ ಶ್ರೀಮಂ

ತನೂ ಆದೊಬ್ಬ ಸಾಹುಕಾರನ ಮಗನು. ದಾಮೋದರದಾಸನು, ಮತ್ತಾಂತರ ಹೊಂದಿದೊಡನೆಯೇ, ಆತನ ಶಿಷ್ಯವೃತ್ತಿಯನ್ನೂ ಅವಲಂಬಿಸಿ, ಅವರೊಂದಿಗೇ ಪ್ರಯಾಣ ಹೊರಟುಬಿಟ್ಟನು. ವಲ್ಲಭಾಚಾರ್ಯರು ತಮ್ಮ ಆ ಶ್ರೀಮಂತಶಿಷ್ಯನನ್ನೂ ಸಂಗಡ ಕರೆದುಕೊಂಡು, ವಿಜಯನಗರ ರಾಜಧಾನಿಗೆ ಬಂದಿಳಿದರು. ಆಗ ವಿಜಯನಗರದಲ್ಲಿ ಅವರ ಮಾತಾಮಹನೂ-ಮಾತಾಮಹಿಯೂ ವಾಸಿಸುತ್ತಿದ್ದರಂತೆ! ಆಗ ಆ ರಾಜಧಾನಿಯಲ್ಲಿ ಸುಪ್ರಸಿದ್ಧ ಕರ್ಣಾಟಕ ಸಾರ್ವಭೌಮನಾದ ಕೃಷ್ಣದೇವರಾಯನೆಂಬ ನರಾಗ್ರಣಿಯು ರಾಜ್ಯವಾಳುತ್ತಿದ್ದನು. ವಲ್ಲಭಾಚಾರ್ಯರನ್ನು ವಿದ್ವಾಂಸರು ರಾಜನಿಗೆ ಭೇಟಿಮಾಡಿಸಿ, ಪರಿಚಯಮಾಡಿಸಿದರು. ರಾಜನು ಚಿಕ್ಕವಯಸ್ಸಿನವರಾದರೂ, ವಿದ್ವಾಂಸರೂ ತೇಜಸ್ವಿಯೂ ಆದ ಆ ಸಾಧುವರ್ಯರನ್ನು ಕಂಡು ಗೌರವಿಸಿದನು.

ರಾಜಸಭೆಯಲ್ಲಿ ವಲ್ಲಭಾಚಾರ್ಯರು ತಮ್ಮ ವೈಷ್ಣವ ಸಿದ್ಧಾಂತವನ್ನು ಸಮರ್ಥಿಸಿ, ಕೇಳುವವರಿಗೆ ಕರ್ಣರಸಾಯನವಾಗಿರುವಂತೆ ಪ್ರಸಂಗಿಸಿದರು. ವಿವಿಧ ಶಾಸ್ತ್ರಗಳಲ್ಲಿ ಅವರಿಗಿದ್ದ ವಿಶೇಷವಾದ ಪಾಂಡಿತ್ಯವನ್ನೂ - ವಾಗ್ವೈಖರಿಯನ್ನೂ ಕಂಡು ಸಂತೋಷಿಸಿದ ರಾಜನು ಅವರಿಗೆ ವಿಶೇಷವಾಗಿ ಬಹುಮಾನಮಾಡಿದನು. ಈ ಸಂದರ್ಭದಲ್ಲೇ ಅದ್ವೈತವೇದಾಂತವನ್ನು ಪ್ರತಿಪಾದಿಸುವ ಪಂಡಿತರಿಗೂ ಅವರಿಗೂ - ರಾಜಸಭೆಯಲ್ಲಿ ಶಾಸ್ತ್ರಚರ್ಚೆಯೂ ನಡೆಯಿತೆಂದೂ, ಆ ಕಾಲದಲ್ಲಿ ವಲ್ಲಭಾಚಾರ್ಯರಿಂದ ಪ್ರದರ್ಶಿಸಲ್ಪಟ್ಟ ಸೂಕ್ಷ್ಮಮತಿ, ಶಾಸ್ತ್ರಜ್ಞಾನ, ಚರ್ಚಾನೈಪುಣ್ಯ, ವಾಗ್ವಿಜೃಂಭಣೆ ಮುಂತಾದುವುಗಳಿಗಾಗಿ ಮೆಚ್ಚಿಕೊಂಡ ಶ್ರೀ ಕೃಷ್ಣದೇವನರೇಂದ್ರನು, ಅವರಿಗೆ ವಿಶೇಷ ಧನಕನಕಗಳನ್ನೂ, ದಿವ್ಯವಸ್ತ್ರಾದಿಗಳನ್ನೂ ದಾನಮಾಡಿ, ಅಧಿಕವಾಗಿ ಗೌರವಿಸಿದನಂತೆ! ರಾಜನು ತಮಗೆ ಬಹುಮಾನವಾಗಿ ದಾನಮಾಡಿದ ದ್ರವ್ಯದಲ್ಲಿ ಒಂದು ಭಾಗವನ್ನು ಉಪಯೋಗಿಸಿ, ಅದೇ ವಿಜಯನಗರದಲ್ಲಿ ನೆಲೆಸಿದ್ದ ಶ್ರೀ ವಿಜಯವಿಠ್ಠಲಸ್ವಾಮಿಗೆ ದಿವ್ಯವಾದ ಒಂದು ಸುವರ್ಣಮಯ ಆಭರಣವನ್ನು ಮಾಡಿಸಿಕೊಟ್ಟರು. ಮತ್ತೊಂದು ಭಾಗವನ್ನು ತಮ್ಮ ತಂದೆಯು ಮಾಡಿ, ಆತನ ಮರಣಕಾಲದವರೆಗೂ ಇನ್ನೂ ತೀರಿಸದೆ ಬಾಕಿಯಾಗಿದ್ದ ಸಾಲವನ್ನು ತೀರಿಸಲು ಉಪಯೋಗಿಸಿದರು. ಬಹುಮಾನ

ದ್ರವ್ಯದಲ್ಲಿ ನಾಲ್ಕನೆಯ ಒಂದು ಭಾಗವನ್ನು ಮಾತ್ರ ತನ್ನ ಸ್ವಂತ ಖರ್ಚು ವೆಚ್ಚಗಳಿಗೆಂದು ಇಟ್ಟುಕೊಂಡು, ಮಿಕ್ಕುದನ್ನು ಮೇಲ್ಕಂಡಂತೆ ವಿನಿಯೋಗಿಸಿ ತಮ್ಮ ನಿಸ್ಪೃಹತೆಯನ್ನೂ ಉದಾರಭಾವವನ್ನೂ ಪ್ರಕಟಗೊಳಿಸಿದರು.

ವಿಜಯನಗರ ರಾಜಧಾನಿಯಲ್ಲಿ ಶೈವವೇದಾಂತಿಗಳೊಡನೆ ನಡೆದ ವಾಗ್ವಾದದಲ್ಲಿ ಅಸ್ಖಲಿತವಾಣಿಯಿಂದ ಸ್ವಪಕ್ಷವನ್ನು ಸಮರ್ಥಿಸಿಕೊಂಡು ವಿಜಯವನ್ನು ಸಂಪಾದಿಸಿದ ಆ ತರುಣ ಸಾಧುಶ್ರೇಷ್ಠರನ್ನು ಅಲ್ಲಿ ಆಗ ವಾಸಿಸಿದ್ದ ವೈಷ್ಣವ ಮತೀಯರೆಲ್ಲರೂ ವಿಶೇಷ ರೀತಿಯಿಂದ ಮೆಚ್ಚಿಕೊಂಡರು. ಅವರು ಪ್ರತಿಪಾದಿಸಿದ ಮತಧರ್ಮ ತತ್ವಗಳನ್ನು ಕೇಳಿ ತಮ್ಮ ಪಕ್ಷದ ಒಬ್ಬ ಪ್ರಬಲವಾದಿಯೆಂದು ಅವರನ್ನು ಆಧ್ಯಕ್ಷಸ್ಥಾನಕ್ಕೆ ಆರಿಸಿ, ಬಹು ಗೌರವಪ್ರದವಾದ ಆಚಾರ್ಯ ಎಂಬ ಬಿರುದನ್ನಿತ್ತು ಬಹುಮಾನಿಸಿದರು. ಆ ಕಾಲದಲ್ಲಿ, ದಕ್ಷಿಣ ಹಿಂದೂಸ್ಥಾನದಲ್ಲಿ ಮಾತ್ರವಲ್ಲ - ಆದ್ಯಂತ ಭಾರತದೇಶದಲ್ಲೇ ಮಹಾನಗರಿಯೆಂದೂ, ಅನೇಕಾನೇಕ ಮಂದಿ ವಿದ್ವಾಂಸರಿಗೆ ಆವಾಸಸ್ಥಾನವಾಗಿ ಸರಸ್ವತೀಪೀಠವೆಂದೂ ಹೆಸರುವಾಸಿಯನ್ನು ಹೊಂದಿದ್ದ ವಿಜಯನಗರ ರಾಜಧಾನಿಯ ಪಂಡಿತಮಂಡಲಿಯಿಂದ ಅಷ್ಟುಮಟ್ಟಿನ ಕೀರ್ತಿಪ್ರತಿಷ್ಠೆಗಳಿಗೆ ಪಾತ್ರರಾದ ಆ ಸಾಧುಶ್ರೇಷ್ಠರ ಕೀರ್ತಿಯು ಅಂದಿನಿಂದ ಚತುರ್ದಿಕ್ಕುಗಳಿಗೂ ವ್ಯಾಪಿಸಿತು. ಅವರೆಗೆ ಔಪಚಾರಿಕವಾಗಿ ವಲ್ಲಭಾಚಾರ್ಯರೆಂದು ಕರೆಯಲ್ಪಡುತ್ತಿದ್ದ ಅವರನ್ನು ಅಂದಿನಿಂದ ಸಕಲರೂ ಕೇವಲ ಪೂಜ್ಯಭಾವದಿಂದ ಹಾಗೆ ಕರೆದು ಗೌರವಿಸತೊಡಗಿದರು. ವೈಷ್ಣವಪಂಥಕ್ಕೆ ವಲ್ಲಭಾಚಾರ್ಯರು ದೊಡ್ಡದೊಂದು ಆಧಾರಸ್ತಂಭವೆಂಬ ಭಾವವು ಅನುಯಾಯಿಗಳ ಮನಸ್ಸಿನಲ್ಲಿ ದೃಢವಾಗಿ, ಆ ತಮ್ಮ ಪಂಥದಲ್ಲಿ ಶ್ರದ್ಧಾಭಕ್ತಿಗಳು ದಿನದಿನಕ್ಕೆ ಹೆಚ್ಚುತ್ತಾ ಹೋಗಲು ಅವಕಾಶವಾಯಿತು.

ತರುವಾಯ ವಲ್ಲಭಾಚಾರ್ಯರು ಕೈಕೊಂಡ ಕ್ಷೇತ್ರಯಾತ್ರಾದಿಗಳ ವರ್ಣನೆಯನ್ನು ವಿಲ್ಸನ್ ಎಂಬೊಬ್ಬ ಆಂಗ್ಲೇಯ ವಿಮರ್ಶಕನ ಲೇಖನದಿಂದತಿಳಿಯಬಹುದಾಗಿದೆ.—'ವಿಜಯನಗರದಲ್ಲಿ ಪಂಡಿತಮಂಡಲಿಯಿಂದ ವಿಶೇಷ ಗೌರವವನ್ನು ಸಂಪಾದಿಸಿ ಹೊರಟ ಶ್ರೀ ವಲ್ಲಭಾಚಾರ್ಯರು ಮುಂದೆ ಉಜ್ಜಯಿನೀ ನಗರಕ್ಕೆ ಪ್ರಯಾಣಮಾಡಿ, ಅಲ್ಲಿದ್ದ ಒಂದು ಅಶ್ವತ್ಥವೃಕ್ಷದಡಿಯ ಕಟ್ಟೆಯನ್ನು ತಮ್ಮ ವಾಸಸ್ಥಾನವನ್ನಾಗಿ ಕಲ್ಪಿಸಿಕೊಂಡರಂತೆ ! ಆ

ಅಶ್ವತ್ಥಕಟ್ಟೆಯು ತಿಪ್ರಾ ಎಂಬೊಂದು ಹೊಳೆಯ ದಡದಲ್ಲಿ ಈಗಲೂ ಇದೆಯೆಂದು ಹೇಳುತ್ತಾರೆ. ಅಲ್ಲದೆ ಆ ಕಟ್ಟೆಯನ್ನು ಆಚಾರ್ಯರ ಬೈಠಕ್ ಸ್ಥಳವೆಂದು ಈಗಲೂ ಗೌರವದಿಂದ ಕಾಣುವ ಪದ್ಧತಿಯಿದೆಯಂತೆ! ಆಚಾರ್ಯರು ಸಂಚರಿಸಿದ ಇತರ ಸ್ಥಳಗಳಲ್ಲೂ ಈ ಬಗೆಯ ಗುರುತುಗಳು ಅವರನ್ನು ಜ್ಞಾಪಿಸುತ್ತಿವೆಯೆಂದು ಮಿ.ವಿಲ್ಸನರ ಲೇಖನದಿಂದ ಹೊರಪಡುತ್ತದೆ. ಮಥುರಾನಗರಿಯ ಸಮೀಪದ ಘಾಟಗಳಲ್ಲೊಂದೆರಡು ಸ್ಥಳಗಳು ಆಚಾರ್ಯರ ಬೈಠಕುಗಳೆಂದು ಈಗಲೂ ಪ್ರಸಿದ್ಧವಾಗಿ ಭಕ್ತಾದಿಗಳ ಗೌರವಕ್ಕೆ ಪಾತ್ರವಾಗಿವೆ ಚುನಾರ್ ಕೋಟೆಗೆ ಎರಡು ಮೈಲು ದೂರದಲ್ಲೇ 'ಆಚಾರ್ಜೀಕುಂಡ' ಎಂದು ಕರೆಯಲ್ಪಟ್ಟ ಒಂದು ಬಾವಿಯುಂಟು. ಈ ಆಚಾರ್ಜೀಕುಂಡದಲ್ಲೇ ಒಂದು ಮಠವೂ ಇದ್ದು ಭಕ್ತಾದಿಗಳು ಇಳಿದುಕೊಳ್ಳಲು ಅನುಕೂಲವಾಗಿದೆ.' ಈ ಮಠದಲ್ಲೇ ಶ್ರೀ ವಲ್ಲಭಾಚಾರ್ಯರು ಕೆಲಕಾಲ ವಾಸವಾಗಿದ್ದು, ಈ ಕೊಳದ ನೀರನ್ನು ಸ್ನಾನಪಾನಾದಿಗಳಿಗೆ ಉಪಯೋಗಿಸುತ್ತಿದ್ದರೆಂದೂ, ಆದುದರಿಂದ ಅದನ್ನು ಯಾತ್ರಿಕರು ಈಗಲೂ ಪವಿತ್ರ ತೀರ್ಥವೆಂದು ಗೌರವಿಸುವ ಪದ್ಧತಿಯಿದೆಯೆಂದೂ ಪ್ರವಾದವಿದೆ?

ವಲ್ಲಭಾಚಾರ್ಯರು ಉಜ್ಜಯಿನಿಯನ್ನು ಬಿಟ್ಟು ತರುವಾಯ ಮಹಾರಾಷ್ಟ್ರ ಮತ್ತು ರಾಜಸ್ಥಾನಗಳ ಮಾರ್ಗವಾಗಿ ಉತ್ತರದೇಶ ಸಂಚಾರಕ್ಕಾಗಿ ಪ್ರಯಾಣಮಾಡಿದರು. ಅವರ ಕೀರ್ತಿಯೂ ಪಾಂಡಿತ್ಯ ಪ್ರತಿಭೆಗಳ ಮಹಿಮೆಯೂ ಅವರಿಗಿಂತಲೂ ಮುಂಚೆಯೇ ಪ್ರಕಟವಾಗಿರುತ್ತಿದ್ದುದರಿಂದ ಹೋದಹೋದಲ್ಲಿ ಅವರಿಗೆ ಗೌರವಾದರಗಳಿಗೆ ಏನೂ ಕಡಮೆಯಾಗಲಿಲ್ಲ. ಆಚಾರ್ಯರೂ, ತಾವು ಸಂಚರಿಸಿದ ಸ್ಥಳಗಳಲ್ಲೆಲ್ಲ ತಮ್ಮ ವೈಷ್ಣವ ಸಿದ್ಧಾಂತವನ್ನು ಬೋಧಿಸುತ್ತಲೂ, ಶಾಸ್ತ್ರವಾದದಲ್ಲಿ ಎದುರಾದವರನ್ನು ತಮ್ಮ ಅನುಪಮ ಪಾಂಡಿತ್ಯದಿಂದ ಬೆರಗುಗೊಳಿಸಿ, ತಮ್ಮ ಪಂಥಕ್ಕೆ ಗೆದ್ದುಕೊಳ್ಳುತ್ತಲೂ ಮುಂದರಿಸಿದರು. ಇವರಿಗೆ ಸಮಕಾಲೀನರೆಂದರೆ, ೧೪೮೬ರಿಂದ ೧೫೩೩ರವರೆಗೆ ಜೀವಿಸಿದ್ದ ವಲ್ಲಭಾಚಾರ್ಯರಂತೆ, ವೈಷ್ಣವ ಧರ್ಮಪಂಥವನ್ನೇ ವಿಶೇಷವಾಗಿ ಪ್ರಚುರಗೊಳಿಸಿದ ಬಂಗಾಳದ ಶ್ರೀ ಚೈತನ್ಯದೇವನ ಚರಿತ್ರೆಯೂ, ಅತಿ ಮಹತ್ವದ್ದಾಗಿದೆ. ಈ ಇಬ್ಬರು ಮಹನೀಯರೂ, ಆಗ ವೈಷ್ಣವ ಧರ್ಮವನ್ನು ಜನಸಾಮಾನ್ಯದಲ್ಲಿ ಪ್ರಚುರಗೊಳಿ

ಸಲು ವಿಶೇಷ ಪರಿಶ್ರಮಮಾಡಿ, ಕೀರ್ತಿಸಂಪನ್ನರಾದರು ತರುವಾಯ ವಲ್ಲಭಾಚಾರ್ಯರು ಪ್ರಯಾಗದ ಮಾರ್ಗವಾಗಿ ಕಾಶೀನಗರಕ್ಕೆ ಪ್ರಯಾಣ ಮಾಡಿ, ಅಲ್ಲಿ ಕೆಲಕಾಲ ವಾಸಮಾಡಿದರು. ಈವರೆಗೇ ವೇದಾಂತಶಾಸ್ತ್ರದಲ್ಲಿ ಅದ್ವಿತೀಯ ಪಾಂಡಿತ್ಯ ಪ್ರತಿಭೆಗಳನ್ನು ಸಂಪಾದಿಸಿದ್ದರಾದರೂ, ವಿದ್ಯೆಗೆ ಪಾರವಿಲ್ಲವೆಂಬ ತತ್ವವನ್ನರಿತ ಆ ಸಾಧುಪುಂಗವರು, ಕಾಶೀನಗರದಲ್ಲೇ ಮತ್ತು ಕೆಲವುಕಾಲ ವಾಸಿಸಿ, ಅನೇಕ ತತ್ವವಿಚಾರಗಳನ್ನು ಪಾಠಮಾಡಿದರು. ವಿದ್ವಾಂಸರೂ ಸಾಮಾನ್ಯರೂ ಅವರಲ್ಲಿದ್ದ ವಿದ್ಯಾವಿನಯಾದಿಗಳು, ಶ್ರದ್ಧಾಭಕ್ತಿಗಳು ಜ್ಞಾನವೈರಾಗ್ಯಾದಿಗಳು ಮುಂತಾದುವನ್ನು ಕಂಡು ಆಶ್ಚರ್ಯಗೊಳ್ಳುತ್ತ, ಅವರಲ್ಲಿ ಭಯಭಕ್ತಿಯಿಂದ ನಡೆದುಕೊಳ್ಳುತ್ತಿದ್ದರು.

ಹೀಗೆ ಕಾಶೀನಗರದಲ್ಲಿ ಕೆಲಕಾಲ ವಾಸಿಸಿದ ತರುವಾಯ ವಲ್ಲಭಾಚಾರ್ಯರು ಮತ್ತೊಂದು ವೇಳೆ ತೀರ್ಥಯಾತ್ರೆಗೆಂದು ಪ್ರಯಾಣ ಹೊರಟರು. ಈ ಸಾರಿಯು ಅವರ ಪ್ರಯಾಣವು ಹಿಮಾಲಯಪ್ರಾಂತದಲ್ಲಿ ಸಾಗಿತು. ಆಚಾರ್ಯರು ತಮ್ಮ ಶಿಷ್ಯರೊಂದಿಗೆ ಹಿಮಾಚಲದ ಸಾನು ಪ್ರದೇಶಗಳಲ್ಲಿಲ್ಲಿರುವ ಹರಿದ್ವಾರ ಮತ್ತು ಬದರೀಕೇದಾರವೆಂಬ ಪುರಾತನ ಪುಣ್ಯಸ್ಥಳಗಳನ್ನು ಸಂದರ್ಶಿಸಿದರು. ಹೀಗೆ ಹಿಮಾಲಯದ ವಿವಿಧಪ್ರಾಂತಗಳಲ್ಲಿ ಒಂಬತ್ತು ವರ್ಷಗಳ ಕಾಲ ಸಂಚರಿಸಿದ ತರುವಾಯ, ವಲ್ಲಭಾಚಾರ್ಯರು, ಹಿಂದಿರುಗಿ ಬೃಂದಾವನಪ್ರಾಂತಕ್ಕೆ ಬಂದು, ಮುಂದೆ ಅಲ್ಲೇ ನೆಲೆಯಾಗಿ ವಾಸವಾಗಿರಲು ಸಂಕಲ್ಪಿಸಿದರು. ಹಿಂದೆ ಅವರ ಹಿರಿಯರು, ಕೇವಲ ಯಾತ್ರಾಸ್ಥಳವೆಂದು ಸಂಚರಿಸಿದ್ದ ಬೃಂದಾವನವು ಇಂದು ಆಚಾರ್ಯರ ಮುಖ್ಯ ಕಾರ್ಯಕ್ಷೇತ್ರವಾಗಿ ಪರಿಣಮಿಸಿತು. ವಲ್ಲಭಾಚಾರ್ಯರು ಶ್ರೀಕೃಷ್ಣನ ಲೀಲಾಕ್ಷೇತ್ರವಾಗಿದ್ದು ಸುಪ್ರಸಿದ್ಧವಾದ ಆ ಬೃಂದಾವನಕ್ಷೇತ್ರದಲ್ಲಿ ಕುಳಿತು, ತಮ್ಮ ವೈಷ್ಣವಪಂಥವನ್ನೂ ಕೃಷ್ಣಭಕ್ತಿಯನ್ನೂ ಜನಸಾಮಾನ್ಯಕ್ಕೆ ಬೋಧಿಸಿ, ಧರ್ಮಪ್ರಚಾರಮಾಡಲು ನಿಶ್ಚಯಮಾಡಿದರು.



ಅಧ್ಯಾಯ ೩ 'ಗ್ರಂಥರಚನೆ - ನಿರ್ಮಾಣ'

ನಮ್ಮ ಕಥಾನಾಯಕರು, ಈ ಬೃಂದಾವನಕ್ಷೇತ್ರದಲ್ಲಿ ವಾಸಿಸಿದ್ದಾಗಲೇ, ಅವರ ಕೀರ್ತಿಚಂದ್ರಿಕೆಯನ್ನು ವಿಶೇಷವಾಗಿ ವೃದ್ಧಿಗೊಳಿಸಿದ ಮತ್ತೊಂದು ಕಾರ್ಯ ನಡೆಯಲಿಕ್ಕೂ ಒಂದು ಅವಕಾಶವುಂಟಾಯಿತು. ಈ ವೇಳೆಗೆ ಅವರ ಬಳಿ ಹಲಕೆಲವರು ಶಿಷ್ಯರು ಸೇರಿ ಅವರ ಪರಿವಾರವು ಬರುತ್ತ ಬರುತ್ತ ದೊಡ್ಡದಾಗುತ್ತಿತ್ತು. ಹೀಗಿರಲು ಒಂದುದಿನ ರಾತ್ರೆ ಶ್ರೀ ಕೃಷ್ಣಸ್ವಾಮಿಯು ಅವರಿಗೆ ಕನಸಿನಲ್ಲಿ ದರ್ಶನವಿತ್ತು, ತಾನು ಗೋವರ್ಧನಗಿರಿಯಲ್ಲಿ ದೇವದಮನ ಅಥವ ಶ್ರೀನಾಥಜೀ ಎಂಬ ಹೆಸರಿನಿಂದ ಪುನಃ ಅವತರಿಸಿರುವುದಾಗಿಯೂ, ಒಂದೆ ತಾನು ಕೃಷ್ಣಾವತಾರ ಮಾಡಿದಾಗ್ಗೆ, ತನ್ನ ಅನುಯಾಯಿಗಳಾಗಿದ್ದ ಗೋಪಗೋಪಿಕಾದಿಗಳು ಲೋಕದಲ್ಲಿ ಪುನಃ ಜನ್ಮಿಸಿರುವುದಾಗಿಯೂ, ವಲ್ಲಭಾಚಾರ್ಯರು ಒಂದುವೇಳೆ ಗೋವರ್ಧನಗಿರಿಗೆ ಬಂದು ತನ್ನ ದರ್ಶನಮಾಡಬೇಕೆಂದೂ ಅಜ್ಞಾಪಿಸಿದಂತೆ ಆಯಿತಂತೆ! ವಲ್ಲಭಾಚಾರ್ಯರು, ಆ ದೈವಾಜ್ಞೆಯನ್ನು ಕುರಿತು ವಿಶೇಷ ಸಂಭ್ರಮಗೊಂಡು, ತಮ್ಮ ಶಿಷ್ಯಪರಿವಾರದೊಂದಿಗೆ ಹೊರಟು, ಗಿರಿಯನ್ನೇರಿ, ಮೇಲೆ ಹೋಗಿ ಹುಡುಕಲು ಅಲ್ಲಿ ದೇವದಮನ ಅಥವ ಶ್ರೀನಾಥಜೀ ಎಂಬ ಹೆಸರಿನ ಶ್ರೀಕೃಷ್ಣಮೂರ್ತಿಯ ದಿವ್ಯಸುಂದರ ವಿಗ್ರಹವು ದೊರೆಯಿತು. ದಿವ್ಯಸುಂದರ ರೂಪಿನಿಂದ ನೇತ್ರಾನಂದಕರವಾಗಿದ್ದ ಆ ವಿಗ್ರಹವನ್ನು ವಲ್ಲಭಾಚಾರ್ಯರು ಅಲ್ಲೇ ಪ್ರತಿಷ್ಠಿಸಬೇಕೆಂದು ಇಚ್ಛಿಸಲು, ಒಡನೆ ಭಕ್ತಾದಿಗಳು ಸೇರಿ, ಗಿರಿಯಮೇಲೆ ವಿಸ್ತಾರವಾದೊಂದು ದೇವಾಲಯವನ್ನು ಕಟ್ಟಿಸಿದರು. ಶ್ರೀ ವಲ್ಲಭಾಚಾರ್ಯರು ಹಾಗೆ ಸಿದ್ಧವಾದ ದೇವಾಲಯದಲ್ಲಿ ದೇವದಮನ ಮೂರ್ತಿಯ ವಿಗ್ರಹವನ್ನು ವಿಧ್ಯುಕ್ತರೀತಿಯಲ್ಲಿ ಪ್ರತಿಷ್ಠಿಸಿ ಮಹೋತ್ಸವಗಳನ್ನು ನಡೆಸಿದರು.

ಶ್ರೀನಾಥಜೀಯ ವಿಗ್ರಹಪ್ರತಿಷ್ಠೆಯಾದಂದಿನಿಂದ ಆ ಗೋವರ್ಧನಗಿರಿಗೊಂದು ಅತಿಶಯಮಹತ್ವವು ಪ್ರಾಪ್ತವಾದಂತಾಯಿತು. ಹತ್ತಿರದ ದೂರದ ಅನೇಕಾನೇಕ ಸ್ಥಳಗಳಿಂದ ನೂರಾರು-ಸಹಸ್ರಾರುಮಂದಿ ಸ್ತ್ರೀಪುರುಷರು ಯಾತ್ರಾರ್ಥಿಗಳಾಗಿ ಆ ದೇವಾಲಯವನ್ನು ಸಂದರ್ಶಿಸಲಾರಂಭಿ

ಸಿದರು. ವಲ್ಲಭಾಚಾರ್ಯರು, ಅಲ್ಲಿ ಪ್ರತಿಷ್ಠಿತನಾದ ದೇವದಮನ ಅಥವ ಶ್ರೀನಾಥಜೀಯ ಮೂರ್ತಿಯೇ ಶ್ರೀಕೃಷ್ಣನ ಅವತಾರಗಳಲ್ಲೊಂದೆಂದು ಪ್ರಕಟಿಸಿದರು. ಮತ್ತು ಶ್ರೀನಾಥನನ್ನು ಷೋಡಶೋಪಚಾರ ಪೂಜೆಗಳಿಂದ ಆರಾಧಿಸಿ ಸೇವಿಸುವಿಕೆಯೇ ಮನುಷ್ಯರನ್ನು ಸಂಸಾರಸಾಗರದಿಂದ ಉತ್ತರಿಸಲು ಸಾಧಕವಾಗುವುದೆಂಬ ವಾರ್ತೆಯನ್ನು ಲೋಕದಲ್ಲಿ ಪ್ರಚಾರಗೊಳಿಸಬೇಕೆಂದು ತಮಗೆ ಭಗವದಾಜ್ಞೆಯಾಗಿದೆಯೆಂದೂ ಪ್ರಕಟಗೊಳಿಸಿದರು.

ಗೋವರ್ಧನಗಿರಿಯಮೇಲೆ ಶ್ರೀನಾಥಜೀಮೂರ್ತಿಯು ಪ್ರತಿಷ್ಠೆಯಾದುದು, ಶ್ರೀ ವಲ್ಲಭಾಚಾರ್ಯರ ಅನುಯಾಯಿಗಳ ಮನಸ್ಸಿನಲ್ಲಿ ಒಂದು ವಿಶೇಷವಾದ ಪರಿಣಾಮವನ್ನುಂಟುಮಾಡಿತೆನ್ನಲು ಅಡ್ಡಿಯಿಲ್ಲ. ಮುಂದೆ ಕೆಲವುಕಾಲದೊಳಗಾಗಿ ರಾಜಸ್ಥಾನದಲ್ಲೆಲ್ಲಾ ಹಬ್ಬಿದ ಅವರ ಬೋಧನೆಗಳ ಮೂಲಕ ಅವರ ಧರ್ಮಪಂಥವು ಎಲ್ಲೆಲ್ಲೂ ವ್ಯಾಪಿಸಿತು. ಆ ಸಂದರ್ಭದಲ್ಲಿ ಈ ಗೋವರ್ಧನಗಿರಿಯೂ ಅದರಮೇಲೆ ಪ್ರತಿಷ್ಠಿಸಲ್ಪಟ್ಟ ಶ್ರೀನಾಥಜೀಯ ವಿಗ್ರಹವೂ ಅತಿ ಮುಖ್ಯವಾದ ಸ್ಥಾನಮಾನಗಳನ್ನು ಪಡೆದುವು. ರಾಜಪುತಾನದ ಧಾರ್ಮಿಕ ಪುನರುದ್ಧರಣಕ್ಕೆ ಮಾತ್ರವಲ್ಲ - ಗೋವರ್ಧನ ಗಿರಿಯಮೇಲೆ ನಡೆದ ಈ ಮೂರ್ತಿ ಪ್ರತಿಷ್ಠಾಪನೆಯು ಕಾರ್ಯವು ಆ ಪ್ರಾಂತದ ಕಲೆ ಕವಿತೆ ಶಿಲ್ಪ ಕೈಗಾರಿಕೆ ಮುಂತಾದ ಜನಾಂಗದ ಹಲವು ನಿತ್ಯೋಪಯೋಗೀ ಕಾರ್ಯಗಳಿಗೂ ಒಂದು ನವಜೀವನವನ್ನು ತಂದಿತ್ತಿತು ಡಾ. ಆನಂದಕುಮಾರಸ್ವಾಮಿ ಎಂಬೊಬ್ಬ ಕಲಾವಿದರು ಪ್ರಕಟಿಸಿರುವ ರಾಜಪುಟಾನದ ಚಿತ್ರಕಲಾ ಸಂಗ್ರಹದಲ್ಲಿ ಈ ಗೋವರ್ಧನಗಿರಿಯಮೇಲೆ ನಮ್ಮ ಕಥಾನಾಯಕರು ಪ್ರತಿಷ್ಠಿಸಿದ ಶ್ರೀನಾಥಜೀಮೂರ್ತಿಯ ಚಿತ್ರವೊಂದು ಅತಿಶಯ ಸುಂದರವಾಗಿಯೂ ಕಲಾಪೂರ್ಣವಾಗಿಯೂ ಕಂಗೊಳಿಸುತ್ತದೆ. ರಾಜಪುಟಾನದ ಧಾರ್ಮಿಕ ನೈತಿಕ ಸಾಮಾಜಿಕ ಮುಂತಾದ ನಾನಾಬಗೆಯ ಜೀವಿತದ ಪುನರುಜ್ಜೀವಿತಕ್ಕೆ ಇದು ಮೂಲಭೂತವೋ ಎಂಬಂತೆ ತೋರುವ ಈ ಮೂರ್ತಿಸ್ಥಾಪನಾಕಾರ್ಯವು ವಿಶೇಷ ಐತಿಹಾಸಿಕ ಪ್ರಾಮುಖ್ಯತೆಯನ್ನುಂಟಾಗಿದೆ. ಅವರು ಪ್ರಕಟಿಸಿರುವ ಅತಿಶಯ ಸುಂದರವಾದ ಒಂದು ಚಿತ್ರದಲ್ಲಿ, ಬೃಂದಾವನದ ನಿಮ್ನೋನ್ನತವಾದ ಸುಂದರ ಗಿರಿಗಳೂ, ಪುಷ್ಪ

ಫಲಭರಿತವಾದ ವನಉಪವನಗಳೂ ಇದ್ದು, ಅದರ ಮಧ್ಯದಲ್ಲಿ ಅಮೋಘ ಶಿಲ್ಪಕಲಾಪೂರ್ಣವಾಗಿ ನಿರ್ಮಿತವಾದೊಂದು ದೇವಾಲಯದಲ್ಲಿ ಶ್ರೀ ವಲ್ಲಭಾಚಾರ್ಯರು ಶ್ರೀನಾಥಜೀಯ ವಿಗ್ರಹವನ್ನು ಪ್ರತಿಷ್ಠೆಮಾಡುತ್ತಿರುವಂತೆ ಚಿತ್ರಿತವಾಗಿದೆ ಅದೇ ಚಿತ್ರದಲ್ಲೇ ಕೆಳಭಾಗದಲ್ಲಿ ಇಬ್ಬರು ಭಕ್ತರು ಭಕ್ತಿಭರಿತ ಚಿತ್ತವೃತ್ತಿಯಿಂದಲೂ ಮತ್ತೊಬ್ಬ ಸೇವಕನು ಸ್ವಾಮಿಗೆ ಸಮರ್ಪಿಸುವುದಕ್ಕಾಗಿ ಕೈತುಂಬ ಪುಷ್ಪಗಳನ್ನು ಹಿಡಿದೂ ನಿಂತಿರುವಂತೆ ಇದೆ. ಚಿತ್ರದ ಬಲಭಾಗದಲ್ಲಿ ಉದಯಪುರ ಸಂಸ್ಥಾನದ ಈರ್ವರು ರಾಜಪುತ್ರರು ಚಿತ್ರಿಸಲ್ಪಟ್ಟಿದ್ದಾರೆ. ಅವರಲ್ಲೊಬ್ಬನು ರಾಣಾ ರಾಜಸಿಂಗ್ ಎನ್ನಲು ಸಂದೇಹವಿಲ್ಲ; ಮತ್ತಿಬ್ಬರು ಗೋಪಿಯರೋ ಅಥವ ರಾಜಪುತ್ರಿಯರೋ ಕೈಯಲ್ಲಿ ಸ್ವಾಮಿಸೇವೆಗೆಂದು ಹಾಲು ಮೊಸರುಗಳನ್ನು ಹಿಡಿದು ನಿಂತಿದ್ದಾರೆ. ಚಿತ್ರದ ಮುಂಭಾಗದಲ್ಲಿ ಸ್ನಾನಕ್ಕಾಗಿ ನಿರ್ಮಿತವಾದ ಎರಡು ಸುಂದರವಾದ ಕೊಳಗಳೂ-ದೇವಾಲಯ ಗ್ರಾಮದ ಗುಡಿಸಲು ಮುಂತಾದವುಗಳಿಂದ ಒಟ್ಟಿನಲ್ಲಿ ಚಿತ್ರವು ನೇತ್ರಾನಂದಕರವಾಗಿದೆ ಕೊಳಗಳ ಸಮೀಪದಲ್ಲಿ ಸಾಧುಗಳಿಗೂ ಭಕ್ತಾದಿ ಯಾತ್ರಿಕರಿಗೂ ಇಳಿದುಕೊಳ್ಳಲಿಕ್ಕೋ ಎಂಬಂತೆ ಛತ್ರಗಳೂ ಮಂಟಪಗಳೂ ರಚನೆಯಾಗಿವೆ. ಇದೊಂದು ಚಿತ್ರವನ್ನು ಲಕ್ಷ್ಯಪೂರ್ವಕ ನೋಡಿದಲ್ಲಿ ಆಗಿನಕಾಲದಲ್ಲಿದ್ದ ಧಾರ್ಮಿಕ ವ್ಯವಸ್ಥೆಯೂ, ದೇವಸ್ಥಾನ ಧರ್ಮಸ್ಥಳಗಳ ವಿಷಯದಲ್ಲಿ ರಾಜಮನೆತನದವರು ತೋರಿಸುತ್ತಿದ್ದ ಭಕ್ತಿವಿಶ್ವಾಸಗಳೂ, ಪ್ರಜೆಗಳಲ್ಲಿದ್ದ ಧರ್ಮಬುದ್ಧಿಯೂ, ದೇಶದ ಸಕಲ ಸೌಭಾಗ್ಯವನ್ನೂ ದೇವರು ಮತ್ತು ಧರ್ಮಕಾರ್ಯಗಳ ಉತ್ಕರ್ಷಕ್ಕಾಗಿಯೇ ವಿನಿಯೋಗಿಸುತ್ತಿದ್ದ ಪ್ರಜೆಗಳ ಚಿತ್ತವೃತ್ತಿಯೂ - ಮಾತ್ರವಲ್ಲ ಚಿತ್ರಕಲೆ ಶಿಲ್ಪಕಲೆ ಮುಂತಾದುವುಗಳು ಪಡೆದಿದ್ದ ಔನ್ನತ್ಯವೂ ಸ್ಪಷ್ಟವಾಗಿ ಗೋಚರಿಸುವಂತಿದೆ. ಇದೇ ಚಿತ್ರದಲ್ಲೇ ಎಲ್ಲಕ್ಕಿಂತಲೂ ಎತ್ತಿಕಾಣುವ ಚಿತ್ರವೆಂದರೆ, ಭಕ್ತಿಪರವಶನಾಗಿ ಮುಚ್ಚಿದ ಕಣ್ಣುಗಳಿಂದ ಕೈಮುಗಿದುಕೊಂಡು ಧ್ಯಾನಮಗ್ನನಾಗಿರುವಂತೆ ಕಂಡುಬರುತ್ತಿರುವ ಒಬ್ಬ ಬ್ರಾಹ್ಮಣಶ್ರೇಷ್ಠನ (ಕಥಾನಾಯಕರ) ಪ್ರತಿರೂಪ. ಈ ಶ್ರೀನಾಥಜೀಸ್ವಾಮಿಯ ಪ್ರತಿಷ್ಠಾಕಾರ್ಯವು ವಿಕ್ರಮಶಕೆಯ ೧೫೭೬ ಎಂದರೆ ಕ್ರಿ. ಶ. ೧೫೨೦ರಲ್ಲಿ ನಡೆದಂತೆ ಹೇಳಲ್ಪಟ್ಟಿದೆ.

ಈ ಪ್ರತಿಷ್ಠಾಪನಾಕಾರ್ಯವು ನೆರವೇರುವುದಕ್ಕೆ ಸುಮಾರು ಹತ್ತು ಹನ್ನೆರಡು ವರ್ಷಗಳಿಗೆ ಮುಂಚಿತವಾಗಿಯೇ ವಲ್ಲಭಾಚಾರ್ಯರು ಗೃಹಸ್ಥಾಶ್ರಮ ಸ್ವೀಕಾರಮಾಡಲಿಚ್ಛಿಸಿ, ಕಾಶೀನಗರದಲ್ಲಿ ಮಹಾಲಕ್ಷ್ಮಿ ಎಂಬೊಬ್ಬ ಸುಲಕ್ಷಣ ಕನ್ಯೆಯನ್ನು ವಿವಾಹವಾಗಿದ್ದರೆಂದು ತಿಳಿಯಬರುತ್ತದೆ. ವೈಷ್ಣವ ಮತ್ತು ಶೈವ ಧಾರ್ಮಿಕ ಸುಧಾರಕರಲ್ಲಿ ಕಂಡುಬರುತ್ತಿರುವ ಒಂದು ದೊಡ್ಡ ವ್ಯತ್ಯಾಸವೆಂದರೆ ಇದೇಯೆ! ವೈಷ್ಣವ ಸುಧಾರಕರ ಕಾರ್ಯವು ಗೃಹಜೀವನದಿಂದ ಆರಂಭಿಸುತ್ತದೆ. ಮನುಷ್ಯನ ನಿತ್ಯಜೀವನವು ಸುಧಾರಿಸದಿದ್ದಲ್ಲಿ ಲೋಕಸುಧಾರಣೆ ಎಂಬಮಾತು ಕನಸಿನಗಂಟೇ ಎಂಬುದು ವೈಷ್ಣವ ಸುಧಾರಕರಿಗೆ ಚೆನ್ನಾಗಿ ಅನುಭವಕ್ಕೆ ಬಂದ ವಿಷಯವು. ಆದುದರಿಂದಲೇ ಅವರಲ್ಲಿ ಯಾರೂ ಗೃಹಸ್ಥಧರ್ಮವನ್ನು ಮಾನಸಿಕಮಾಡಲಿಲ್ಲ ಮಾತ್ರವಲ್ಲ, ಗೃಹಸ್ಥಾಶ್ರಮವೇ ಮಿಕ್ಕಮೂರು ಆಶ್ರಮಗಳಿಗೂ, ಆಧಾರಭೂತವಾದುದು ರಕ್ಷಕವಾದುದು ; ಅದೇ ಸಕಲ ವಿಧವಾದ ಲೌಕಿಕ ಪರಲೌಕಿಕ ಶ್ರೇಯಸ್ಸಂಪಾದನೆಗೂ ಮೂಲಸ್ಥಾನೀಯವಾದುದು ಎಂದು ಚೆನ್ನಾಗಿ ಮನಗಾಣುವಂತೆ ಅದರ ಉತ್ಕೃಷ್ಟತೆಯನ್ನು ಸ್ಪಷ್ಟಗೊಳಿಸಿದ್ದಾರೆ. ಮನುಷ್ಯನ ಜೀವನವು ಗೃಹಸ್ಥಾಶ್ರಮದಲ್ಲಿ ಒಂದು ನಿಯಮಬದ್ಧರೀತಿಯಲ್ಲಿ ಸಾಗಿದಲ್ಲಿ ಅವನ ಮೂಲಕ ಲೋಕದಜೀವಿತದಲ್ಲಿ ಇತರ ಆಶ್ರಮಧರ್ಮಗಳೂ ರಕ್ಷಣೆಯನ್ನು ಪಡೆಯುವುವು ಮಾತ್ರವಲ್ಲದೆ, ಲೋಕದ ಸಕಲ ವೃತ್ತಿವ್ಯವಹಾರಗಳ ಅಭಿವೃದ್ಧಿಗೂ ಗೃಹಸ್ಥಜೀವನವೇ ಆಶ್ರಯಸ್ಥಾನವೆಂಬುದನ್ನು ಹಲವು ಉದಾಹರಣೆಗಳಿಂದ ಸ್ಪಷ್ಟಗೊಳಿಸಿದ್ದಾರೆ. ತಾವು ತಮ್ಮ ೨೮-೩೦ನೆಯ ವಯಸ್ಸಿನವರೆಗೆ ಅಸ್ಖಲಿತ ಬ್ರಹ್ಮಚರ್ಯ ರಕ್ಷಣೆಯಿಂದ ವಿದ್ಯಾವ್ಯಾಸಂಗಮಾಡಿ ಅದ್ವಿತೀಯ ಪಾಂಡಿತ್ಯವನ್ನು ಸಂಪಾದಿಸಿ, ತರುವಾಯ ವಿವಾಹಿತರಾಗಿ ಗೃಹಸ್ಥಧರ್ಮದಲ್ಲಿ ವಿಧ್ಯುಕ್ತವಾಗಿ ನಡೆಯಿಸಬೇಕಾದ ಸಕಲ ಧರ್ಮಗಳನ್ನೂ ನಡೆಸುತ್ತ, ಆದರ್ಶಗೃಹಸ್ಥರೆನ್ನಿಸಿಕೊಂಡರು. ಈ ಸತ್ಪುರುಷ ದಂಪತಿಗಳ ಉದರದಲ್ಲಿ ವಿಕ್ರಮಶಕೆ ೧೫೬೭ರಲ್ಲಿ (ಕ್ರಿ. ಶ. ೧೫೧೧) ಗೋಪಿನಾಥನೆಂಬೊಬ್ಬ ಪುತ್ರನೂ, ವಿ. ಶ. ೧೫೭೨ (ಕ್ರಿ. ಶ. ೧೫೧೬) ರಲ್ಲಿ ವಿಠ್ಠಲನಾಥಜೀ ಎಂಬೊಬ್ಬ ಪುತ್ರನೂ ಜನಿಸಿದರು. ಈ ಇಬ್ಬರು ಮಕ್ಕಳಿಗೂ ವಲ್ಲಭಾಚಾರ್ಯರೇ ಕ್ರಮವಾಗಿ ಸ್ವತಃ ವಿದ್ಯಾಭ್ಯಾಸಮಾಡಿಸಿ ತಮ್ಮಂತೆಯೇ ಸಕಲ ವಿಷಯ

ಗಳಲ್ಲೂ ಸಮರ್ಥರೆನ್ನಿಸಿದರು. ಈ ಪುತ್ರರೇ ತಮ್ಮಿಂದ ಸ್ಥಾಪಿತವಾದ ಈ ವೈಷ್ಣವ ಧರ್ಮವೃಕ್ಷವನ್ನು ಪರಕೀಯರಿಂದ ಬಾಧೆಗೊಳಗಾಗದಂತೆ ರಕ್ಷಿಸ ತಕ್ಕವರೆಂಬುದನ್ನು ಪ್ರಾರಂಭದಿಂದಲೇ ಕಂಡುಹಿಡಿದು ಅವರು ತಮ್ಮನ್ನು ಹಿಂಬಾಲಿಸಲು ಶಕ್ತರಾಗುವಂತೆ ಚೆನ್ನಾಗಿ ಶಿಕ್ಷಣಕೊಟ್ಟು ಸಿದ್ಧಪಡಿಸಿದರು.

ತಮ್ಮ ಧಾರ್ಮಿಕ ಪುನರುದ್ಧರಣಕಾರ್ಯಕ್ಕೆ ಮೂಲಪೀಠವೆಂಬಂತೆ ಗೋವರ್ಧನಗಿರಿಯಲ್ಲಿ ಶ್ರೀನಾಥದೇವ ವಿಗ್ರಹವನ್ನು ಪ್ರತಿಷ್ಠೆಮಾಡಿದ ತರುವಾಯ, ಶ್ರೀವಲ್ಲಭಾಚಾರ್ಯರು ವರ್ಷದ ತಮ್ಮ ಕಾಲದಲ್ಲಿ ಕೆಲವುಭಾಗ ವನ್ನು ಕಾಶಿಯಲ್ಲೂ ಮತ್ತೆ ಕೆಲವುಭಾಗವನ್ನು ಬೃಂದಾವನದಲ್ಲೂ ಇದ್ದು ಕಳೆಯುತ್ತ ಬಂದರು. ಪ್ರಾರಂಭಕ್ಕೆ, ಕೇವಲ ಶೈವಧರ್ಮ ಪ್ರಾಚುರ್ಯಕ್ಕೆ ಮೂಲಪೀಠವಾದ ಕಾಶೀನಗರದಲ್ಲಿ ನಮ್ಮ ಕಥಾನಾಯಕರ ವೈಷ್ಣವಧರ್ಮ ಪ್ರಚಾರಕ್ಕೆ ಲೇಶಮಾತ್ರವೂ ಉತ್ತೇಜನ ಸಿಕ್ಕಲಿಲ್ಲವೆಂದರೆ ಅದರಲ್ಲಿ ಅತಿ ಶಯವಿಲ್ಲ. ಆದರೆ ವಲ್ಲಭಾಚಾರ್ಯರು ಆ ನಗರಿಯ ಶೈವಪಂಡಿತರ ಪಾಂ ಡಿತ್ಯಕ್ಕೆ ಲೇಶಮಾತ್ರವೂ ಭೀತಿಗೊಳ್ಳಲಿಲ್ಲವೆಂಬುದು ಆಗ ನಡೆಯಿತೆಂದು ತಿಳಿಯಬರುವ ಒಂದು ಸಂಗತಿಯಿಂದ ಸ್ಪಷ್ಟವಾಗುತ್ತದೆ. ಪ್ರಾರಂಭಕ್ಕೆ ಅವರು ಆ ನಗರಿಯನ್ನು ಪ್ರವೇಶಿಸಿದಾಗ, ತಮ್ಮೊಂದಿಗೆ ವಾದಮಾಡುವವ ರಿದ್ದರೆ ಬರಲೆಂದು ಒಂದು ಸ್ಪರ್ಧೆಯನ್ನು ಹೂಡಿ, ತಮ್ಮ ಆ ಉದ್ದೇಶವನ್ನು ಅಲ್ಲಿಯ ಪಂಡಿತರಿಗೆ ತಿಳಿಯಪಡಿಸಲೋಸುಗ ದಪ್ಪ ಅಕ್ಷರಗಳಲ್ಲಿ ಆ ಊರಿನ ಗೋಡೆಗಳಮೇಲೆ ಬರೆದು ವಾದಕ್ಕೆ ಆಹ್ವಾನಿಸಿದರು. ಅವರ ಆ ಆಹ್ವಾನ ವನ್ನು ತೆಗೆದುಕೊಂಡು, ಶಂಕರಾಚಾರ್ಯರ ಸಂಪ್ರದಾಯದ ಶಿಷ್ಯರು ಅದನ್ನು ಎದುರಿಸಿ ಅವರನ್ನು ವಾದದಲ್ಲಿ ಪ್ರತಿಭಟಿಸಿದರು. ಆದರೆ ಅವರೆಲ್ಲರೂ, ವಲ್ಲ ಭಾಚಾರ್ಯರ ಪಾಂಡಿತ್ಯದಿಂದ ಜಯಿಸಲ್ಪಟ್ಟು ಅವರಿಗೆ ಜಯಪತ್ರವನ್ನು ಕೊಟ್ಟರೆಂದು ಅವರ ಜೀವಿತಚರಿತ್ರೆಯಿಂದ ವ್ಯಕ್ತಪಡುತ್ತದೆ ಈ ಬಗೆ ಯಲ್ಲಿ ಪಂಡಿತ ಸಭೆಯಲ್ಲಿ ಪಡೆದ ವಿಜಯದಿಂದ ಅವರ ಕೀರ್ತಿಪ್ರತಿಷ್ಠೆಗಳು ಹೆಚ್ಚಿದುವೆಂದು ಹೇಳಬೇಕಾದುದೇನಿದೆ! ಆದರೆ, ಅಂತಹ ಒಂದು ವಿಜಯ ದಿಂದಲೇ ಅವರು ತಮ್ಮ ಕೀರ್ತಿಯನ್ನು ಪ್ರತಿಷ್ಠಿಸಿ ರಕ್ಷಿಸಿಕೊಳ್ಳಲು ಸಾಧ್ಯ ವಿರಲಿಲ್ಲ. ಮೇಲೆಮೇಲೆ ಅವರು ಅಂತಹ ವಾದಗಳಿಗೆ ಇಳಿಯಬೇಕಾಗು ತ್ತಿತ್ತು. ಅನೇಕ ಸಂದರ್ಭಗಳಲ್ಲಿ ಅದ್ವೈತ ಪಂಥದವರೊಂದಿಗೂ, ಇತರ

ಹಲವು ಪಂಥದವರೊಂದಿಗೂ ಅವರಿಗೆ ಆಗಾಗ ವಾದಗಳು ಸಂಭವಿಸುತ್ತಲೇ ಇದ್ದುವು. ಆದರೆ, ತಮ್ಮ ಧರ್ಮಪಂಥದಲ್ಲಿ ನಿಶ್ಚಯಜ್ಞಾನವನ್ನೂ ಭಕ್ತಿ ವಿಶ್ವಾಸಗಳನ್ನೂ ಸಂಪಾದಿಸಿಕೊಂಡಿದ್ದ ಅವರು ಮತ್ತಾವುದಕ್ಕೂ ಭಯ ಪಡದೆ, ಎಲ್ಲ ಪಕ್ಷಗಳನ್ನೂ ತಮ್ಮ ಪಾಂಡಿತ್ಯ ಸಾಮರ್ಥ್ಯದಿಂದಲೂ ವಾಗ್ವಿ ಜೃಂಭಣೆಯಿಂದಲೂ, ವಾದಶಕ್ತಿಯಿಂದಲೂ ಜಯಿಸಿ ತಮ್ಮ ಸಿದ್ಧಾಂತ ವನ್ನು ದೃಢವಾದ ಅಡಿಗಲ್ಲಿನಮೇಲೆ ನಿಶ್ಚಲವಾಗಿರುವಂತೆ ಸ್ಥಾಪಿಸಿಬಿಟ್ಟರು. ಇವರ ಸಮಕಾಲೀನರಾಗಿದ್ದು, ಬಂಗಾಳಾದೇಶದಲ್ಲಿ ವೈಷ್ಣವ ಧರ್ಮವನ್ನು ಪ್ರಚಾರಗೊಳಿಸಿದ ಚೈತನ್ಯಸ್ವಾಮಿಯವರೂ ಸ್ವಲ್ಪ ಹೆಚ್ಚುಕಡಮೆ, ಅದೇ ಕಾಲದಲ್ಲೇ ಕಾಶೀನಗರಕ್ಕೆ ದಯಮಾಡಿಸಿ, ಪರೇಕ್ಷಾನಂದರೆಂಬೊಬ್ಬ ಅದ್ವೈತಿಪಂಡಿತರೊಂದಿಗೆ ವಾದನಡೆಸಿ, ಅವರನ್ನುಗೆದ್ದು, ತರುವಾಯ ಅವ ರನ್ನು ತಮ್ಮ ಪಂಥಕ್ಕೆ ಶಿಷ್ಯರನ್ನಾಗಿ ಸಂಪಾದಿಸಿದರೆಂದೂ ಪ್ರಕಟವಾಗಿದೆ ಹೀಗೆ ರಾಜಪುತ್ರಸ್ಥಾನ ಮತ್ತು ಕಾಶೀಪ್ರಾಂತಗಳಲ್ಲಿ ನಮ್ಮ ಕಥಾನಾಯಕರ- ಮತ್ತು ಬಂಗಾಳಾ ಪ್ರಾಂತ್ಯದಲ್ಲಿ ಚೈತನ್ಯರ ವಿಶೇಷ ಪರಿಶ್ರಮದಿಂದ ವೈ ಷ್ಣವ ಧರ್ಮಪಂಥವು, ಹೆಚ್ಚುರೀತಿಯಿಂದ ಹಬ್ಬಿಹರಡಲು ಅವಕಾಶ ವಾಯಿತು.

ವಲ್ಲಭಾಚಾರ್ಯರು, ಹೀಗೆ ತಾವು ಸ್ಥಾಪಿಸಿದ ಧರ್ಮಪಂಥವನ್ನು ಶಾಶ್ವತಗೊಳಿಸಲಿಕ್ಕಾಗಿ ತಮ್ಮ ಆಯುಸ್ಸಿನ ಕೊನೆಯ ಭಾಗವನ್ನು ವಿನಿಯೋ ಗಿಸಿ ಶ್ರಮಿಸಿದರು. ಅವರು ಕಾಶಿಯಲ್ಲಿ ವಾಸಿಸಿದ್ದಾಗ, ಅವರಬಳಿ ನೂರಾರು ಮಂದಿ ಶಿಷ್ಯರೂ, ಅವರ ಅನುಯಾಯಿಗಳೂ, ಕುಟುಂಬದವರೂ ಅವರನ್ನು ಹಿಂಬಾಲಿಸಿಕೊಂಡಿದ್ದರು. ವಲ್ಲಭಾಚಾರ್ಯರು ಪಂಡಿತರಾಗಿದ್ದ ತಮ್ಮ ಶಿಷ್ಯರ ಸಹಾಯದಿಂದ, ತಮ್ಮ ಧರ್ಮದ ಮುಖ್ಯಸಿದ್ಧಾಂತಗಳು, ಆಚರಣೆ, ಅವುಗಳನ್ನು ಪುಷ್ಟೀಕರಿಸುವ ಶಾಸ್ತ್ರಪ್ರಮಾಣಗಳು, ಆ ಶ್ರುತಿಸ್ಮೃತಿವಾಕ್ಯ ಗಳಿಗೆ ತಮ್ಮ ಪಂಥಕ್ಕೆ ಅನುಸಾರವಾಗಿ ತಾವು ಮಾಡಿದ ಟೀಕೆಟಿಪ್ಪಣಿಗಳು ಮುಂತಾದವುಗಳ ರಚನೆ, ಅವುಗಳನ್ನು ಶಿಷ್ಯರಿಗೆ ಬೋಧಿಸುವುದು, ಮುಂದೆ ಅದು ಅಭಿವೃದ್ಧಿಯಾಗುವಂತೆ ತಮ್ಮ ಆ ಬೋಧನೆಯನ್ನೆಲ್ಲ ಗ್ರಂಥಸ್ಥವಾಗಿ ಮಾಡುವುದು ಈ ಕಾರ್ಯಗಳಲ್ಲಿ ಸರ್ವದಾ ಮಗ್ನರಾಗಿರುತ್ತಿದ್ದರು. ದೇ ವತಾರಾಧನಕ್ರಮ, ನಿತ್ಯಕರ್ಮ ಮುಂತಾದುವುಗಳ ವಿಷಯದಲ್ಲೂ ಸಹ

ಅವರು ಸ್ಪಷ್ಟವಾದ ಹಲವು ಬೋಧನೆಗಳನ್ನು ರಚಿಸಿ ತಮ್ಮ ಪಂಥದ ಸ್ಪಷ್ಟಾಚರಣೆಯನ್ನು ಚೆನ್ನಾಗಿ ವ್ಯಕ್ತಪಡಿಸಿದ್ದಾರೆ. ಇವರ ಧರ್ಮಪಂಥವೂ ಅದರ ಆಚರಣೆಯೂ ಸ್ವಲ್ಪ ಹೆಚ್ಚುಕಡಮೆ, ಸಮಕಾಲೀನವಾದ ಬಂಗಾಳದ ಚೈತನ್ಯಪಂಥವನ್ನು ವಿಶೇಷವಾಗಿ ಹೋಲುತ್ತದೆ. ವಲ್ಲಭಾಚಾರ್ಯರು, ತಮ್ಮ ಸಿದ್ಧಾಂತವನ್ನು ತಮ್ಮ ತರುವಾಯವೂ ಶಾಶ್ವತವಾಗಿರುವಂತೆ ಸ್ಥಾಪಿಸಲಿಕ್ಕಾಗಿ ಹಲವು ಗ್ರಂಥಗಳನ್ನು ರಚಿಸಿದರು. ಅವುಗಳಲ್ಲಿ ಕೆಲವನ್ನು ಸಂಸ್ಕೃತದಲ್ಲೂ ಮತ್ತೆ ಕೆಲವನ್ನು ಆ ಪ್ರಾಂತದಲ್ಲಿ ವಿಶೇಷ ಪ್ರಚಾರದಲ್ಲಿರುವ ವ್ರಜಭಾಷೆಯಲ್ಲೂ ರಚಿಸಿದ್ದಾರೆ.

೧. **ವ್ಯಾಸಸೂತ್ರಭಾಷ್ಯ**:— ವ್ಯಾಸಮಹರ್ಷಿಗಳಿಂದ ಪ್ರೋಕ್ತವಾದ ಬ್ರಹ್ಮಸೂತ್ರವೆಂದು ಪ್ರಖ್ಯಾತವಾದ ವೇದಾಂತಸೂತ್ರಗಳಿಗೆ ನಮ್ಮಲ್ಲಿಯ ಶ್ರೀಶಂಕರಾಚಾರ್ಯ, ರಾಮಾನುಜಾಚಾರ್ಯ, ಮಧ್ವಾಚಾರ್ಯರುಗಳು ಭಾಷ್ಯಮಾಡಿ ತಮ್ಮ ತಮ್ಮ ಸಿದ್ಧಾಂತಗಳನ್ನು ಸ್ಥಾಪಿಸಿಕೊಂಡಿದ್ದಾರೆಯಷ್ಟೆ! ವಲ್ಲಭಾಚಾರ್ಯರೂ ಆ ಸೂತ್ರಗಳಿಗೆ ಭಾಷ್ಯರಚನೆ ಮಾಡಿದ್ದಾರಾದರೂ ಅವು, ನಮ್ಮಲ್ಲಿಯ ತ್ರಿಮತಾಚಾರ್ಯರ ಭಾಷ್ಯಗಳಷ್ಟು ವಿಸ್ತಾರವಾಗಿಲ್ಲವೆಂದು ಹೇಳಲ್ಪಟ್ಟಿದೆ.

೨. **ಜೈಮಿನೀ ಸೂತ್ರಭಾಷ್ಯ**:— ವ್ಯಾಸಶಿಷ್ಯರಾದ ಜೈಮಿನೀ ಮುನೀಶ್ವರರಿಂದ ವಿರಚಿತವಾದ ಪೂರ್ವಮೀಮಾಂಸಾಶಾಸ್ತ್ರಕ್ಕೆ ತಮ್ಮ ಪಂಥಾನುಸಾರವಾಗಿ ಭಾಷ್ಯರಚನೆಮಾಡಿದ್ದಾರೆ. ಈ ಭಾಷ್ಯವೂ ಸಹ ಅಷ್ಟು ವಿಸ್ತಾರವಾಗಿಲ್ಲವೆಂದು ಹೇಳಲ್ಪಟ್ಟಿದೆ.

೩. **ಭಾಗವತಟೀಕಾ ಸುಬೋಧಿನೀ**:— ಶ್ರೀಮಹಾವಿಷ್ಣು ಭಾಗವತದಲ್ಲಿ ಶ್ರೀಕೃಷ್ಣಕಥಾವಿಸ್ತಾರವನ್ನು ವರ್ಣಿಸುವ ದಶಮಸ್ಕಂಧದ ಪ್ರಾರಂಭದ ನಾಲ್ಕು ಅಧ್ಯಾಯಗಳಮೇಲೆ, ವಲ್ಲಭರು ತಮ್ಮ ವಿಶೇಷ ಪಾಂಡಿತ್ಯ ಪ್ರತಿಭೆಗಳು ಪ್ರಕಾಶಗೊಳ್ಳುವಂತೆ ಮಾಡಿರುವ ಈ ಟೀಕೆಯು ಕೃಷ್ಣಭಕ್ತಿಯನ್ನು ವಿಶೇಷ ರೀತಿಯಿಂದ ಪ್ರತಿಪಾದಿಸುತ್ತ ಭಕ್ತಾದಿಗಳಿಗೆ ಸುಧಾಪಾನ ಮಾಡಿಸುವಂತಿದೆ.

೪. **ಪುಷ್ಟಿಪ್ರವಾಹ ಮರ್ಯಾದಾ**:— ಈ ಗ್ರಂಥದಲ್ಲಿ ಆಚಾರ್ಯರು ಭಗವದನುಗ್ರಹ ಸಂಪಾದನೆಗಾಗಿ ಸಾಧಕರು ಮಾಡಬೇಕಾದ ಭಗ

ವತ್ಸೋತ್ಸವಾ ವಿಧಾನಗಳು, ಅವುಗಳ ವಿಧಿಗಳು, ಅವುಗಳನ್ನು ವಿಧಿಸುವ ಶಾಸ್ತ್ರಾಧಾರವಚನಗಳು ಮುಂತಾದುವನ್ನೆಲ್ಲ ವರ್ಣಿಸಿದ್ದಾರೆ.

೫. **ಸಿದ್ಧಾಂತರಹಸ್ಯ.**— ಈ ಗ್ರಂಥದಲ್ಲಿ ವಲ್ಲಭಾಚಾರ್ಯರು ತಮ್ಮ ಪಂಥದ ಅನುಯಾಯಿಗಳು ಅನುಸರಿಸಬೇಕಾದ ನಿತ್ಯಕರ್ಮ, ದಾನ ಧರ್ಮಪದ್ಧತಿ, ಪೂಜಾರಹಸ್ಯ, ಬ್ರಹ್ಮಚರ್ಯ-ಗೃಹಸ್ಥಾದಿ ಆಶ್ರಮಧರ್ಮಗಳ ಮುಖ್ಯಸಿದ್ಧಾಂತಗಳು ಮುಂತಾದುವನ್ನೆಲ್ಲ ಸ್ಪಷ್ಟರೀತಿಯಿಂದ ವರ್ಣಿಸಿದ್ದಾರೆ. ಈ ಐದು ಗ್ರಂಥಗಳೂ ಸಂಸ್ಕೃತಭಾಷೆಯಲ್ಲೇ ರಚಿಸಲ್ಪಟ್ಟಿವೆ. ಇವುಗಳಲ್ಲದೆ, (೧) ಅಂತಃಕರಣ ಪ್ರಬೋಧ (೨) ನವರತ್ನ (೩) ಕೃಷ್ಣಾಶ್ರಯ, (೪) ಭಕ್ತಿವರ್ಧಿನಿ (೫) ಮತ್ತು ವಿಷ್ಣುಪಾದ ಎಂಬೀ ಐದು ಗ್ರಂಥಗಳನ್ನೂ ಆ ಪ್ರಾಂತದ ಪ್ರಜೆಗಳ ನಿತ್ಯವ್ಯವಹಾರದ ವ್ರಜಭಾಷೆಯ ಲ್ಲಿ ರಚಿಸಿದ್ದಾರೆ.

ಮತಧರ್ಮ ಸಿದ್ಧಾಂತಗಳನ್ನು ಸ್ಥಿರಗೊಳಿಸುವುದಕ್ಕಾಗಿ ಮತಸ್ಥಾಪಕರು ಗ್ರಂಥರಚನೆ ಮಾಡಬೇಕಾದುದು ಎಷ್ಟು ಆವಶ್ಯಕವೋ, ಆ ಗ್ರಂಥಗಳ ಸ್ಪಷ್ಟಾರ್ಥಗಳೂ ಗ್ರಂಥಕರ್ತರ ಮುಖ್ಯಾಶಯಗಳೂ, ಜನಸಮಾಜಕ್ಕೆ ನಿಸ್ಸಂಶಯವಾಗಿ ಬೋಧವಾಗುವಂತೆ ಸ್ಪಷ್ಟಗೊಳಿಸುವುದೂ ಅಷ್ಟೇ ಆವಶ್ಯಕವಾಗಿದೆ. ಅತಿಮುಖ್ಯವಾದ ಈ ಕೆಲಸವನ್ನು ಸಾಧಿಸಲು, ಆಯಾ ಸಿದ್ಧಾಂತಗಳನ್ನು ಜನಗಳ ನಿತ್ಯವ್ಯವಹಾರದ ಭಾಷೆಯಲ್ಲಿ ವಿವರಿಸುವುದೊಂದಲ್ಲದೆ ಮತ್ತಾವ ಮಾರ್ಗವೂ ಸುಲಲಿತವಾದುದಲ್ಲ. ನಮ್ಮಲ್ಲಿಯು ಆಚಾರ್ಯರುಗಳು ಮಾಡಿದ ಸಂಸ್ಕೃತ ಗ್ರಂಥರಚನೆಯ ಪ್ರಯೋಜನವನ್ನು ಕರ್ಣಾಟಕದ ವೈಷ್ಣವ ದಾಸರುಗಳೂ, ತಮಿಳುದೇಶದ ಆಳ್ವಾರರುಗಳೂ, ಶೈವಪದ್ಧತಿಯ ಸಿದ್ಧರೂ ಜಂಗಮರೂ ವಿಶೇಷರೀತಿಯಿಂದ ಜನಸಾಮಾನ್ಯಕ್ಕೆ ಮಾಡಿಕೊಟ್ಟಿದ್ದಾರೆ. ಈ ರಹಸ್ಯವನ್ನೂ ಇದರ ಆವಶ್ಯಕತೆಯನ್ನೂ ತಿಳಿದ ಶ್ರೀವಲ್ಲಭಾಚಾರ್ಯರು, ತಾವೇ ಸ್ವತಃ ದೇಶಭಾಷೆಯಲ್ಲೂ ಗ್ರಂಥರಚನೆ ಮಾಡಿ ತಮ್ಮ ಅನುಯಾಯಿಗಳಿಗೆ ಮಾರ್ಗದರ್ಶಕರಾದರು.

ವಲ್ಲಭಾಚಾರ್ಯರು ತಮ್ಮ ಪಂಥದ ಸಿದ್ಧಾಂತಗಳನ್ನು ಜನಸಮುದಾಯಕ್ಕೆ ಬೋಧಿಸಲಾರಂಭಿಸಿದಾಗಿನಿಂದ, ಒಬ್ಬೊಬ್ಬರಾಗಿ ಶಿಷ್ಯರು ಸೇರುತ್ತಾ ಬಂದು ಒಟ್ಟು ಅವರ ಶಿಷ್ಯಸಂಖ್ಯೆಯು ಎಂಭತ್ನಾಲ್ಕಕ್ಕೆ ಮುಟ್ಟಿತು.

ಈ ಎಂಭತ್ನಾಲ್ಕುಮಂದಿ ಮುಖ್ಯಶಿಷ್ಯರು ಅವರಂತೆಯೇ ಮತಪ್ರಚಾರ ಕಾರ್ಯಕ್ಕೆ ದೀಕ್ಷಾಬದ್ಧರಾಗಿ ನಿಂತರು. ವಲ್ಲಭಾಚಾರ್ಯರ ಮತ್ತು ಅವರ ಅನುಯಾಯಿಗಳಾದ ಈ 'ಚಾರೋಸಿ' (ಎಂಭತ್ನಾಲ್ಕು) ಶಿಷ್ಯರ ಚರಿತ್ರೆಯು 'ವಾರ್ತಾ' ಎಂಬ ಪಶ್ಚಿಮ ಹಿಂದೀಭಾಷೆಯಲ್ಲಿ ಬರೆಯಲ್ಪಟ್ಟ ಒಂದು ದೊಡ್ಡ ಗ್ರಂಥದಲ್ಲಿ ದೊರೆಯುತ್ತದೆ. ಈ ಚರಿತ್ರೆಗಳೆಲ್ಲವೂ, ಅಗಾಧವೂ ಸ್ಫೂರ್ತಿ ಯುಕ್ತವೂ ಆದ ಭಾಷೆಯಲ್ಲಿ ರಚಿತವಾಗಿದೆಯೆಂದು, ವಿ. ವಿಲ್ಸನ್ ಎಂ ಬೊಬ್ಬ ಆಂಗ್ಲೇಯ ವಿಮರ್ಶಕಾರನು ಹೇಳುತ್ತಾನೆ. ಚೈತನ್ಯರ ಮತ್ತು ಅವರ ಶಿಷ್ಯಪರಂಪರೆಯ ಜೀವಿತಗಳನ್ನೂ- ಅವರ ಧರ್ಮಪ್ರಚಾರ ಕಾರ್ಯ ವನ್ನೂ ವರ್ಣಿಸಿರುವ, ದಾಮೋದರ ಮತ್ತು ಕೃಷ್ಣದಾಸ್ ಎಂಬಿಬ್ಬರು ಗ್ರಂಥಕರ್ತರ ಬರೆವಣಿಗೆಗಳಂತೆ ಈ 'ವಾರ್ತಾ' ಗ್ರಂಥವು ಅಷ್ಟುಉತ್ಕೃಷ್ಟ ತರಗತಿಯದಲ್ಲವಾದರೂ, ಅದರಿಂದಲೂ ವಲ್ಲಭಾಚಾರ್ಯರ ಮತ್ತು ಅವರ ಪಂಥದವರ ಜೀವಿತವನ್ನೂ ಕಾರ್ಯಕಲಾಪಗಳನ್ನೂವಿಸ್ತಾರವಾಗಿ ತಿಳಿಯಲು ಸಂದೇಹವಿಲ್ಲ. ಇದಲ್ಲದೆ, ನಾಭಾಜೀದಾಸ್ ಎಂಬಾತನಿಂದ ಬರೆಯಲ್ಪಟ್ಟ ಹಿಂದೀ ಭಕ್ತಮಾಲಾ ಎಂಬೊಂದು ಗ್ರಂಥದಲ್ಲೂ ವಲ್ಲಭಾಚಾರ್ಯರ ಮತ್ತು ಅವರ ಪಂಥದವರ ಚರಿತ್ರೆಯು ತಕ್ಕಮಟ್ಟಿಗೆ ದೊರೆಯುತ್ತದೆ.

ಹೀಗೆ ಜಗತ್ತಿನಲ್ಲಿ ತಮ್ಮಿಂದ ಧರ್ಮಪ್ರಚಾರಕ್ಕೆ ಆಗಬೇಕಾಗಿದ್ದ ಕಾರ್ಯವನ್ನು ಸ್ವಯಂಸ್ಫೂರ್ತಿಯಿಂದ ಪ್ರಾರಂಭಿಸಿ, ಉತ್ತಮರೀತಿಯಿಂದ ನಡೆಸಿ, ನಮ್ಮ ಕಥಾನಾಯಕರು, ತಮ್ಮ ಐವತ್ತೆರಡನೆಯ ವಯಸ್ಸಿನಲ್ಲಿ ಕಾಶೀನಗರದಲ್ಲಿ ತಮ್ಮ ಜೀವಿತಕಾಲವನ್ನು ಕೊನೆಗಾಣಿಸಿದರು. ಅವರ ಅಂತ್ಯಕಾಲವನ್ನು-ಸಾಮಾನ್ಯವಾಗಿ ನಮ್ಮಲ್ಲಿ ಎಲ್ಲಾ ಮಹನೀಯರ ವಿಷಯ ದಲ್ಲೂ ಒಂದು ಅಮಾನುಷರೀತಿಯಲ್ಲಿ ಹೇಳುವ ಪದ್ಧತಿಯಿರುವಂತೆಯೇ, ಒಂದು ವಿಚಿತ್ರರೀತಿಯಲ್ಲಿ ವರ್ಣಿಸಿರುವರು. ತಮ್ಮ ಜೀವಿತಕಾರ್ಯವು ಸಂಪೂರ್ಣ ರೀತಿಯಿಂದ ನೆರವೇರಿಸಲ್ಪಟ್ಟಿತು ಎಂದು ಅವರ ಮನಸ್ಸಿಗೆ ಬೋಧವಾದೊಡನೆಯೇ ಆ ಮಹನೀಯರು ಒಂದಾನೊಂದು ಶುಭ ದಿನದಲ್ಲಿ ಕಾಶೀನಗರದಲ್ಲಿ ಗಂಗೆಯ ಬಳಿಯಿರುವ ಹನುಮಾನ್ ಘಾಟಿನಲ್ಲಿ, ತಮ್ಮನ್ನು ಅನುಸರಿಸಿ ಬಂದಿದ್ದ ನೂರಾರುಮಂದಿ ಭಕ್ತಾದಿಗಳ ಕಣ್ಣೆದುರಿನಲ್ಲೇ ನದಿ ಯನ್ನು ಪ್ರವೇಶಿಸಿದರಂತೆ! ಅವರು ಹಾಗೆ ಇಳಿದು ಮುಳುಗಿದ ಸ್ಥಳದಿಂದ

ಒಂದು ಪ್ರಕಾಶಮಾನವಾದ ಜ್ವಾಲೆಯು ಗೋಚರವಾದುದರೊಂದಿಗೇ - ಎಲ್ಲರೂ ನೋಡುತ್ತಿದ್ದಂತೆಯೇ ಅವರು ಸ್ವರ್ಗಾಭಿಮುಖವಾಗಿ ದೇವ ಮಾರ್ಗದಿಂದ ಪ್ರಯಾಣಮಾಡಿದರಂತೆ! ಕಾಶೀನಗರದಲ್ಲಿ ಅವರ ಮಠವು ಅದ್ಯಾಪಿ ಇರುತ್ತಿರುವ ಸ್ಥಳದಲ್ಲೇ - ವಲ್ಲಭಾಚಾರ್ಯರು ತಮ್ಮ ಕೊನೆ ಗಾಲದಲ್ಲಿ ವಾಸಿಸುತ್ತಿದ್ದರೆಂದು ಹೇಳುತ್ತಾರೆ.—ಹೀಗೆ ನಮ್ಮ ಕಥಾನಾಯ ಕರು, ತಮ್ಮ ವಿದ್ವತ್ತಿನ ಅತ್ಯುತ್ತಮ ಪ್ರಯೋಜನವೋ ಎಂಬಂತೆ ಅಮೌ ಲ್ಯಗ್ರಂಥರಚನೆಮಾಡಿ, ಭಗವದ್ಭಕ್ತಿಸಾಧಕವಾದ ಒಂದು ಧರ್ಮಪಂಥ ವನ್ನೇ ಸ್ಥಾಪಿಸಿ, ತಮ್ಮ ಐವತ್ತೆರಡನೆಯ ವಯಸ್ಸಿನಲ್ಲಿ ನಿರ್ಯಾಣ ಹೊಂದಿದರು.



## ಅಧ್ಯಾಯ ೪ 'ಪಂಥದ ನಿಜತತ್ವ'

ವಲ್ಲಭಾಚಾರ್ಯರ ನಿರ್ಯಾಣಾನಂತರ ಅವರ ಗಾದಿಯನ್ನು ಏರಿ ಧರ್ಮಪ್ರಚಾರಮಾಡುವ ಕಾರ್ಯಗೌರವವು ಯಾರಪಾಲಿಗೆ ಬರಬೇಕೆಂಬ ವಿಚಾರದಲ್ಲಿ, ಅವರ ಇಬ್ಬರು ಮಕ್ಕಳಲ್ಲಿ ದೊಡ್ಡವ್ಯವಹಾರವೇ ಪ್ರಾರಂಭ ವಾಯಿತು. ಈ ವ್ಯವಹಾರದಲ್ಲಿ ಕಾಶೀನಗರದ ರಾಜನೇ ಪ್ರವೇಶಿಸಿ, ಗುರು ಗಳ ಮಕ್ಕಳಲ್ಲಿ ಹಿರಿಯನಾದ ಗೋಪೀನಾಥನೆಂಬಾತನೇ ತಂದೆಯ ಗಾದಿ ಯನ್ನೇರಲು ಯೋಗ್ಯಬಾಧ್ಯಸ್ಥನೆಂದು ತೀರ್ಮಾನಿಸಿದನು. ಆ ತೀರ್ಮಾನ ದಂತೆ ಗೋಪೀನಾಥನು ಗಾದಿಯನ್ನೇರಿದನಾದರೂ, ಆತನೂ ಮತ್ತು ಆತನ ಮಗನೂ ಮುಂದೆ ಕೆಲವುದಿನಗಳಲ್ಲೇ ಮೃತರಾದುದರಿಂದ, ಎರಡನೆಯ ಮಗನಾದ ವಿಠ್ಠಲನಾಥನೇ ವಲ್ಲಭಾಚಾರ್ಯರ ಸಮಸ್ತ ಕಾರ್ಯಭಾರ ಗಳಿಗೂ ಏಕಮಾತ್ರ ಅಧಿಕಾರಿಯಾಗಿ, ಅವರ ಗಾದಿಯನ್ನೇರಿದನು. ವಿಠ್ಠಲ ನಾಥನು, ತನ್ನ ತಂದೆಯ ಸ್ಥಾನಕ್ಕೆ ಯೋಗ್ಯನಾದ ಉತ್ತರಾಧಿಕಾರಿಯೆನ್ನಿಸಿ ಕೊಂಡು, ಶಕ್ತನಾಗಿ ತನ್ನ ಬೋಧಕಕಾರ್ಯವನ್ನು ನೆರವೇರಿಸಿ, ತಮ್ಮ ಆ ಪಂಥಕ್ಕೆ ಇನ್ನೂರಐವತ್ತೆರಡುಮಂದಿ ಅನುಯಾಯಿಗಳನ್ನು ಸಂಪಾದಿಸಿ,

ಅದನ್ನು ಪ್ರಬಲಸ್ಥಿತಿಗೆ ತಂದನು. ಧರ್ಮಪ್ರಚಾರಕಾರ್ಯಕ್ಕಾಗಿ, ಆತನು ಮಧುರಾ, ಗೋಕುಲ, ತರುವಾಯ ದ್ವಾರಕಾ ಮುಂತಾದ ಸ್ಥಳಗಳಿಗೂ, ಕಚ್, ಮಾಳವ ಮತ್ತು ಮಾವಾರ್ ಪ್ರಾಂತಗಳಿಗೂ ಸಂಚಾರಮಾಡಿ, ಹೋದಹೋದಲ್ಲೆಲ್ಲ ವಿಶೇಷ ರೀತಿಯಿಂದ ಧರ್ಮಪ್ರಚಾರಕಾರ್ಯ ನಡೆಸುತ್ತಲೂ, ಶಿಷ್ಯರನ್ನು ಸಂಪಾದಿಸುತ್ತಲೂ ಎಲ್ಲೆಲ್ಲೂ ಧರ್ಮಜಾಗೃತಿಯನ್ನು ಹುಟ್ಟಿಸಿದನು. ಉತ್ತರದೇಶದ ಆ ಪ್ರಾಂತಗಳಾದಮೇಲೆ, ದಕ್ಷಿಣದಲ್ಲಿ ಬಿಜಾಪುರ ಪಂಢರಾಪುರ ಪ್ರಾಂತಗಳಿಗೂ ಆತನು ಸಂಚಾರಮಾಡಿದನೆಂದೂ, ಆತನ ಚರಿತ್ರೆಯಿಂದ ತಿಳಿಯುಬರುತ್ತದೆ. ಮಧ್ಯರಾಜಾಸ್ಥಾನ ಮುಂತಾದ ಪ್ರಾಂತಗಳಲ್ಲಿ ಸಂಚರಿಸಿದಾಗ್ಗೆ ವಿಠ್ಠಲನಾಥನು ಅಲ್ಲಿಯ ಬನಿಯ ಎಂದರೆ ವೈಶ್ಯರು, ಛತ್ರಿಯರು, ಒಕ್ಕಲಿಗರು, ಕಮ್ಮಾರರು ಮುಂತಾದ ಹಲವುಜಾತಿಯಿಂದ ಅನೇಕರನ್ನು ತನ್ನ ಪಂಥಕ್ಕೆ ಶಿಷ್ಯರನ್ನಾಗಿ ಪರಿವರ್ತನಮಾಡಿದನೆಂದು ತಿಳಿಯಬರುತ್ತದೆ. ಕೆಲಮಂದಿ ಬ್ರಾಹ್ಮಣರೂ ಆತನ ಶಿಷ್ಯರಾಗಿ ವಲ್ಲಭಾಚಾರ್ಯಪಂಥವನ್ನು ಅಂಗೀಕರಿಸಿದರೆಂದು ಹೇಳುತ್ತಾರೆ. ಮಾತ್ರವಲ್ಲ - ಕೆಲಮಂದಿ ಮುಹಮ್ಮದೀಯರೂ ಆ ಪಂಥಕ್ಕೆ ಸೇರಿದ್ದರಂತೆ! ವಿಠ್ಠಲನಾಥನು, ತನ್ನ ಅನುಯಾಯಿಗಳಲ್ಲಿ ಉಚ್ಚನೀಚ ಎಂಬ ತಾರತಮ್ಯಕ್ಕೆ ಆಸ್ಪದವಿಲ್ಲದಂತೆ ಎಲ್ಲರಿಗೂ ಸಮಾನತೆಯನ್ನು ಬೋಧಿಸಿ - ಸಮಾನಗೌರವಾದರಗಳು ಸಿಕ್ಕಲು ಏರ್ಪಡಿಸಿದ್ದನಂತೆ!

ವಿಠ್ಠಲನಾಥನು ವಿ. ಶ. ೧೬೨೧ (ಕ್ರಿ. ಶ. ೧೫೬೪)ರಲ್ಲಿ ಯಮುನೆಯ ದಂಡೆಯಲ್ಲಿರುವ ಗೋಕುಲಕ್ಕೆ ಪ್ರಯಾಣಮಾಡಿ, ತರುವಾಯ ತನ್ನ ಜೀವಿತ ಕಾಲವನ್ನೆಲ್ಲ ಅಲ್ಲೇ ಕಳೆಯಬೇಕೆಂದು ನಿಶ್ಚೈಸಿದನು. ಆದರೆ ಮುಂದೆ ಕೆಲವು ದಿನಗಳಲ್ಲೇ ಅಲ್ಲಿಂದಹೊರಟು ಮಧುರಾನಗರಿಗೆಹೋಗಿ ಅಲ್ಲೂ ನೆಲೆಯಾಗಿ ನಿಲ್ಲದೆ, ಅಲ್ಲಲ್ಲಿ ಸಂಚರಿಸುತ್ತಲೇ ಇದ್ದನು. ಗುಜರಾತಿಗೆ ಆತನು ಆರುಬಾರಿ ಪ್ರಯಾಣಮಾಡಿದನೆಂದು ತಿಳಿಯುಬರುತ್ತದೆ. ಹೀಗೆ ಅನೇಕ ಬಾರಿ ರಾಜಸ್ಥಾನ ಮತ್ತು ಗುಜರಾತುಗಳಲ್ಲಿ ಪ್ರಯಾಣಮಾಡಿಬಂದ ತರುವಾಯ, ಕೊನೆಯಲ್ಲಿ ಗೋಕುಲದಲ್ಲೇ ತನ್ನ ನಿವಾಸಸ್ಥಾನವನ್ನೇರ್ಪಡಿಸಿಕೊಂಡು ನೆಲೆಸಿದನು. ಆದುದರಿಂದಲೇ ಆತನ ಮತ್ತು ಆತನ ಸಂತಾನದವರಿಗೆಲ್ಲ ಗೋಕುಲಗೋಸಾಯಿಜೀಗಳೆಂದೇ ಹೆಸರಾಯಿತು. ವಿಠ್ಠಲನಾಥನು

ಅನೇಕ ಟೀಕಾಗ್ರಂಥಗಳನ್ನು ರಚಿಸಿದ್ದಾನೆ. ವಿದ್ವನ್ಮಂಡನವೆಂಬೊಂದು ಗ್ರಂಥದಲ್ಲಿ ಆತನು ಶಂಕರಾಚಾರ್ಯರ ಅದ್ವೈತ ತತ್ವಗಳನ್ನು ಖಂಡಿಸಿ ಬರೆದಿದ್ದಾನೆಯಂತೆ! ಆತನು ಎಪ್ಪತ್ತು ವರ್ಷಗಳ ವೃದ್ಧಾಪ್ಯದವರೆಗೆ ಜೀವಿಸಿದ್ದು ಆತನ ಪೂಜ್ಯಪಿತೃವು ಶ್ರೀನಾಥಜೀವಿಗ್ರಹವನ್ನು ಸ್ಥಾಪಿಸಿದ್ದ ಗೋವರ್ಧನ ಗಿರಿಯಲ್ಲೇ ಪರಂಧಾಮವನ್ನು ಹೊಂದಿದನು.

ವಿಠ್ಠಲನಾಥನ ಮರಣಾನಂತರ ವಲ್ಲಭಾಚಾರ್ಯ ಪಂಥವು ಮತ್ತೂ ಹೆಚ್ಚು ವಿಸ್ತಾರವಾಗಿ ಹರಡಿತು. ಆತನ ರುಕ್ಮಿಣಿ ಮತ್ತು ಪದ್ಮಾವತಿ ಎಂಬಿಬ್ಬರು ಹೆಂಡಿರಲ್ಲಿ ಏಳುಮಂದಿ ಗಂಡುಮಕ್ಕಳೂ ನಾಲ್ಕುಮಂದಿ ಹೆಣ್ಣುಮಕ್ಕಳೂ ಹುಟ್ಟಿದ್ದರು. ಗಿರಿಧರ್‌ಜೀ, ಗೋವಿಂದರಾಯ್, ಬಾಲಕೃಷ್ಣಜೀ, ಗೋಕುಲನಾಥಜೀ, ರಘುನಾಥಜೀ, ಯದುನಾಥಜೀ, ಘನಶ್ಯಾಮಜೀ ಎಂಬೀ ಏಳುಮಂದಿ ಮಕ್ಕಳೂ ತಮ್ಮ ತಂದೆಯ ಮರಣಾನಂತರ ರಾಜಸ್ಥಾನ ಮತ್ತು ಗುಜರಾತು ಪ್ರಾಂತಗಳ ಎಲ್ಲಾ ಭಾಗದಲ್ಲೂ ವ್ಯಾಪಿಸಿ, ತಮ್ಮ ತಮ್ಮ ಸ್ವಂತ ಪೀಠಗಳನ್ನೇ ಸ್ಥಾಪಿಸಿಕೊಂಡು, ತಮ್ಮ ಪಿತಾಮಹನಿಂದ ಸ್ಥಾಪಿತವಾದ ವೈಷ್ಣವ ಪಂಥವನ್ನು ವಿಶೇಷರೀತಿಯಿಂದ ಬೋಧಿಸಿ-ಪ್ರಚಾರಗೊಳಿಸಲಾರಂಭಿಸಿದರು. ಈ ಏಳುಮಂದಿಯಲ್ಲಿ ನಾಲ್ಕನೆಯ ಗೋಕುಲನಾಥಜೀ ಎಂಬಾತನು ಮಹಾಪ್ರಸಿದ್ಧನಾಗಿ ತನ್ನ ಪಿತಾಮಹನ ಸಿದ್ಧಾಂತರಹಸ್ಯವೇ ಮುಂತಾದ ಗ್ರಂಥಗಳಮೇಲೆ ಅನೇಕ ಟೀಕೆಟಿಪ್ಪಣಿಗಳನ್ನು ಬರೆದನು. ಮಾತ್ರವಲ್ಲ ಈತನು ವಿಶೇಷ ಉತ್ಸಾಹಿಯಾಗಿದ್ದು, ಆ ಉತ್ಸಾಹದ ಭರದಲ್ಲಿ ತಮ್ಮ ಆ ಪಂಥಕ್ಕೆ ಕಳಂಕವನ್ನುಂಟುಮಾಡುವಂತಹ ಮೋಹಕ ಸ್ವರೂಪವನ್ನೂ ಕೊಟ್ಟನೆಂದು ಹೇಳುತ್ತಾರೆ. ಈತನ ಪಂಥವು ವಿಠ್ಠಲನಾಥನ ಮಿಕ್ಕಮಕ್ಕಳ ಪೀಠ-ಸಂಪ್ರದಾಯಗಳಿಂದ ಬೇರೆಯಾಯಿತಾದರೂ, ವಲ್ಲಭಾಚಾರ್ಯ ಸಂಪ್ರದಾಯದ ನಿಜವಾದ ಹಕ್ಕುದಾರರೂ, ರಕ್ಷಕರೂ ತಾವೇ ಎಂದು ಈ ಗೋಕುಲನಾಥಜೀಯ ಪೀಠದವರು ಹೇಳಿಕೊಳ್ಳುವುದುಂಟು. ಈತನು ಪ್ರಸಿದ್ಧನಾದ ಕಾಲದಲ್ಲೇ ಈ ಪಂಥದ ಗುರುಗಳನ್ನು ಮಹಾರಾಜರೆಂದು ಗೌರವಿಸುವ ಪ್ರಶಸ್ತಿಯು ಪ್ರಾಪ್ತವಾಯಿತು. ವಲ್ಲಭಾಚಾರ್ಯ ಪಂಥದವರ ಪ್ರಭಾವವು ಸಮಾಜದಮೇಲೆ ಎಷ್ಟುಮಟ್ಟಿಗಿದ್ದಿತು ಎಂಬುದು ಇದರಿಂದ ತಿಳಿಯಬಹುದು. ಮಹಾರಾಜ ಎಂಬ ಈ ಒಂದು ಬಿರುದುಮಾತ್ರವಲ್ಲ -

ಗೋಸಾಯಿ೯ ಅಥವ ಗೋಸ್ವಾಮಿ, ವಲ್ಲಭಕುಲ, ಆಚಾರ್ಯ ಗುರು, ಪ್ರಭು ಮುಂತಾದ ಇತರ ಹಲವು ಬಿರುದುಗಳೂ ಈ ಪಂಥದವರಿಗಿದ್ದುವು.

ವಿಠ್ಠಲನಾಥನ ಕಾಲದಿಂದ ಈಚೆಗೆ ಈ ಪಂಥದವರು ವಿಶೇಷವಾಗಿ ಪ್ರಬಲಿಸಿ, ಕಚ್, ಕಾಥ್ಯವಾಡ, ರಾಜಾಸ್ಥಾ೯, ಮಾಳವ ಮುಂತಾದ ಪ್ರಾಂತಗಳ ಜನಸಮೂಹಕ್ಕೆಲ್ಲ ಗುರುಸ್ಥಾನೀಯರಾಗಿದ್ದಾರೆ. ಆ ಪ್ರಾಂತದ ಶ್ರೀಮಂತರಾದ ವ್ಯಾಪಾರಿಗಳೂ, ರಾಜಪಿಂಡೆಯುವರೂ ಮುಂತಾದವರೆಲ್ಲ ಈ ಪೀಠಗಳವರಿಗೆ ಶಿಷ್ಯರಾಗಿ ನಡೆದುಕೊಳ್ಳುತ್ತಾರೆ. ವಲ್ಲಭಾಚಾರ್ಯರ ಪಂಥದವರೂ ಅಲ್ಲಿಯ ಜನಸಂಖ್ಯೆಯು ಅವಶ್ಯಕತೆಗೆ ತಕ್ಕಂತೆಹೆಚ್ಚಿ, ಈಗ ಅವರದೇ ಬಹು ಧನಸಮೃದ್ಧವಾದ ಅರವತ್ತೆಪ್ಪತ್ತುಪೀಠಗಳಿದ್ದು, ಅವುಗಳನ್ನು ಅಧಿರೋಹಿಸಿದ್ದಾರೆ. ಇವರಲ್ಲಿ ಅನೇಕರಿಗೆ ಸಂಸ್ಕೃತದ ಪರಿಚಯುವಿಲ್ಲ. ಎಲ್ಲೋ ಇಬ್ಬರು ಮೂವರು ಮಾತ್ರವೇ ವಿದ್ಯಾವಂತರೂ, ನಿಯಮವಂತರೂ ಆಗಿದ್ದಾರಲ್ಲದೆ ಮಿಕ್ಕವರು, ಬಹು ಸುಖೋಪಭೋಗದಲ್ಲಿ ಮಗ್ನರಾಗಿ - ರಾಜಭೋಗಾನುಭವಿಗಳಾಗಿದ್ದಾರೆ. - ಹದಿನೇಳು ಹದಿನೆಂಟನೇ ಶತಮಾನಗಳಲ್ಲಿ ರಾಜಾಸ್ಥಾನ ಗುಜರಾತುಗಳಲ್ಲಿ ತಮ್ಮ ಮಠಗಳನ್ನೂ ಮಂದಿರಗಳನ್ನೂ ಕಟ್ಟಿಸಿ ಪ್ರಸಿದ್ಧರಾದ ಅನೇಕ ಗೋಸ್ವಾಮಿಗಳಿದ್ದರಾದರೂ ಅವರ ವಿಚಾರವಾಗಿ ಹೆಚ್ಚುಸಂಗತಿಗಳೇನೂ ಈಚೆಗೆ ತಿಳಿಯುವಂತಿಲ್ಲ ಆದರೆ ೧೯ನೆಯ ಶತಮಾನದ ಪ್ರಾರಂಭದಲ್ಲಿ ದೇವನಾಥಜೀ ಮತ್ತು ದಾಮೋದರ್‌ಜೀ ಮಹಾರಾಜ ಎಂಬಿಬ್ಬರ ಹೆಸರುಗಳು ಮಾತ್ರ - ಟಾಡ್‌ರವರ ರಾಜಸ್ಥಾನ ಕಥಾವಳಿಗೆ ಸಂಬಂಧಿಸಿದಂತೆ ಪ್ರಕಟವಾಗಿವೆ.

ವಲ್ಲಭಾಚಾರ್ಯ ಪಂಥವು ಈಚೆಗೆ ಎಷ್ಟು ಅಭಿವೃದ್ಧಿಯಾಯಿತು ಎಂದು ಹೇಳುವುದಕ್ಕೆ ಮುಂಚೆ, ಆ ಪಂಥದ ಮುಖ್ಯಸಿದ್ಧಾಂತವೇನು ಎಂದು ತಿಳಿಯತಕ್ಕುದು ಆವಶ್ಯಕವಾಗಿದೆ. ಇದೂ ಸಹ ಬಂಗಾಳದ ಚೈತನ್ಯ ಪಂಥದಂತೆಯೇ ಶ್ರೀಕೃಷ್ಣಾವತಾರ ಸ್ವರೂಪಿಯಾದ ಶ್ರೀವಿಷ್ಣುವಿನ ಆರಾಧನೆಯನ್ನು ಪ್ರತಿಪಾದಿಸತಕ್ಕುದಾಗಿದೆ. ದಕ್ಷಿಣದೇಶದ ಶ್ರೀರಾಮಾನುಜಾಚಾರ್ಯರ ವಿಶಿಷ್ಟಾದ್ವೈತ ಸಿದ್ಧಾಂತವೇ ಈ ಪಂಥದವರ ತತ್ವಸಿದ್ಧಾಂತಗಳಿಗೆ ಅಡಿಗಲ್ಲೆನ್ನಬಹುದು. ಸಚ್ಚಿದಾನಂದ ಸ್ವರೂಪನೂ ಭಕ್ತಾಭೀಷ್ಟ ಪ್ರದಾಯಕನೂ ಸರ್ವಕಲ್ಯಾಣಗುಣ ಪರಿಪೂರ್ಣನೂ ದಿವ್ಯಸುಂದರ ವಿಗ್ರ

ಹೆನೂ ಆದ ಒಂದು ಸಗುಣಮೂರ್ತಿಯನ್ನು ಅನನ್ಯಭಕ್ತಿಭಾವದಿಂದ ಆರಾಧಿಸಿ, ಆತನ ದಯಾಸಂಪಾದನೆಮಾಡುವುದೇ ಈ ಪಂಥದ ಮುಖ್ಯಸಿದ್ಧಾಂತವೆಂದು ಹೊರಪಡುತ್ತದೆ. ಈ ಸಿದ್ಧಾಂತವನ್ನು ಪ್ರತಿಪಾದಿಸುವುದಕ್ಕಾಗಿ ವಲ್ಲಭಾಚಾರ್ಯರೂ, ಅವರ ಶಿಷ್ಯಪರಂಪರೆಯವರೂ, ಸಂತತಿಯವರೂ ರಚಿಸಿದ ಗ್ರಂಥರಾಶಿಯು ಚೈತನ್ಯಪಂಥದವರ ಗ್ರಂಥರಾಶಿಗಿಂತಲೂ ಅಧಿಕವಾಗಿದೆ. ವಲ್ಲಭಾಚಾರ್ಯರ ಪಂಥದ ಮುಖ್ಯಸಿದ್ಧಾಂತವನ್ನು ಸರ್. ಭಂಡಾರ್ಕರ್‌ಯವರು ಈ ರೀತಿ ಹೇಳುತ್ತಾರೆ.

'ವಲ್ಲಭಾಚಾರ್ಯರ ವೇದಾಂತಭಾವನೆಯು, ವಿಷ್ಣುಸ್ವಾಮಿ ಎಂಬಾತನ ಭಾವನೆಯನ್ನು ಅವಲಂಬಿಸಿದೆ. ವಿಷ್ಣುಸ್ವಾಮಿಯು ಡೆಲ್ಹಿಯ ಚಕ್ರವರ್ತಿಗೆ ಸಾಮಂತನಾಗಿದ್ದ ಒಬ್ಬ ದ್ರಾವಿಡಪ್ರಭುವಿನ ಮುಖ್ಯಸಚಿವನ ಮಗನು. ವಿಷ್ಣುಸ್ವಾಮಿಯ ತತ್ವಸಿದ್ಧಾಂತವು ಹೀಗಿದೆ. ಸಚ್ಚಿದಾನಂದ ಸ್ವರೂಪಿಯಾದ ಪರಮಾತ್ಮವಸ್ತುವು, ಕೇವಲ ಏಕಾಂಗಿಯಾಗಿದ್ದುದರಿಂದ ಸಂತಸಗೊಳ್ಳದೆ ತಾನೇ ಅನೇಕವಾಗಿ ಲೀಲೆಮಾಡಬೇಕೆಂದು ಇಚ್ಛಿಸಿ, ಅನಂತವಾಗಿ ರೂಪುಗೊಂಡು ಆ ಅನಂತರೂಪುಗಳಿಗೆಲ್ಲ, ತಾನು ಅಂತರ್ಯಾಮಿಯೂ ಚಾಲಕನೂ ಆಗಿ ಕ್ರೀಡಿಸತೊಡಗಿದನು. ಆ ಅನಂತರೂಪುಗಳೂ ಆತನಿಂದ -ಉರಿಯುವ ಬೆಂಕಿಯಿಂದ ಸಿಡಿಯುವ ಕಿಡಿಗಳಂತೆ, ಹೊರಟವು. ಅಚಿಂತ್ಯಾದ್ಭುತ ಮಹಿಮಾಶಾಲಿಯಾದ ಈ ಪರಮಪುರುಷನು, ಲೀಲಾವಿನೋದಿಯಾದ ತಾನೇ ಮಹತ್ತತ್ವವಾಗಿಯೂ, ಜೀವಾತ್ಮನಾಗಿಯೂ ಆಗಿ ಆ ಎಲ್ಲದರಲ್ಲೂ ಅಂತರ್ಯಾಮಿಯಾಗಿ ಪರಮಾತ್ಮನೆನ್ನಿಸಿಕೊಂಡೂ ಈ ಆಶ್ಚರ್ಯಕರವಾದ ವಿಚಿತ್ರಪ್ರಪಂಚದಲ್ಲಿ ಒಳಗೂ ಹೊರಗೂ ವ್ಯಾಪಿಸಿ ರಕ್ಷಕನಾಗಿಯೂ ಆನಂದದಾಯಕನಾಗಿಯೂ ಇದ್ದಾನೆ.'

ವಲ್ಲಭಾಚಾರ್ಯಪಂಥದ ಗಿರಿಧರ ಎಂಬುವರಿಂದ ರಚಿತವಾದ ಶುದ್ಧಾದ್ವೈತ ಮಾರ್ತಾಂಡ ಎಂಬ ಮತ್ತು ಬಾಲಕೃಷ್ಣಭಟ್ಟರೆಂಬುವರಿಂದ ರಚಿತವಾದ ಪ್ರಮೇಯರತ್ನಾರ್ಣವ ಎಂಬ ಈ ಎರಡು ಗ್ರಂಥಗಳಲ್ಲಿ ಆ ಪಂಥದ ಅತಿಮುಖ್ಯ ತತ್ವಗಳೇನೆಂಬುದನ್ನು ವಿಸ್ತಾರವಾಗಿ ಹೇಳಿದ್ದಾರೆ.

ಪ್ರಪಂಚಕ್ಕೆ ಆದಿಕಾರಣನು ಪರಬ್ರಹ್ಮನು. ಲೋಕದ ವಿವಿಧ ವಸ್ತುಗಳನ್ನು ಬ್ರಹ್ಮವಸ್ತುವಿನಿಂದ ಬೇರೆಯಾಗಿ ಕಾಣುವುದಕ್ಕೆ ಅಜ್ಞಾನವೇ

ಕಾರಣ. ಜೀವನು ಬ್ರಹ್ಮನ ಅಂಶಸಂಭೂತನೂ ಅಣುಸ್ವರೂಪಿಯೂ ಆಗಿ ದ್ದಾನೆ. ಅಕ್ಷರನೂ ಸಚ್ಚಿದಾನಂದ ಸ್ವರೂಪನೂ ಆದ ಮೂಲವಸ್ತು ಪರಬ್ರ ಹ್ಮನಿಂದ-ಬೆಂಕಿಯಿಂದ ಬಂದಕಿಡಿಗಳಂತೆ ಜೀವಾತ್ಮರು ಉದ್ಭವವಾಗಿದ್ದಾರೆ. ಬ್ರಹ್ಮವಸ್ತುವಿನ ಮುಖ್ಯಲಕ್ಷಣಗಳಾದ ಸತ್ ಚಿತ್ ಮತ್ತು ಆನಂದಗಳೆಂಬ ಮೂರು ಗುಣಗಳಲ್ಲಿ ಆನಂದವೆಂಬ ಗುಣವು ಮರೆಯಾಗಿದ್ದು, ಸತ್ ಮತ್ತು ಚಿತ್ ಗುಣಗಳ ಪ್ರತಿಫಲಗಳಾದ ಸ್ಥಿತಿ ಮತ್ತು ಪ್ರಜ್ಞೆಗಳನ್ನು ಜೀವಾತ್ಮ ನಲ್ಲಿ ಕಾಣಬಹುದಾಗಿದೆ. ಮಾಯೆ ಅಥವ ಮತ್ತಾವುದಾದರೊಂದು ಹೊರ ಗಿನ ಕಾರಣವಸ್ತುವಿನಿಂದ ಜೀವಾತ್ಮವು ವ್ಯಾಪ್ತವಾಗಿದೆಯೆಂದು ಭಾವಿಸು ವುದು ತಪ್ಪು. ಪರಬ್ರಹ್ಮವಸ್ತುವಿನ ಸಾಕ್ಷಾತು ಅಂಶಭೂತನಾದ ಜೀವ ನಲ್ಲಿ ಆನಂದವೆಂಬ ಒಂದು ದೈವೀಗುಣವು ಕಾಣದೆ ಮರೆಯಾಗಿದೆ ಮಾತ್ರ ವಲ್ಲದೆ, ಜೀವನಶಕ್ತಿಯನ್ನು ಮರೆಗೊಳಿಸುವ ಮತ್ತಾವ ಸಾಧನದ ಹೊದಿಕೆ ಯಾಗಲೀ ತಡೆಯಾಗಲೀ ಜೀವನಿಗೆ ಇಲ್ಲ. ಹೀಗೆ ಜೀವ ಬ್ರಹ್ಮ ಎಂಬ ಆವೆರಡು ವಸ್ತುಗಳೂ ಏಕರೂಪದಿಂದ ಇರುವಿಕೆಯನ್ನೇ ಅದ್ವೈತಸ್ಥಿತಿ ಯೆಂದು ಹೇಳುವುದು. ಆದರೆ ಒಂದರಿಂದ ಒಂದು ಬೇರೆಯಾಗಿದ್ದರೂ ಸಹ ಗುಣರೂಪ ಕ್ರಿಯಾದಿಗಳಲ್ಲಿ ವ್ಯತ್ಯಾಸವಿಲ್ಲದಂತೆ ಇರುವ ಸ್ಥಿತಿಯನ್ನು ಶುದ್ಧಾ ದ್ವೈತವೆಂದು ಹೇಳುವುದು.

ಪರಬ್ರಹ್ಮ ವಸ್ತುವಿನಿಂದ ಮೇಲ್ಕಂಡಂತೆ ಬೇರೆಯಾಗಿ ತೋರುವ ಜೀವಾತ್ಮರಲ್ಲಿ, ಬದ್ಧರು ಎಂದರೆ ಸಂಸಾರದ ಜನನಮರಣ ಪ್ರವಾಹಕ್ಕೆ ಸಿಕ್ಕಿ ದವರು ಮತ್ತು ಮುಕ್ತರು ಎಂದರೆ ಈ ದುಃಖದಿಂದ ಬಿಡಲ್ಪಟ್ಟವರು ಎಂಬ ಎರಡು ಬಗೆಯುಂಟು. ಬದ್ಧನು, ತನ್ನ ದೇಹ ಮತ್ತು ಇಂದ್ರಿಯಗಳೇ ತನ್ನ ಆತ್ಮವೆಂಬ ಭ್ರಾಂತಿಗೊಳಗಾಗಿ ಬಹುವಿಧ ಕ್ಲೇಶಕ್ಕೀಡಾಗುವನು. ಜ್ಞಾನ ಸಂಪಾದನೆಮಾಡಿ, ಲೋಕಕ್ಕೆ ಸಂಬಂಧಿಸಿದ ಈ ಸಕಲವೂ ಅಶಾಶ್ವತವೆಂದು ತಿಳಿದು ಎಂದಿಗೆ ಧ್ಯಾನ ಮತ್ತು ಭಗವದನುಗ್ರಹಸಾಧನೆ ಈ ಕಾರ್ಯಗಳಲ್ಲಿ ತನ್ನ ಚಿತ್ತವೃತ್ತಿಯನ್ನು ನೆಲೆಗೊಳಿಸುವನೋ, ಅಂದಿಗೆ ಅವನು ಈ ಸಂಸಾ ರದ ಕೋಟಲೆಯಿಂದ ಬಿಡುಗಡೆಹೊಂದಲು ಅರ್ಹನಾಗುವನು.

ಶ್ರೀಕೃಷ್ಣನೇ ಪರಬ್ರಹ್ಮವಸ್ತುವು. ಆತನಿಗೆ ಕೈಕಾಲು ಕಣ್ಣುಮೂಗು ಮುಂತಾದ ಅಂಗಗಳಿರುವುವಾದರೂ ಅವು ಈ ಪ್ರಾಕೃತವಸ್ತುಗಳಿಂದ ಆದು

ವಲ್ಲ - ಅಪ್ರಾಕೃತವಾದುವು. ದೈವಿಕವಾದುವು. ಆತನ ದೇಹವು ಸಚ್ಚಿದಾನಂದಮಯ. ಆತನು ಪುರುಷೋತ್ತಮನೆಂದು ಕರೆಯಲ್ಪಡುತ್ತಾನೆ. ಜಗತ್ತಿನ ಸಕಲ ಕಾರ್ಯಗಳೂ ಆತನ ಲೀಲೆಗಳು. ಶಂಖಚಕ್ರಗದಾಪಾಣಿಯಾದ ಆ ಸಚ್ಚಿದಾನಂದಮೂರ್ತಿಯು ತನ್ನ ಭಕ್ತರೊಂದಿಗೆ ವಿವಿಧಲೀಲೆಗಳನ್ನು ಆಡುತ್ತಾನೆ. ಆತನೇ ಈ ಜಗತ್ತಿನ ಸರ್ವಪ್ರಾಣಿಗಳ ಅಂತರ್ಯಾಮಿಯಾಗಿದ್ದಾನೆ. ಸರ್ವಾಧಾರಕನೂ ಸರ್ವರಕ್ಷಕನೂ ಆತನೇ! ಆತನೇ ಜಗತ್ಸಂರಕ್ಷಣೆಗಾಗಿ ವಿವಿಧ ಅವತಾರಗಳನ್ನೆತ್ತಿ ಬಂದಿರುವನು. ಶ್ರೀಕೃಷ್ಣನು ಶುದ್ಧ ಸತ್ವಸ್ವರೂಪದಿಂದ ಕೂಡಿ ವಿಷ್ಣುವೆಂಬ ಹೆಸರಿನಿಂದ ಜಗತ್ತಿನ ಸ್ಥಿತಿ ಅಥವ ಪಾಲನಾಕಾರ್ಯವನ್ನು ಮಾಡುವನು. ರಜೋಗುಣ ಮತ್ತು ತಮೋಗುಣ ಪ್ರಾಚುರ್ಯದಿಂದ ಬ್ರಹ್ಮ ಮತ್ತು ಶಿವ ಎಂಬ ರೂಪಗಳಿಂದ ತೋರ್ಪಟ್ಟು, ಸೃಷ್ಟಿ ಮತ್ತು ಸಂಹಾರಕಾರ್ಯಗಳನ್ನು ಮಾಡುವನು.

ಭಗವದನುಗ್ರಹವನ್ನು ಈ ಪಂಥದವರು ಪುಷ್ಟಿಯೆಂದು ಕರೆದಿದ್ದಾರೆ. ಇಹಲೋಕದ ಸಾಮಾನ್ಯಫಲ ಪ್ರಯೋಜನಗಳ ಪ್ರಾಪ್ತಿಯಾಗಲಿ, ಪರಲೋಕದ ಅಲೌಕಿಕ ಸುಖಾನುಭವವಾಗಲೀ, ಪರಮಾತ್ಮನ ಈ ಅನುಗ್ರಹಕ್ಕೆ ಅಧೀನವಾದುದು. ಮಹಾಪುಷ್ಟಿ ಅಥವ ಪರಮಾನುಗ್ರಹವು ಭಗವತ್ಪ್ರಾಪ್ತಿಗೆ ಸಹಾಯಮಾಡುತ್ತದೆಯೆಂದೂ, ಭಗವತ್ಪ್ರಾಪ್ತಿಗೆ ವಿಘ್ನಕಾರಿಗಳಾಗಿರುವ ಸಕಲ ಅಡಚಣೆಗಳನ್ನೂ ನಿವಾರಿಸಲು ಶಕ್ತವಾಗಿದೆಯೆಂದೂ ಹೇಳಲ್ಪಟ್ಟಿದೆ. ಈ ಪುಷ್ಟಿ ಅಥವ ಅನುಗ್ರಹವೇ ಚತುರ್ವಿಧ ಪುರುಷಾರ್ಥಗಳ ಸಾಧನೆಗೂ ಸಹಕಾರಿಯಾಗಿದೆ. ಈ ಬಗೆಯ ಪುಷ್ಟಿಯಿಂದ ಪ್ರೇರಿತವಾದ ಭಕ್ತಿಗೆ ಪುಷ್ಟಿಭಕ್ತಿಯೆಂದು ಹೆಸರು. ಇದರಲ್ಲಿ ಪ್ರವಾಹಪುಷ್ಟಿಭಕ್ತಿ, ಮರ್ಯಾದಪುಷ್ಟಿಭಕ್ತಿ, ಪುಷ್ಟಿಪುಷ್ಟಿಭಕ್ತಿ, ಮತ್ತು ಶುದ್ಧಪುಷ್ಟಿಭಕ್ತಿ ಎಂಬದಾಗಿ ನಾಲ್ಕುಬಗೆಗಳುಂಟೆಂದು ಹೇಳಲ್ಪಟ್ಟಿದೆ. ಪ್ರವಾಹಪುಷ್ಟಿಭಕ್ತಿಯೆಂಬುದು ಕೇವಲ ಸಾಮಾನ್ಯತರಗತಿಯದು. ಇದರಲ್ಲಿ ಮನುಷ್ಯನು ನಾನು ನನ್ನದೆಂಬ ಭಾವನೆಯನ್ನು ಬಿಡಲಾರದೆ, ಕೇವಲ ಪ್ರವಾಹರೂಪವಾಗಿ ಕಷ್ಟಸುಖಾದಿಗಳನ್ನು ಅನುಭವಿಸುತ್ತ, ಎಷ್ಟೋಕಾಲಗಳ ತರುವಾಯ ಭಗವತ್ಪ್ರಾಪ್ತಿಯನ್ನು ಹೊಂದಬಹುದು. ಮರ್ಯಾದಪುಷ್ಟಿಭಕ್ತಿಯೆಂಬುದು ಅದಕ್ಕಿಂತ ಸ್ವಲ್ಪ ಉತ್ತಮ ತರಗತಿಯದು. ಇದರಲ್ಲಿ ಭಕ್ತನು ಲೋಕದ ವಿಷಯ

ಸುಖಾದಿಗಳಿಂದ ತನ್ನ ಮನಸ್ಸನ್ನು ಬಿಡಿಸಿಕೊಂಡು, ಭಗವತ್ಕಥಾದಿಗಳ ಶ್ರವಣ, ಭಗವತ್ಪ್ರಿಯಕರವಾದ ಕಾರ್ಯಮಾಡೋಣ, ನಾಮಕೀರ್ತನೆ ಮುಂತಾದುವುಗಳಲ್ಲಿ ತೊಡಗಿರುವನು. ಮೂರನೆಯ ಪುಷ್ಟಿಪುಷ್ಟಿಭಕ್ತಿಯ ವನು ಸರ್ವದಾ ಭಗವಂತನ ಗುಣಮಹಿಮಾಚಿಂತನೆಯಲ್ಲೇ ಮಗ್ನನಾಗಿರು ತ್ತ, ಅಚಿಂತ್ಯಮಹಿಮನಾದ ಆ ದೇವದೇವನ ಗುಣವರ್ಣನೆಯಲ್ಲಿ ನಿರತ ನಾಗಿ ಸದಾಸಚ್ಚಿಂತನೆ ಸತ್ಕಾರ್ಯಾಚರಣೆಗಳಲ್ಲಿ ತೊಡಗಿರುವನು. ಇವರ ಈ ಬಗೆಯ ಸಾಧನೆಯೆಲ್ಲವೂ, ಭಗವದನುಗ್ರಹಕ್ಕೆ ವಶವಾಗಿ ಅವರು ಮಾ ಡುವ ಸಾಧನೆ - ಅಥವ ಪುರುಷಪ್ರಯತ್ನಕ್ಕೆ ಸಂಬಂಧಿಸಿರುವುದು. ಆದರೆ ನಾಲ್ಕನೆಯ ಶುದ್ಧಪುಷ್ಟಿಭಕ್ತಿಯೆಂಬುದು ಭಗವಂತನಲ್ಲಿ ಕೇವಲ ಪ್ರೇಮ ವಶನಾಗಿ ಭಕ್ತಿಮಾಡತೊಡಗುವಿಕೆ ; ಇದೇ ಅನನ್ಯ ಭಕ್ತಿಯೆನಿಸುವುದು. ಎಂದರೆ ಹೀಗೆ ಅನನ್ಯಭಾವದಿಂದ ಭಗವಚ್ಚಿಂತನೆಯಲ್ಲಿ ತೊಡಗುವವರು ಅನಪೇಕ್ಷರು, ನಿರ್ವ್ಯಾಜಭಕ್ತಿ ಮಾಡುವವರು. ಇವರಲ್ಲುಂಟಾಗುವ ಭಕ್ತಿಯು ಸ್ವಪ್ರಯತ್ನದಿಂದ ಹುಟ್ಟಿದುದಲ್ಲ. ಚೇತನರ ಸ್ವಭಾವಾನುಸಾರ ವಾಗಿ ಬೆಳೆದುಬಂದುದು. ಮೊದಲನೆಯವರದು ಪ್ರೇಮ, ಎರಡನೆಯವರದು ಆಸಕ್ತಿ, ಮೂರನೆಯವರದು ವ್ಯಸನ, ನಾಲ್ಕನೆಯವರದೇ ಅನನ್ಯಭಕ್ತಿ. -ಸರ್ವಸಮರ್ಪಣಾಭಕ್ತಿ. ಈ ನಾಲ್ಕುವಿಧವಾದ ಭಕ್ತಿಮಾಡುವವರೂ ಭಗ ವಂತನಾದ ಶ್ರೀಕೃಷ್ಣನಿಗೆ ಪ್ರೀತಿಪಾತ್ರರು. ಇವರಲ್ಲಿ ಅನನ್ಯಭಕ್ತರು, ನಾಲ್ಕುವಿಧವಾದ ಮುಕ್ತಿಯನ್ನೂ ಕೋರದೆ, ಲೀಲಾವಿನೋದಿಯಾದ ಭಗ ವಂತನೊಂದಿಗೆ ಲೀಲೆಯಲ್ಲಿ ಬೆರೆತು ದಿವ್ಯಾನಂದಮಗ್ನರಾಗುವ ಮಹತ್ಸುಖ ವನ್ನೇ ಕೋರುವರು. ಅಂಥವರಿಗೆ ಪುರುಷೋತ್ತಮನಾದ ಶ್ರೀಹರಿಯು ಅಮಿತಾನಂದವನ್ನಿತ್ತು ಕಾಪಾಡುವನು.

ವಲ್ಲಭಾಚಾರ್ಯ ಪಂಥವು ಈ ಹಿಂದೆ ಹೇಳಿಕೊಂಡು ಬಂದಂತೆ, ಸಂ ಸ್ಥಾಪಕರ ತರುವಾಯ ಅವರ ಸಂತಾನದವರಿಂದ ಗುಜರಾತು ರಾಜಸ್ಥಾನ ಮುಂತಾದ ಅನೇಕ ಪ್ರಾಂತ್ಯಗಳಲ್ಲಿ ಹಬ್ಬಿತು. ರಾಜಾಧಿರಾಜರಿಂದ ಕಡು ಬಡವನವರೆಗೂ ಎಲ್ಲರೂ ಈ ವೈಷ್ಣವಮತದ ಅನುಯಾಯಿಗಳಾದರು. ರಾಧಾಮಾಧವರ ಭಕ್ತಿಯು ಆಬಾಲವೃದ್ಧರೆನ್ನದೆ ಸರ್ವರ ಹೃದಯವನ್ನೂ ಪ್ರವೇಶಿಸಿತು. ಭಕ್ತಿಪಂಥವು ಮಿಕ್ಕ ಎಲ್ಲ ಪಂಥಗಳಿಗಿಂತಲೂ ಹೆಚ್ಚುಪ್ರ

ಶಕ್ತಿಯನ್ನು ಪಡೆಯಿತು. ದೇವರ ಹೆಸರಿನಲ್ಲಿ ಏನು ಕೊಡಬೇಕೆಂದರೆ ಜನರು ಅದಕ್ಕೆ ಸಿದ್ಧರಾದರು. ಅವರಂಗಜೇಬನು ವ್ರಜದಲ್ಲಿದ್ದ ಶ್ರೀಕೃಷ್ಣದೇವಾಲಯವನ್ನು ಅಪವಿತ್ರವಾದುದೆಂದು ತೀರ್ಮಾನಿಸಿ, ಅಲ್ಲಿ ನಡೆಯಬೇಕಾದ ಪೂಜೆಭಜನೆ ಆರಾಧನೆಗಳನ್ನು ಬಹಿಷ್ಕರಿಸಲಾಗಿ, ರಾಣಾರಾಜಸಿಂಗನು, ದೇವರನ್ನು ವ್ರಜದಿಂದ ಕೋಟಾ, ರಾಂಪುರಗಳ ಮಾರ್ಗವಾಗಿ ಮೇವಾರಿಗೆ ತರುವ ಕಾರ್ಯಕ್ಕಾಗಿ ಒಂದು ನೂರು ಸಾವಿರ - ಒಂದು ಲಕ್ಷ ಮಂದಿ ಕ್ಷತ್ರಿಯರ ತಲೆಗಳನ್ನು ಆ ಕಾರ್ಯಕ್ಕಾಗಿ ಮೀಸಲಾಗಿಟ್ಟನು. ಭಗವದ್ಭಕ್ತಿ ಸಾಧನೆಗಾಗಿ ಅವರಿಗೆ ಯಾವ ಕಷ್ಟವೂ ಲಕ್ಷ್ಯಕ್ಕೆ ಬಾರದಾಯಿತು. ಎಂತಹ ವ್ರತಗಳೂ ನಿಯಮ ಉಪವಾಸಗಳೂ ಅವರಿಗೆ ಕಷ್ಟವೆಂದು ತೋರವಾದುವು. ಭಗವತ್ಪ್ರೀತಿಗೆಂದು ಸಮರ್ಪಿಸಲು ಯಾವ ವಸ್ತುವೂ ಬೆಲೆಯುಳ್ಳದೆಂದು ಅವರಿಗೆ ಲೋಭವನ್ನುಂಟುಮಾಡಲಾರದಾಯಿತು. ರಾಜಾಧಿರಾಜರು ರತ್ನ ಕಿರೀಟಗಳು, ಕೋಟ್ಯಾಂತರ ಬೆಲೆಯುಳ್ಳ ದಿವ್ಯಾಭರಣಗಳು ಮುಂತಾದುವನ್ನೆಲ್ಲ ಸಮರ್ಪಿಸಿದರು. ರಾಜನ ಯೋಗ್ಯತೆಗೆ ತಕ್ಕಂತೆ ಅವನು ಲಕ್ಷಾಂತರ ದ್ರವ್ಯದಾನಮಾಡಿದರೆ, ಬಡ ವಿಧವೆಯೂ ತನ್ನ ಯೋಗ್ಯತಾನುಸಾರ ದಾನಮಾಡುವಳು. ಒಟ್ಟಿನಲ್ಲಿ ದೇವರಿಗೆಂದರೆ ತಿರಿದುತಿನ್ನುವ ಭಿಕ್ಷುಕನೂ ದಾನಮಾಡಬೇಕೆಂಬ ಸ್ವಾರ್ಥತ್ಯಾಗಬುದ್ಧಿಯು ಜನಗಳಲ್ಲುದಯಿಸಿತು. ಮೇವಾರ್ ಸಂಸ್ಥಾನದಲ್ಲಿ ಈ ಮಠ ಮತ್ತು ಗುರುಮಂದಿರಗಳಿಗಿರುವ ಆಸ್ತಿಯು ಇಂಗ್ಲೆಂಡಿನ ಸುಪ್ರಸಿದ್ಧ ಶ್ರೀಮಂತನ ಆಸ್ತಿಯನ್ನು ಮೀರುವಂತಿವೆ. ರಾಜಪುಟಾನದಲ್ಲಿ ಈ ಗುರುಮಂದಿರಕ್ಕೆ ಮುಕ್ತಹಸ್ತದಿಂದ ಗೋದಾನ, ಭೂದಾನ, ಹಿರಣ್ಯದಾನಾದಿಗಳನ್ನು ಶಕ್ತಿಮೀರಿ ಮಾಡದಿರುವ ಸಂಸ್ಥಾನವೇ ಇಲ್ಲವೆನ್ನಬಹುದು. ಸಂಸ್ಥಾನಿಕರು ಹುರುಪಿನಿಂದ ದಾನಮಾಡುತ್ತಿರುವುದೂ ಕಂಡುಬಂದಿದೆ ಕೋಟಾ, ಬೂಂದಿ. ಶಿವಪುರ ಮುಂತಾದ ಸಂಸ್ಥಾನಗಳ ರಾಜರು ತಮ್ಮ ಸಂಸ್ಥಾನಗಳಲ್ಲಿ ವಿಶೇಷ ಗ್ರಾಮಭೂಮಿಗಳನ್ನು ಈ ಗುರುಮಂದಿರಗಳಿಗೆ ದಾನಕೊಟ್ಟುದಲ್ಲದೆ, ತಾವೂ ದಾಸರೆಂಬಂತೆ, ದೇವಸ್ಥಾನದಲ್ಲಿ ನಡೆವ ಮೇಳಗಳಲ್ಲಿ ಎಲ್ಲರೊಂದಿಗೆ ನರ್ತನಾದಿಗಳಲ್ಲೂ ಬೆರೆಯುತ್ತಿದ್ದರಂತೆ! ವೈಷ್ಣವ ಭಕ್ತಿಪಂಥವು ಜನಮನದಮೇಲೆ ಅಷ್ಟುಮಟ್ಟಿನ ಪರಿಣಾಮವನ್ನುಂಟುಮಾಡಿತು.

ವೈಷ್ಣವ ಭಕ್ತಿಪಂಥದ ಈ ವಿಜಯವು ಎರಡುವಿಧದ ಪರಿಣಾಮಗಳನ್ನುಂಟುಮಾಡಿತೆನ್ನಬಹುದು. ಮೇಲ್ಕಂಡಂತೆ ಜನಗಳಲ್ಲಿ ಭಕ್ತಿಭಾವವು ಅಳತೆಮಿೀರಿ ಬೆಳೆದುದು, ಕೊನೆಕೊನೆಗೆ ಬಹುಪ್ರಮಾದಕರ ಫಲವನ್ನುಂಟುಮಾಡಿತು. ತತ್ವವನ್ನು ಮರೆತು ಕೇವಲ ವಿಗ್ರಹವನ್ನೇ ಸರ್ವಸ್ವವೆಂದು ಭಾವಿಸಿಮಾಡುವ ಮೂಢಭಕ್ತಿಯೊಂದು, ಎರಡನೆಯದಾಗಿ ಗುರುವನ್ನು ಪರಮವಿಧೇಯತೆಯಿಂದಲೂ ಅನನ್ಯಭಕ್ತಿಯಿಂದಲೂ ಆರಾಧಿಸುವ ಮೂಢಭಕ್ತಿಯೊಂದು. ವೈಷ್ಣವ ಪಂಥವು ಭಾರತದೇಶಕ್ಕೆ ತಂದಿತ್ತ ವರದಾನಗಳಲ್ಲಿ ಸಗುಣಮೂರ್ತಿಯ ಉಪಾಸನೆಯು ಅತಿಶಯ ಮಹತ್ವವಾದ್ದೆನ್ನಲು ಅಡ್ಡಿಯಿಲ್ಲ. ಆದರೆ ವಲ್ಲಭಾಚಾರ್ಯ ಪಂಥದವರು, ಆ ಪಂಥದ ಸ್ಥಾಪಕರ ಮಹೋದ್ದೇಶಗಳನ್ನು ಮರೆತು,-ದುರುಪಯೋಗಪಡಿಸಿಕೊಂಡು ಅಸಹ್ಯಕರವಾದ ಹಲವು ಪದ್ಧತಿಗಳನ್ನು ಆಚರಣೆಗೆ ತಂದುಕೊಂಡರು. ಅರ್ಥವಿಲ್ಲದ ಮೂರ್ತಿಪೂಜೆಯೂ, ಗುರುವಿನ ಆರಾಧನಾಕಲಾಪಗಳೂ ಅತಿಶಯವಾಗಿ ಹೆಚ್ಚಿ ಬಲು ಹೊಲಸಾದುವು. ಕೊನೆಕೊನೆಗೆ ಗುರುವಿಗೆ ತನುಮನ ಧನಗಳಾದಿಯಾಗಿ ಸಮಸ್ತವನ್ನೂ ಸಮರ್ಪಿಸಿ ಆತನ ಅನುಗ್ರಹ ಸಂಪಾದನೆ ಮಾಡುವಿಕೆಯೇ ಸಂಸಾರಬಂಧನ ನಿವೃತ್ತಿಗೆ ಸಾಧನವೆಂದು ಬೋಧಿಸುವಂತಹ ಗುರುಗಳೂ, ಆ ಬೋಧನೆಯನ್ನೇ ಅಕ್ಷರಶಃ ನಂಬಿ, ತನುಮನ ಧನಗಳನ್ನುಮಾತ್ರವಲ್ಲ - ತನ್ನ ಮಗ ಮಗಳು ಹೆಂಡತಿ ಅಕ್ಕತಂಗಿಯರು ಮುಂತಾದ ಯಾವ ವಸ್ತುವನ್ನಾದರೂ ನಿಶ್ಶಂಕೆಯಿಂದ ಒಪ್ಪಿಸುವಂತಹ ದಾಸ್ಯಚಿತ್ತವೃತ್ತಿಯ ಶಿಷ್ಯರೂ ಹೆಚ್ಚಾಗುತ್ತ ಬಂದರು. ಆಗಿನಕಾಲದಲ್ಲಿ ಈ ಬಗೆಯ ದುಷ್ಪರಿಣಾಮವು ಯಾವ ಗತಿಗೆ ಇಳಿದಿತ್ತು ಎಂಬುದನ್ನು ತೋರಿಸ್ವವಂತಹಒಂದು ಉದಾಹರಣೆಯು, ವಲ್ಲಭಾಚಾರ್ಯರು ನಿರ್ಯಾಣಹೊಂದಿದ ಸುಮಾರು ಒಂದುನೂರು ಸಂವತ್ಸರಗಳಮೇಲೆ ಎಂದರೆ ಕ್ರಿ. ಶ. ೧೬೩೦-೩೯ರ ಸುಮಾರಿನಲ್ಲಿ ರಚಿತವಾದುದೆಂದು ತಿಳಿಯಬರುವ-'ಪಾಖಂಡ ಧರ್ಮಖಂಡನ' ಎಂಬೊಂದು ಸಂಸ್ಕೃತ ನಾಟಕದಲ್ಲಿ ಹೀಗೆ ವರ್ಣಿತವಾಗಿದೆ.

'ಸೂತ್ರಧಾರನು ನಟಿಯನ್ನುಕುರಿತು ಹೇಳುತ್ತಾನೆ—'ಪ್ರಿಯೆ, ವೇದಗಳು ದಿಕ್ಕುದೆಸೆಯಿಲ್ಲದೆ ಎಲ್ಲಿಗೋ ಪಲಾಯನವಾದುವು. ಸಾಂಖ್ಯ ಯೋಗ ದರ್ಶನಗಳೂ, ಸ್ಮೃತಿಪುರಾಣಾದಿಗಳೂ ಪೃಥ್ವೀಗರ್ಭವನ್ನು ಆಶ್ರಯಿಸಿ

ಕುಳಿತುವು. ತತ್ಕಾಲದಲ್ಲಿ ನವತರುಣೀಮಣಿಯರು ಶ್ರೀವಲ್ಲಭ ವಿಠ್ಠಲೇಶ್ವರರು ಬೋಧಿಸಿರುವ ಆತ್ಮನಿವೇದನ ಧರ್ಮಾನುಸರಣೆಯೇ ಪರಮಶ್ರೇಯಸ್ಕರವಾದುದೆಂದು ನಂಬಿ ಹಾರೈಸುತ್ತಿರುವರು.'

'ಅಷ್ಟರಲ್ಲಿ ಒಬ್ಬ ವೈಷ್ಣವನು ಪ್ರವೇಶಿಸುವನು. ಕಂಠದಲ್ಲಿ ಎಳೆಯ ತುಲಸೀದಳಗಳ ಮಾಲಿಕೆ; ಕೈ, ಕಿವಿಗಳು, ಭುಜಗಳು, ತಲೆ ಎಲ್ಲಾ ಸ್ಥಳಗಳಲ್ಲೂ ತುಲಸೀಹಾರಗಳು; ಹಣೆಯಲ್ಲಿ ಗೋಪೀಚಂದನದ ಊರ್ಧ್ವಪುಂಡ್ರ ಬಾಯಲ್ಲಿ ಯಾವಾಗಲೂ ರಾಧಾ ಕೃಷ್ಣಾ ಎಂಬೆರಡು ನಾಮೋಚ್ಚಾರಣೆಗಳು. ಆತನು ವೇದಾಧ್ಯಯನ ಶೀಲರಾದ ಬ್ರಾಹ್ಮಣರನ್ನು ಅವಹೇಳನಮಾಡುತ್ತಲೂ, ಆಚಾರಶೀಲರಾದ ವೈದಿಕರನ್ನು ನಿಂದಿಸುತ್ತಲೂ ಬರುತ್ತಿದ್ದನು ಅವನು ಹೆಜ್ಜೆಯಿಟ್ಟಲ್ಲಿ, ತಂಡ ತಂಡವಾಗಿ ಕಾಮಮೋಹಿತರಾದ ಸ್ತ್ರೀಯರು ಮುತ್ತುವರು. ಅವನು ಆಗಾಗ ವೈಷ್ಣವೀ ಸ್ತ್ರೀಯರನ್ನು ಆಲಂಗಿಸುತ್ತ-ಚುಂಬಿಸುತ್ತ ನಡೆಯುವನು.'

'ವೈಷ್ಣವರೇ, ವೈಷ್ಣವೀಯರೇ ಕೇಳಿ ಕೇಳಿ. ನಮ್ಮ ವೈಷ್ಣವೀ ಪಂಥದ ಅಮೌಲ್ಯ ತತ್ವಗಳನ್ನು ಕೇಳಿ. ಹರಿಣಾಕ್ಷಿಯರಾದ ತರುಣಿಯರನ್ನು ತೋಳತೆಕ್ಕೆಯಲ್ಲಿ ಆಲಂಗಿಸುತ್ತ, ಅವರೊಂದಿಗೆ ಕುಡಿಯುತ್ತ, ಭೋಜನ ಮಾಡುತ್ತ, ನಮ್ಮದು ಅಥವ ಪರಕೀಯರದು ಎಂಬ ವ್ಯತ್ಯಾಸವನ್ನೇ ಮಾಡದೆ, ತನ್ನ ತನುಮನಧನಗಳನ್ನು ಯಾರು ಗುರುವಿಗೆ ಸಮರ್ಪಿಸುವರೋ ಅವರೇ ಮುಕ್ತಿಯೋಗ್ಯರೆಂದು ಭಾವಿಸಲ್ಪಡುವರು. ಶ್ರೀ ಗೋಕುಲೇಶನಿಗೆ ತಮ್ಮ ಆತ್ಮವನ್ನು ಧಾರೆಯೆರೆದ ಮಹನೀಯರ ಕರ್ತವ್ಯವೇನೆಂದು ಯೋಚಿಸಿದ್ದೀರಿ. ಮೋಹನಾಂಗಿಯರೊಂದಿಗೆ ಸಹಭೋಜನ, ಪಾನ, ದಿವಾರಾತ್ರಿಗಳೆಂಬ ವ್ಯತ್ಯಾಸವಿಲ್ಲದ ಆನಂದ ಕೇಳಿಯಲ್ಲಿ ಅವರೊಂದಿಗೆ ಕಾಲಯಾಪನೆ ಮಾಡುವಿಕೆಯೇ! ದಾನ, ತ್ಯಾಗ, ಭಕ್ತಿ, ಧ್ಯಾನ, ವೇದ ಶಾಸ್ತ್ರ ಪುರಾಣಾದಿಗಳು, ಲೆಕ್ಕವಿಲ್ಲದ - ಕೋಟ್ಯಾಂತರ ವ್ರತನಿಯಮಗಳು ಎಲ್ಲವನ್ನೂ ತಳ್ಳಿ ಅತ್ತಕಡೆಗೆ! ವಲ್ಲಭನ ಅನುಯಾಯಿಗಳ ಮುಖ್ಯ ಧರ್ಮವೆಂದರೆ, ತನ್ನ ಮಗ, ಮಗಳು ಹೆಂಡತಿ ಮುಂತಾದ ಆತ್ಮೀಯ ಪ್ರಿಯಕರ ವಸ್ತುಗಳನ್ನು ನಿಶ್ಯಂಕೆಯಿಂದ ಗುರುಪಾದಕ್ಕೆ ಸಮರ್ಪಿಸುವಿಯೇ! ವೇದವಿದರಾದ ಬ್ರಾಹ್ಮ

ಣಾರ ಆರಾಧನೆ, ಅತಿಥಿಸತ್ಕಾರ, ಶ್ರಾದ್ಧಗಳು ಮುಂತಾದುವೆಲ್ಲ ಅರ್ಥವಿಲ್ಲದ ಹುಚ್ಚು ಕಲ್ಪನೆಗಳು'.

ಈ ಮೇಲ್ಕಂಡ ವರ್ಣನೆಯಿಂದ ಆಗಿನ ವಲ್ಲಭೀಯ ಧರ್ಮಪಂಥವು ಎಷ್ಟುಮಟ್ಟಿನ ಅಧಮಸ್ಥಿತಿಗೆ ಇಳಿದಿತ್ತೆಂದು ತಿಳಿಯಬಹುದಾಗಿದೆ.

ಆದರೆ ಈ ಬಗೆಯ ಆರೋಪಣೆಯೂ ಅವಹೇಳನವೂ ಅತಿಶಯೋಕ್ತಿ ಎನ್ನಬಹುದು. ರಾಜಾಸ್ಥಾನದ ಇತಿಹಾಸವನ್ನು ಬಹು ವಿಮರ್ಶಕ ದೃಷ್ಟಿಯಿಂದ ರಚಿಸಿರುವ ಟಾಡ್‍ರವರ ಹೇಳಿಕೆಯಿಂದ ಮೇಲೆ ಹೇಳುವಂತಹ ಅವ್ಯವಸ್ಥೆಯು ಆ ಪಂಥದಲ್ಲಿ ಯಾವಾಗಲೂ ಉಂಟಾದುದಿಲ್ಲವೆಂದೂ, ಬ್ರಹ್ಮಚರ್ಯ ಪಾಲನೆಯಲ್ಲಿ ಮಾತ್ರ ಶೈವಪಂಥದವರಂತೆ ನಿರ್ಬಂಧವಿಲ್ಲದಿದ್ದ ಈ ವೈಷ್ಣವಪಂಥದವರಲ್ಲಿ ವಿವಾಹಕ್ಕೆ ಅನುಮತಿಯಿದ್ದು, ಆ ಪಂಥದ ಗುರುಗಳು ಗೃಹಸ್ಥಧರ್ಮದಲ್ಲೇ ಇದ್ದು ಮಕ್ಕಳನ್ನು ಹೆತ್ತು ಮಿಕ್ಕವರಂತೆಯೇ ಬಾಳ್ವೆಮಾಡುತ್ತಿದ್ದರೆಂದೂ, ಅವರಲ್ಲಿ ಪ್ರಾಣಿಗಳಲ್ಲಿ ದಯೆ, ದೀನರಲ್ಲಿ ಅನುಕಂಪ, ಅತಿಥಿಸತ್ಕಾರ, ಸತ್ಯ ಧರ್ಮ ನ್ಯಾಯಪರತೆ ಮುಂತಾದ ಅಮೌಲ್ಯ ಗುಣಗಳಿಂದ ಶೋಭಿಸುತ್ತಿದ್ದ ನರಶ್ರೇಷ್ಠರು ತನಗೆ ಪರಿಚಯಸ್ಥರಾಗಿದ್ದರೆಂದೂ ವ್ಯಕ್ತವಾಗುತ್ತದೆ.

ಇತರ ಸಾಧಕ ಬಾಧಕಗಳೆಷ್ಟಿದ್ದರೂ ವೈಷ್ಣವ ಪಂಥದಿಂದ ಮಧ್ಯಕಾಲೀನ ಕವಿತೆ ಮತ್ತು ಕಲೆ ಈ ಎರಡು ಕುಶಲ ವಿದ್ಯೆಗಳಿಗೆ ಅಪಾರ ಪ್ರಯೋಜನವುಂಟಾಯಿತು. ಕವಿತೆಯು ಶ್ರೀಕೃಷ್ಣಭಕ್ತಿಯ ಅಮೃತ ಪ್ರವಾಹವನ್ನೇ ಹರಿಸಿ ಭಾವುಕರನ್ನು ತನ್ಮಯರನ್ನಾಗಿಸುವಂತೆ, ಮಹನೀಯ ಕವಿಗಳನೇಕರಿಂದ ರಚಿಸಲ್ಪಟ್ಟಿತು. ಭಾಗವತದ ಹತ್ತನೆಯ ಸ್ಕಂಧವು ಸಂಪೂರ್ಣವಾಗಿ 'ಪ್ರೇಮಸಾಗರ'ವೆಂಬ ಹೆಸರಿನಿಂದ ಹಿಂದೀಭಾಷೆಯಲ್ಲಿ ರಚನೆಯಾಗಿ ಕವಿಜನ ಕಲ್ಪತರುವೆನ್ನಿಸಿತು. ಹಾಗೆಯೇ, ಶ್ರೀಕೃಷ್ಣನ ಕಾಳೀಯ ದಮನ, ರಾಸಲೀಲೆ, ರಾಧಾಮಾಧವರ ಪ್ರೇಮವಿಲಾಸಗಳು ಮುಂತಾದುವೆಲ್ಲ ವಿಚಿತ್ರರೀತಿಯ ಸೌಂದರ್ಯವನ್ನು ಪ್ರಕಟಿಸುವ ಚಿತ್ರಗಳಾಗಿ ರಚನೆಯಾದುವು.



# ಉಪಸಂಹಾರ

ಮಹಮ್ಮದೀಯರ ಪ್ರಾಬಲ್ಯವು ಹೆಚ್ಚಾಗಿ, ಹಿಂದೂ ಧರ್ಮಬಾಂಧವರು, ತಮ್ಮ ಜಾತಿ ನೀತಿ ಮತ ಸಂಸ್ಕೃತಿ ಸಂಪ್ರದಾಯಗಳನ್ನೆಲ್ಲ ನೀಗಿಕೊಂಡು, ಪರಧರ್ಮಗಳಿಗೆ ಶರಣುಹೋಗಲು ಸಿದ್ಧರಾಗಿದ್ದ ವೇಳೆಯಲ್ಲಿ ನಮ್ಮ ಕಥಾನಾಯಕರು ಉದಯಿಸಿ, ಪ್ರಾಚೀನ ಧಾರ್ಮಿಕಸಾಹಿತ್ಯದಲ್ಲಿ ಅಸುಪಮ ಪಾಂಡಿತ್ಯ ಪ್ರತಿಭೆಗಳನ್ನು ಗಳಿಸಿ, ಸ್ವಯಂ ಸ್ಫೂರ್ತಿಯಿಂದ ಒಂದು ಪ್ರತ್ಯೇಕ ಧರ್ಮಸಂಸ್ಥೆಯನ್ನೇ ಸ್ಥಾಪಿಸಿಬಿಟ್ಟರು. ಇವರ ಈ ಪಂಥವು ಅಪಾತ್ರರೂ ಇಂದ್ರಿಯ ಲೋಲುಪರೂ ಆದ ಕೆಲವರ ಹಸ್ತಗತವಾದಾಗ ಒಂದುವೇಳೆ, ಮಹನೀಯರಾದ ಸ್ಥಾಪಕರ ಪವಿತ್ರ ಮಾರ್ಗದಿಂದ ಲೇಶ ಮಾತ್ರ ತಪ್ಪಿ ನಡೆದಿರಬಹುದು. ಆದರೆ ರಾಜಾಸ್ಥಾನ, ಗುಜರಾತು, ಪಶ್ಚಿಮ ಹಿಂದೂಸ್ಥಾನ ಪ್ರಾಂತಗಳಲ್ಲಿ ಅದಕ್ಕಿರುವ ಪೂಜ್ಯತೆಯೂ, ಅದು ಮಾಡಿರುವ ಪ್ರಶಂಸನೀಯ ಕಾರ್ಯವೂ, ಮೇಲೊಂದೆಡೆಯಲ್ಲಿ ಹೇಳಿದಂತೆ ಕಲೆ ಕವಿತೆಗಳ ಅಭಿವೃದ್ಧಿಗಾಗಿ ಈ ವೈಷ್ಣವಪಂಥವು ಮಾಡಿರುವ ಸಹಾಯವೂ ಎಂದೆಂದಿಗೂ ಜನಮನದ ಕೃತಜ್ಞತೆಗೆ ಪಾತ್ರವಾಗಿವೆ. ನಾಲ್ಕಾರು ಶತಮಾನಗಳವರೆಗೆ ಜೀವಿಸಬಹುದಾದ ಒಂದು ಧರ್ಮಪಂಥಕ್ಕೆ ಜನಕರಾದ ನಮ್ಮ ಕಥಾನಾಯಕರಲ್ಲಿ ಭಗವದ್ವಿಭೂತಿಯ ಕಿರಣವಿಲ್ಲದಿದ್ದಲ್ಲಿ ಇಂತಹ ಮಹತ್ಕಾರ್ಯವು ಸಾಧ್ಯವಾಗಬಹುದಿತ್ತೆ ? ಅವರ ಕರ್ತೃತ್ವಶಕ್ತಿಯೂ ವಿದ್ವತ್ತೂ, ಭಕ್ತಿಜ್ಞಾನ ವೈರಾಗ್ಯಾದಿಗಳೂ ಲೋಕಸೇವೆಗಾಗಿ ತೊಡಗುವ ಎಲ್ಲರಿಗೂ ಮಾರ್ಗದರ್ಶಕಗಳಾಗಿರಲಿ. ನಮ್ಮ ಕಥಾನಾಯಕರ ಹೃದಯಾಂತರ್ವರ್ತಿಯಾಗಿದ್ದ ಶ್ರೀ ನಾಥಜೀ-ಶ್ರೀಕೃಷ್ಣಸ್ವಾಮಿಯು ಸರ್ವಾಪನ್ನಿವಾರಕನೂ ಸರ್ವರಕ್ಷಕನೂ ಆಗಿರಲಿ.

ತಥಾಸ್ತು.



॥ ಶ್ರೀರಾಮಸಹಾಯಂ ॥

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸಪುಸ್ತಕಾವಳಿ)

**ಮುನ್ನುಡಿ:—**

'ಬಹುರತ್ನಾವಸುಂಧರಾ' ಎಂದರೆ 'ಭೂಮಾತೆಯು ಬಹು ರತ್ನ ವಿಭೂಷಿತಳು' ಎಂಬ ಆರ್ಯೋಕ್ತಿಯು, ಪ್ರಪಂಚದ ಬೇರೆ ಬೇರೆ ದೇಶಗಳ ಚರಿತ್ರೆಯನ್ನೂ, ಜನ-ಜನಾಂಗಗಳ ಚರಿತ್ರೆಯನ್ನೂ ನೋಡುತ್ತಹೋದಂತೆಲ್ಲ ಹೆಚ್ಚುಹೆಚ್ಚಾಗಿ ಸತ್ಯವೆನ್ನಿಸುತ್ತದೆ. ವಿಶ್ವವ್ಯಾಪಿಯಾದ ಸರ್ವೇಶ್ವರನು, ತನ್ನ ದಯಾಮಯ ಕಟಾಕ್ಷದಿಂದ ಯಾವ ದೇಶವನ್ನೂ ದೂರಗೊಳಿಸಲಾರನು. ಸ್ಥಾವರ ಜಂಗಮಾತ್ಮಕವಾದ ಈ ಬ್ರಹ್ಮಾಂಡದಲ್ಲಿ ಉದ್ಭವಿಸಿದ ಅಣುಪ್ರಾಣಿಯಿಂದ ಆನೆಯವರೆಗಿನ ಸಕಲ ಜೀವಿಗಳೊಳಗೂ ಆತನು ಅಂತರ್ಯಾಮಿಯಾಗಿರುವನೆಂದಮೇಲೆ ಅವುಗಳ ಸ್ಥಿತಿಯೂ-ಸಂರಕ್ಷಣೆಯೂ ಆ ಸರ್ವೇಶ್ವರನಿಗಲ್ಲದೆ ಮತ್ತಾರಿಗೆ ಸೇರಿದುದಾಗಬೇಕು! ಹೀಗೆ ನಿಖಿಲ ಜಗತ್ತಿನ ಸಂರಕ್ಷಣೆಯ ಭಾರವನ್ನು ಹೊತ್ತವನಾದಮೇಲೆ, ಆ ಪ್ರಾಣಿಕೋಟಿಗಳಿಗೆ ಕಷ್ಟಬಂದಾಗ್ಗೆ - ದುಃಖಬಂದಾಗ್ಗೆ, ಅವುಗಳನ್ನು ನಿವಾರಿಸಿ, ಅವರನ್ನು ಸುಖ ಸಂತೋಷಗಳಿಂದ ಪೋಷಿಸುವ ಭಾರವಾದರೂ ಆ ದಯಾಮಯನಿಗೇ ಸೇರಿದುದಾಗಿದೆ. ಈ ತನ್ನ ಕರ್ತವ್ಯವನ್ನು ನೆರವೇರಿಸುವುದಕ್ಕಾಗಿಯೇ, ಆ ಲೋಕೇಶನು, ಯಾವ ಕಾಲದಲ್ಲಿ ಲೋಕದ ಯಾವ ಭಾಗದಲ್ಲಿ ದುಃಖವೂ ಸಂಕಟವೂ ಅನ್ಯಾಯವೂ ದಂಭವೂ ಮೋಸಕಾಪಟ್ಯಾದಿಗಳೂ ಹೆಚ್ಚಿರುವುವೋ ಆ ಕಾಲದಲ್ಲಿ, ಅವುಗಳನ್ನು ನಿವಾರಿಸಲು ಯೋಗ್ಯರಾದ ಮಹಾ ಪುರುಷ ರತ್ನಗಳನ್ನು ಅಲ್ಲಿ ಜನಿಸುವಂತೆ ಅನುಗ್ರಹಮಾಡುವನು. ಮನುಷ್ಯವರ್ಗವು ಸೃಷ್ಟಿಯಲ್ಲೇ ಶ್ರೇಷ್ಠವಾದುದಾಗಿ, ಮನುಷ್ಯನೇ ದೃಶ್ಯವಾಗಿ ಲೋಕಜೀವಿತದ ಕಾರ್ಯಭಾರವಾಹಕನಾಗಿರುವುದರಿಂದ ಆ ಮನುಷ್ಯವರ್ಗವೊಂದನ್ನು ಸುಧಾರಿಸಿದರೆ, ಪಶುಪಕ್ಷಿಗಳಾದಿಯಾಗಿ ಮಿಕ್ಕ ಸಕಲ ಪ್ರಾಣಿವರ್ಗಗಳ ಹಿತಸಾಧನೆಯನ್ನೂ ಮಾಡಿದಂತಾಗುವುದು. ಅದು

ದರಿಂದಲೇ ಶ್ರೀಮದ್ಭಗವದ್ಗೀತೆಯಲ್ಲಿ ಹೇಳಲ್ಪಟ್ಟ* ಶ್ರೀ ಕೃಷ್ಣವಾಕ್ಯ ದಂತೆ, ಲೋಕದಲ್ಲಿ ಅನ್ಯಾಯವು ಹೆಚ್ಚಿದಾಗ್ಗೆ, ಸತ್ಯ ಧರ್ಮ ನ್ಯಾಯಗಳು ನಾಶಹೊಂದುತ್ತಿದ್ದಾಗ್ಗೆ ಭಗವದ್ವಿಭೂತಿಯನ್ನು ಗಳಿಸಿದ ಮಹಾ ಪುರು ಷರು ಜನ್ಮಿಸುತ್ತಿರುವುದು ಲೋಕದ ಸಕಲ ದೇಶಗಳ ಚರಿತ್ರೆಯಲ್ಲೂ ಕಂ ಡುಬರುತ್ತಿದೆ.

ಪ್ರಕೃತ ನಮ್ಮ ಚರಿತ್ರನಾಯಕನು ಜನಿಸಿದ ರಷ್ಯಾದೇಶದ ವಿಚಾ ರವು, ಕಳೆದ ಒಂದೆರಡು ಶತಮಾನಗಳಲ್ಲಿ ಅಂತಹ ಭಯಂಕರ ಸ್ಥಿತಿಯ ಲ್ಲಿತ್ತು. ಕೇವಲ ರಷ್ಯಾದೇಶವೊಂದೇ ಎನ್ನುವಂತಿಲ್ಲ- ಯೂರೋಪಿನ ಹಲವು ದೇಶಗಳು ಆ ಸ್ಥಿತಿಯಲ್ಲಿ ಸಿಕ್ಕು ನರಳುತ್ತಿದ್ದುವು. ದೇಶದಲ್ಲಿ ಸರ್ವತ್ರ ಅಶಾಂತತೆಯೂ, ಕ್ಷಾಮಡಾಮರಗಳೂ ವ್ಯಾಪಿಸಿದ್ದುವು. ಮನುಷ್ಯರು-ಮು ಖ್ಯವಾಗಿ ಬಡವರು, ಪಶುಗಳಂತೆಯೂ ಕ್ರಿಮಿಕೀಟಗಳಂತೆಯೂ ಅಸಹ್ಯರೀ ತಿಯಿಂದ ಕಾಲಯಾಪನೆ ಮಾಡುತ್ತಿರಬೇಕಾಗಿದ್ದಿತು. ರಾಜ್ಯಾಧಿಕಾರಿಗಳು ನಿರಂಕುಶರಾಗಿದ್ದರು. † **ಸಾಕ್ಷರಾ ವಿಪರೀತಾಶ್ಚೇತ್ ರಾಕ್ಷಸಾ ಏವ ಕೇವಲಂ** ಎಂಬಂತೆ. ವಿದ್ಯಾವಂತರೂ ನಾಗರಿಕರೂ ಎನಿಸಿಕೊಂಡವರು ಸ್ವಾರ್ಥಿಗಳಾಗಿ, ದಂಭ ಅಹಂಕಾರಗಳಿಂದ ಕಣ್ಣುಕಾಣದವರಾಗಿ, ನಿಷ್ಕರು ಣಿಗಳಾಗಿ, ತಮ್ಮ ಸ್ವಾರ್ಥಸಾಧನೆಗಾಗಿ ಬಡಜನರ ಪ್ರಾಣಗಳನ್ನು ಹಿಂಡುವ ನರರಾಕ್ಷಸರಾದರು. ಜನಗಳ ಧನ ಮಾನ ಪ್ರಾಣಗಳಿಗೆ ರಕ್ಷಣೆ ದೊರೆಯದಾ ಯಿತು. ನಿರಂಕುಶ ಚಕ್ರವರ್ತಿಯಾದ ಸಾರನ (*Czar of Russia*) ಪ್ರಭುತ್ವವು ರಾವಣ ಹಿರಣ್ಯಕಶಿಪುಗಳ ರಾಜ್ಯಭಾರದಂತೆ ಭಯದಾಯಕ ವಾಯಿತು. ಪ್ರಜೆಗಳು ತಲ್ಲಣಿಸಿಹೋದರು. ಅನ್ಯಾಯ ಅಸಡ್ಡಾಳಗಳಿಗೆ ಸಮ್ಮತಿಸಿ, ಪ್ರಭುತ್ವದ ಅಡಿಯಾಳುಗಳಾಗಿ ಜೀವಿಸಿದ್ದರಲ್ಲದೆ, ಇದು ತಪ್ಪು -ಇದು ಸರಿ ಎಂದು ಹೇಳುವ ಪ್ರಸಂಗಕ್ಕೆ ಯಾವನಾದರೂ ಹೋದನೆಂದರೆ

---

*ಯದಾಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ ಅ. ೪, ಶ್ಲೋ. ೭.

†"ಸಾಕ್ಷರಾ" ಎಂಬ ಪದವನ್ನು ವಿಪರೀತ ರೀತಿಯಿಂದ ಎಂದರೆ ಮುಂದಿನಿಂದ ಹಿಂ ದಕ್ಕೆ ಬರೆದರೆ "ರಾಕ್ಷಸಾ" ಎಂದಾಗುವುದು. ಸಾಕ್ಷರರೆಂದರೆ ಅಕ್ಷರವಿದ್ಯೆಯನ್ನು ಕಲಿತವರು. ಸಾಕ್ಷರರು ವಿಪರೀತ ಕರ್ಮವುಳ್ಳವರಾದರೆ ರಾಕ್ಷಸರೇ ಆಗುವರು.

ಒಡನೆ ಅವನಿಗೆ ದೇಶಾಂತರವಾಸವೋ ಮರಣದಂಡನೆಯೋ ಸೆರೆಮನೆಯಲ್ಲಿ ಚಿತ್ರಹಿಂಸೆಯೋ ಸಿದ್ಧವಾಗಿರುವುದು. ಅನ್ನುವದಕ್ಕಿಲ್ಲ - ಅನುಭವಿಸುವುದಕ್ಕೆ ಸಾಧ್ಯವಿಲ್ಲ ಎಂಬಂತಿದ್ದ ದೇಶದ ಆ ಸ್ಥಿತಿಯಲ್ಲಿ ಬಡಜನಗಳು ಬದುಕಿರುವುದಕ್ಕಿಂತಲೂ ಸಾಯುವುದೇ ಮೇಲೆಂದು ಯೋಚಿಸುತ್ತಿದ್ದರೆಂದರೆ ಅದರಲ್ಲಿ ಅತಿಶಯೋಕ್ತಿಯಿಲ್ಲ. ದೇಶದಲ್ಲಿನ ಧನವಂತರು ಯಾವಾಗಲೂ ಅಧಿಕಾರಿಗಳ ಆಶ್ರಯವನ್ನು ಕೋರುವವರೇ ಆದುದರಿಂದ, ನೇರವಾಗಿ ಸರ್ಕಾರಕ್ಕೆ ಅಧೀನರಾಗಿರದ ಬಡಜನರು, ಈ ಸ್ವಾರ್ಥಿಗಳ ಸುಖ ಸಂತೋಷಗಳನ್ನು ಹೆಚ್ಚಿಸುವುದಕ್ಕಾಗಿ ದುಡಿದು ದುಡಿದು ಹಣ್ಣಾಗುತ್ತಿದ್ದರು. ಈ ಸ್ವಾರ್ಥತೆಯೆಂಬ ಆಸುರೀಭಾವವು - ದೈತ್ಯಾವೇಶವು, ಧನಬಲ ಜನಬಲ ಅಧಿಕಾರಬಲ ವಿದ್ಯಾಬಲಗಳಿಂದ ಕೂಡಿದ ಮನುಷ್ಯರಲ್ಲಿ ಮನೆಮಾಡಿಕೊಂಡಮೇಲೆ, ಇನ್ನು ಅವರ ಆ ರಾಷ್ಟ್ರದಲ್ಲಿ ಸುಖ ಸಂತೋಷಗಳೂ ಶಾಂತತೆ ಸಮಾಧಾನಗಳೂ ಸತ್ಯ ಧರ್ಮ ನ್ಯಾಯಗಳೂ ಸ್ವಪ್ನದಲ್ಲೂ ದುರ್ಲಭವಾಗುವುದೆಂದು ಯೋಚಿಸಿದರೆ ಅದರಲ್ಲಿ ಅತಿಶಯವೇನಿದೆ?

ಮನುಷ್ಯರಲ್ಲಿ ಆಸುರೀಭಾವವು ಹೆಚ್ಚಿ, ಅವರು ಸ್ವಾರ್ಥಿಗಳೂ ದಾಂಭಿಕರೂ ಅಹಂಕಾರಿಗಳೂ ನಿಷ್ಕರುಣಿಗಳೂ ಆಗುವುದಕ್ಕೆ ಅವರಲ್ಲಿ ದೈವೀಭಾವವು ನಾಶವಾಗುವುದೇ ಮುಖ್ಯ ಕಾರಣವಾಗಿರುವುದು. 'ದೇವರು ಸರ್ವಾಂತರ್ಯಾಮಿ ಅವನು ನನ್ನ ಹೃದಯಾಂತರ್ವರ್ತಿಯಾಗಿರುವನು. ನನ್ನಲ್ಲಿರುವಂತೆಯೇ ಸಕಲ ಪ್ರಾಣಿಗಳ ಹೃದಯ ಕಮಲದಲ್ಲೂ ಆ ಲೋಕೇಶನ ಸಾನ್ನಿಧ್ಯವಿರುವುದು. ಯಾರಿಗೆ ಮಾಡುವ ಹಿಂಸೆಯೂ ಮೋಸವೂ ಆತನಿಗೆ ಅಸಮ್ಮತವಾದುದು ಎಲ್ಲರನ್ನೂ ಪ್ರೀತಿಸಿ ಸ್ನೇಹಿಸಿ ಎಲ್ಲರಲ್ಲೂ ದಯಾಭಾವವನ್ನು ಪ್ರಕಟಿಸುವುದು ಆತನಿಗೆ ಪ್ರಿಯಕರವಾದುದು' ಎಂಬೀ ಭಾವವು ಯಾವನ ಹೃದಯದಿಂದ ತೊಲಗಿರುವುದೋ, ಅವನ ಶುಷ್ಕ ಹೃದಯವನ್ನು - 'ನಾನೇ ದೊಡ್ಡವನು, ವಿದ್ಯಾವಂತನು, ಬುದ್ಧಿವಂತನು, ಧೀರನು, ಧನವಂತನು. ನನ್ನ ಸಮಾನರು ಮತ್ತಾರಿರುವರು? ಎಲ್ಲರೂ ನನಗೆ ಅಧೀನರು' ಎಂಬ ಭಾವನೆಯೇ ವ್ಯಾಪಿಸಿರುವುದರಲ್ಲಿ ಸಂದೇಹವೇನು! ಹೀಗೆ ಭಾವಿಸುತ್ತಾ ಆ ಮದಾಂಧನು ಸಕಲರನ್ನೂ ಸಕಲ ಪ್ರಾಣಿಗಳನ್ನೂ ನಿಕೃಷ್ಟಭಾವದಿಂದ ಕಾಣುವನು. ದೇಶದ ಮತ್ತು ಜನಾಂಗದ ಗತಿಯು ಇಂತ

ಹ ಪರಮಾವಧಿಸ್ಥಿತಿಗಿಳಿದಾಗ್ಗೆ ಅವುಗಳ ಉದ್ಧಾರಕ್ಕಾಗಿ ಜನ್ಮಿಸುವ ಮಹಾನುಭಾವನು ಮೇಲ್ಕಂಡಂತೆ ಜನಮನದಲ್ಲಿ ವ್ಯಾಪಿಸಿದ ಅನ್ಯಾಯ-ಅಸತ್ಯ ಭಾವಗಳೊಂದಿಗೆ ಹೊಡೆದಾಡಿ ಅವರ ಹೃದಯದಿಂದ ಅವುಗಳನ್ನಟ್ಟಲು ಪ್ರಯತ್ನಿಸಬೇಕಾದುದು ಹೇಗೆ ಆವಶ್ಯಕವೋ, ಸತ್ಯಧರ್ಮ ನ್ಯಾಯಗಳ ಬೀಜಗಳನ್ನೂ ಭಗವದ್ಭಕ್ತಿ ಜ್ಞಾನ ವೈರಾಗ್ಯಾದಿಗಳ ಬೀಜಗಳನ್ನೂ ಅಲ್ಲಿ ಬಿತ್ತಬೇಕಾದುದೂ ಹಾಗೆಯೇ ಆವಶ್ಯಕವು! ಇಂತಹ ಪರಿಸ್ಥಿತಿಗಳೊದಗಿದಾಗ್ಗ ಎಲ್ಲಾ ದೇಶಗಳಲ್ಲೂ ಉದ್ಭವಿಸಿದ ಎಲ್ಲಾ ಮಹನೀಯರೂ ಈ ಬಗೆಯಿಂದಲೇ ಪ್ರಯತ್ನಿಸಿ ಕೃತಕಾರ್ಯರಾಗಿದ್ದಾರೆ. ಆದರೆ ಅವರ ಪ್ರಯತ್ನಗಳೂ ಕಾರ್ಯಕ್ರಮಗಳೂ ಬೋಧನೆಗಳೂ ಆಯಾದೇಶ ಕಾಲಸ್ಥಿತಿ ವ್ಯವಹಾರಗಳನ್ನು ಅನುಸರಿಸಿ ಇರಬೇಕಾದುದು ಮಾತ್ರ ಅತ್ಯವಶ್ಯಕವಿರುವುದು. ನಮ್ಮ ಕಥಾನಾಯಕನಾದ ಮಹಾತ್ಮಾ ಟಾಲ್‌ಸ್ಟಾಯಿಯೂ ಈ ಸ್ವಾಭಾವಿಕ ಮಾರ್ಗವನ್ನೇ ಅನುಸರಿಸಿ ಶ್ರಮಿಸಿ ದೇಶೋದ್ಧಾರಕನಾದನು. ಆ ಮಹನೀಯನ ಜೀವಿತವು ಸಂಗ್ರಹವಾಗಿ ಈ ಕುಸುಮದಲ್ಲಿ ಕೊಡಲ್ಪಟ್ಟಿರುವುದು. ಗ್ರಂಥಮಾಲಾಭಿಮಾನಿಗಳು, ಇದನ್ನೂ ಸ್ವೀಕರಿಸಿ ಪಠಿಸಿ ಹರ್ಷಿಸಬೇಕಲ್ಲದೆ, ಗ್ರಂಥಮಾಲೆಯ ಈ ಸೇವಾಕಾರ್ಯವು ಅವ್ಯಾಹತವಾಗಿ ಸಾಗುವಂತೆ ಸ್ವಹಸ್ತ ಪರಹಸ್ತ ಸಹಾಯಮಾಡಲೂ ಕೃತನಿಶ್ಚಿತರಾಗಬೇಕು. ಇದೇ ನಮ್ಮ ಪ್ರಾರ್ಥನೆ.

ಇತಿ ಸುಜನ ವಿಧೇಯ

ಬೆಂಗಳೂರು ನಗರ.
ತಾ. ೪—೩—೧೯೩೩

॥ ಶ್ರೀ ರಾಮಸಹಾಯಂ ॥

# ರಷ್ಯಾದೇಶದ ಸಾಧು ಶಿರೋಮಣಿ

## ಮಹಾತ್ಮಾ

# ಲಿಯೋ ಟಾಲ್‌ಸ್ಟಾಯ್

---

**ಅಧ್ಯಾಯ ೧** **'ಜನನ - ಮಾತೃವಿಯೋಗ'**

ಸದ್ಯಃಕಾಲದಲ್ಲಿ ನಮ್ಮ ಮಾತೃಭೂಮಿ - ಈ ಭಾರತದೇಶದಲ್ಲಿ ವಿಚಾರಕ್ರಾಂತಿಯನ್ನುಂಟುಮಾಡಿ, ನಮ್ಮ ದೇಶದ ಧಾರ್ಮಿಕ ನೈತಿಕ ಸಾಮಾಜಿಕ ರಾಜಕೀಯ ಕ್ಷೇತ್ರಗಳಲ್ಲಿ ಲೋಕಹಿತ ಸಾಧಕವಾದ ಸುಧಾರಣೆಗಳನ್ನು ಕಲ್ಪಿಸಲು ಅಗ್ರಗಾಮಿಗಳಾಗಿರುವ ಮಹಾತ್ಮಾಜೀಯವರು ಯಾರ ಲೇಖನಗಳ ಪಠನೆಯಿಂದ ಸ್ಫೂರ್ತಿಹೊಂದಿ ಲೋಕಸೇವಾ ಕ್ಷೇತ್ರದಲ್ಲಿ ಪ್ರವೇಶಿಸಿದರೋ ಆ ಮಹನೀಯನೇ ನಮ್ಮ ಕಥಾನಾಯಕನು. ೧೮ - ೧೯ನೆಯ ಶತಮಾನಗಳಲ್ಲಿ ರಷ್ಯಾದೇಶದಸ್ಥಿತಿಯು ಬಹು ಶೋಚನೀಯವಾಗಿತ್ತು. ಒಂದು ದೇಶದ ಸ್ಥಿತಿಯನ್ನು ಉತ್ತಮವೆಂದಾಗಲೀ ಅಧಮವೆಂದಾಗಲೀ ಹೇಳುವುದಕ್ಕೆ ಆ ದೇಶವಾಸಿಗಳ ಸ್ಥಿತಿಗತಿಗಳನ್ನು ಕುರಿತು ಮುಖ್ಯವಾಗಿ ಗಮನಿಸಬೇಕು. ದೇಶದಲ್ಲಿ ಕೆಲವಂದಿ ಧನಿಕರಿರಬಹುದು, ಹಲವು ಉನ್ನತಕಟ್ಟಡಗಳಿರಬಹುದು, ಶೃಂಗಾರ ವನಗಳಿರಬಹುದು; ನೇತ್ರಾನಂದಕರವಾದ ರಸ್ತೆಗಳೂ ಅಂಗಡಿ ಮುಂಗಟ್ಟುಗಳೂ ಇರಬಹುದು. ಈ ಎಲ್ಲ ಬಗೆಯ ಅನುಕೂಲತೆಗಳೂ ಒದಗಿದ್ದರೂ ಜನಗಳಿಗೆ ಸುಖಸಂತೋಷಗಳು ಮಾತ್ರ ಇಲ್ಲದಿದ್ದರೆ ಅವೆಲ್ಲವೂ ವ್ಯರ್ಥ ! ಒಬ್ಬ ಮನುಷ್ಯನಿಗೆ, ಬೇಕಾದಷ್ಟುಮಂದಿ ಬಂಧುಬಳಗಗಳಿರಬಹುದು, ಹೆಂಡಿರುಮಕ್ಕಳಿರಬಹುದು, ಐಶ್ವರ್ಯವಿರಬಹುದು, ಇಂದ್ರಭವನದಂತೆ ಸುಂದರವಾದ ಗೃಹಾರಾಮಗಳಿರಬಹುದು; ಆದರೆ ಅವನು ಆರೋಗ್ಯವೊಂದಿಲ್ಲದೆ ರೋಗಪೀಡಿತನಾಗಿ ಬಿದ್ದ

ದ್ದರೆ ಅವುಗಳಿಂದಲ್ಲಿಲ್ಲ ಎಂತಹ ಪ್ರಯೋಜನವುಂಟಾದೀತು? ದೇಶಕ್ಕೆ ಪ್ರಜೆಗಳೆಂಬುವರು ದೇಹಕ್ಕೆ ಪ್ರಾಣವಿದ್ದಂತೆ! ಪ್ರಾಣವಿಲ್ಲದ ದೇಹವನ್ನು ಗಂಧಪುಷ್ಪ ವಸ್ತ್ರ ಭೂಷಣಾದಿಗಳಿಂದ ಎಷ್ಟು ಸಿಂಗರಿಸಿದರೆ ಏನು ಪ್ರಯೋಜನ? ದೇಶದಲ್ಲಿ ಹತ್ತುಮಂದಿ ಧನಿಕರಿರಬಹುದು. ಆದರೇನು! ಆ ಧನಿಕರ ಉದಾಹರಣೆಯು ಆದ್ಯಂತ ದೇಶಸ್ಥಿತಿಯೇ ಹಾಗಿದೆಯೆಂದು ತಿಳಿಯಲು ಸಾಧಕವಾಗಲಾರದು. ದೇಶವು ಸುಭಿಕ್ಷವಾಗಿದೆ ಎನ್ನಲು,-ಜನ-ಜಾನುವಾರುಗಳು ಯಾವಬಗೆಯ ಉಪದ್ರವಗಳಿಗೂ ಒಳಪಡದಿರಬೇಕು; ಸುಖವಾಗಿರಬೇಕು; ಶಾಂತತೆ-ಸಮಾಧಾನಗಳಿಂದಲಿರಬೇಕು, ಅಂದಿಗೆ ಮಾತ್ರ ಸಾಧ್ಯವಾದೀತು.

ರಷ್ಯಾದೇಶದ ಸ್ಥಿತಿಯು ಹತ್ತೊಂಬತ್ತನೆಯ ಶತಮಾನದ ಆದಿಭಾಗದಲ್ಲಿ ಅತಿಶಯ ಕೆಟ್ಟುಹೋಯಿತು. ನಿರಂಕುಶ ಪ್ರಭುವಾದ ಝಾರ್ ಚಕ್ರವರ್ತಿಯು ವಿಶೇಷ ಸ್ವಾರ್ಥಿಯೂ ಸುಖಲೋಲುಪನೂ ಆದನು. ಅವನ ಅನುಗ್ರಹ ಸಂಪಾದನೆಗಾಗಿ ಅಧಿಕಾರಿ ವರ್ಗವು ಅವನ ಇಷ್ಟದಂತೆ ಕುಣಿಯತೊಡಗಿತು. ರಾಜ್ಯಾಧಿಕಾರಿಗಳಿಗೆ ಪ್ರಜೆಗಳ ಕ್ಷೇಮಚಿಂತನೆಯಲ್ಲ-ಚಕ್ರವರ್ತಿಯ ಇಚ್ಛೆ ಆಶಯಗಳನ್ನು ಪೂರ್ತಿಗೊಳಿಸುವುದೇ ಮುಖ್ಯ ಕರ್ತವ್ಯವಾಗಿ ಪರಿಣಮಿಸಿತು. ರಾಜನು ಪ್ರಜಾಕ್ಷೇಮ ಚಿಂತನೆಯನ್ನುಳಿದು ಸ್ವಸುಖಲೋಲುಪನಾದೊಡನೆಯೇ ಅಧಿಕಾರಿವರ್ಗವೂ ಅದೇ ಮಾರ್ಗವನ್ನು ಹಿಡಿದು, ಲಂಚರುಷವತ್ತುಗಳಿಗಾಗಿ ಪ್ರಜೆಗಳನ್ನು ಪೀಡಿಸತೊಡಗಿತು. ಅನ್ಯಾಯಕರವಾದ ನೂರಾರು ತೆರಿಗೆಗಳು ಹುಟ್ಟಿದುವು ಅವುಗಳನ್ನು ತೆತ್ತು ತೆತ್ತು ಪ್ರಜೆಗಳು ಹಣ್ಣಾದರು. ಧನಿಕರಿಗೂ ಅಧಿಕಾರಿಗಳಿಗೂ, ಬಡವರೂ ಮನುಷ್ಯರು ಎಂಬ ಭಾವನೆಯೇ ಮನಸ್ಸಿನಲ್ಲಿ ಅಳಿಸಿಹೋಯಿತು. ಬಡಜನರ ಇರುವಿಕೆಯು ತಮಗಾಗಿ ದುಡಿಯುವುದಕ್ಕೆ - ತಮ್ಮ ಸುಖ ಸಂತೋಷಗಳನ್ನು ಹೆಚ್ಚಿಸುವುದಕ್ಕೆ ಎಂಬ ಭಾವನೆಯೇ ಅವರ ಮನಸ್ಸಿನಲ್ಲಿ ಬೇರೂರಿತು. ಬಡಜನರೂ ಭೃತ್ಯಾದಿಗಳೂ ಪಶುಗಳಿಗಿಂತಲೂ ನಿಕೃಷ್ಟ ಸ್ಥಿತಿಯಲ್ಲಿ ಜೀವಿಸತೊಡಗಿದರು. ಅನೇಕ ಸಂದರ್ಭಗಳಲ್ಲಿ ಬದುಕಿರುವುದಕ್ಕಿಂತಲೂ ಸಾಯುವುದೇ ಮೇಲು ಎಂದು ಅವರು ಯೋಚಿಸುವಂತಾಯಿತು.

ಧನಮದ ಕುಲಮದ ಅಧಿಕಾರಮದಗಳಿಂದ ಗರ್ವಿತರಾಗಿದ್ದ ಬಲಿಷ್ಟ

ಕರಾದ ಪ್ರಜೆಗಳನ್ನು ಪೀಡಿಸಿದರೆ ಪ್ರಯೋಜನವೇನು' ಎಂದು ಧೈರ್ಯದಿಂದ ಸಾರಿ ಹೇಳಿದನು. ಸರ್ಕಾರದವರು, ಆತನ ನಡೆವಳಿಕೆಗಳನ್ನು ಕಾಯಲು ಗೂಢಚಾರರನ್ನು ನಿಯಮಿಸಿದರು. ಆದರೂ ಆತನು ಲೇಶಮಾತ್ರವೂ ಅಧೈರ್ಯಪಡದೆ ತನಗೆ ಸತ್ಯವೆಂದು ತೋರಿದ ವಿಚಾರಗಳನ್ನು ನಿರ್ಭಯವಾಗಿ ನುಡಿದು, ಸರ್ವದಾ ಬಡ ಪ್ರಜೆಗಳ ಪಾಲಿನ ದೈವವಾಗಿ ಅವರ ಬೆಂಬಲಕ್ಕೆ ನಿಂತಿದ್ದನು.

೧೯೧೦ನೆಯ ಸಂವತ್ಸರ. ಆಗ ನಮ್ಮ ಕಥಾನಾಯಕನಿಗೆ ಎಂಭತ್ತೆರಡು ವರುಷ ಪ್ರಾಯ. ಆಗ ಒಂದು ದಿನ ಆತನಿಗೆ ತಟಕ್ಕನೆ ಬುದ್ಧಿಭೇದವುಂಟಾಯಿತು. ಆಗ್ಗೆ ಮೂವತ್ತು ವರ್ಷಗಳಿಂದಲೂ, ಕ್ರಮ ಕ್ರಮವಾಗಿ ಸಾಧನೆಮಾಡುತ್ತ ಬಂದಿದ್ದ ತ್ಯಾಗಬುದ್ಧಿಯು ಅಂದು ತನ್ನ ಪರಮಾವಧಿ ಸ್ಥಿತಿಗೆ ಏರಿತು. ಸರ್ವಸಂಗವನ್ನೂ ಪರಿತ್ಯಾಗಮಾಡಿ, ಭಾರತದೇಶದ ಋಷಿಮುನಿಗಳಂತೆ ಗೃಹತ್ಯಾಗಮಾಡಿ, ವನವನ್ನು ಸೇರಿ ಪರಮಾತ್ಮಧ್ಯಾನದಲ್ಲಿ ಕಾಲಕಳೆಯಲು ನಿಶ್ಚಯಿಸಿ ಹೊರಹೊರಟನು. ಆತನು ಹೊರಟಕಾಲವಾದರೋ ಚಳಿಗಾಲ. ಅತಿಶಯ ಹಿಮ. ಚಳಿ. ಎಂಭತ್ತೆರಡು ವಯಸ್ಸಿನ ಆ ವೃದ್ಧನು, ಏಕಾಂಗಿಯಾಗಿ, ಪಾದಚಾರಿಯಾಗಿ ಯಾವ ಮಾರ್ಗವಾಗಿ ಎಲ್ಲಿಗೆ ಹೋದನೆಂಬುದು ಮನೆಯಲ್ಲಿ ಯಾರಿಗೂ ತಿಳಿದಿರಲಿಲ್ಲ. ಕೊನೆಗೆ ಆತನು ಎಲ್ಲಿಗೆ ಹೋದನೋ ಏನಾದನೋ ಕಂಡುಹಿಡಿಯಬೇಕೆಂದು ಆತನ ಒಬ್ಬ ಮಗಳೂ, ಅವರ ಕುಟುಂಬದ ವೈದ್ಯನೂ ಪ್ರಯತ್ನ ನಡೆಸಿದರು. ಆ ಮಹನೀಯನು, ವೃದ್ಧಾಪ್ಯದಿಂದಲೂ, ಚಳಿಯ ಬಾಧೆಯಿಂದಲೂ, ಅಷ್ಟಾಪೋವೋ ಎಂಬೊಂದು ದೂರದ ರೈಲ್ವೆಸ್ಟೇಷನ್ ಪಕ್ಕದಲ್ಲಿ ಪರಲೋಕಯಾತ್ರೆ ಮಾಡಿದಂತೆ ತಿಳಿಯಬಂತು. ಮೃತ್ಯುವು ಆತನನ್ನು ಆಕ್ರಮಣಮಾಡಿದಾಗಲೂ, ಆ ಮಹನೀಯನು ಸತ್ಯಾನ್ವೇಷಣೆಯ ಮಹತ್ಕಾರ್ಯದಲ್ಲೇ ತೊಡಗಿದ್ದನೆಂದೂ, ತನ್ನ ಆತ್ಮೋದ್ದೇಶದಂತೆ ನಡೆಯಲು ಸಂಸಾರದ ತಾಪತ್ರಯಗಳೂ ಪ್ರೇಮಾನುಬಂಧಗಳೂ ವಿಘ್ನಬರುತ್ತವೆಂಬುದನ್ನು ತಿಳಿದು ಅದಕ್ಕಾಗಿಯೇ ಮನೆಬಿಟ್ಟು ಬಂದೆನೆಂದೂ ವಿಸ್ತಾರವಾಗಿ ಒಂದು ಪತ್ರದಲ್ಲಿ ಬರೆದಿಟ್ಟಿದ್ದು, ಅದು ತನ್ನ ಮರಣಾನಂತರ ತನ್ನ ಪತ್ನಿಗೆ ಸಿಕ್ಕುವಂತೆ ಏರ್ಪಡಿಸಿದ್ದನಂತೆ! ಹೀಗೆ ತನ್ನ ಜೀವಮಾನದ ಬಹು ಭಾಗವನ್ನು ಲೋಕಸೇವಾಕಾರ್ಯಕ್ಕಾಗಿಯೇ ವಿನಿಯೋಗಿಸಿದ ಆ ಮಹಾನುಭಾವನು,

ತಾನು ಹೇಗೆ ಪರೋಪಕಾರಿಯಾಗಿ ಜೀವಿಸಿದನೋ ಹಾಗೆಯೇ ಸತ್ಪುರುಷನೆಂದು ಪ್ರಪಂಚವೇ ಹೊಗಳುತ್ತಿರಲು, ತನ್ನ ಧನ್ಯ ಜೀವಿತವನ್ನು ಸಾಕುಗೊಳಿಸಿ ಪರಲೋಕ ಪ್ರಯಾಣಮಾಡಿದನು. ಇಂತಹ ಮೃತಜೀವಿಗಳೇ ಅಲ್ಲವೆ, ಲೋಕೋದ್ಧಾರಕರಾದ ಮಹಾತ್ಮರೆನ್ನಿಸಿಕೊಳ್ಳಲು ಅರ್ಹರಾಗುವರು.

## ಉಪಸಂಹಾರ

ನಮ್ಮ ಕಥಾನಾಯಕನು ಜನ್ಮತಃ ರಷ್ಯಾದೇಶೀಯನೇ ಆದರೂ, ಆತನು ತನ್ನ ಹಲವುಮುಖ್ಯ ಕಾರ್ಯಗಳ ಮೂಲಕ ತನ್ನ ದೇಶದ ಎಲ್ಲೆಕಟ್ಟನ್ನು ಮೀರಿ ಪ್ರಪಂಚದ ಮೂಲೆಮೂಲೆಯನ್ನೂ ಪ್ರವೇಶಿಸಿಬಿಟ್ಟಿದ್ದಾನೆ. ಆತನ ಕಾರ್ಯಕಲಾಪವೂ, ಗ್ರಂಥರಚನಾಕಾರ್ಯವೂ, ವಾಗ್ವಿಜೃಂಭಣೆಯೂ, ಕಾವ್ಯಾದಿರಚನಾಪ್ರೌಢಿಮೆಯೂ ಲೋಕವನ್ನೇ ಆಶ್ಚರ್ಯಗೊಳಿಸುವಂತೆ ಇವೆ. ಆತನು, ಮತ ಧರ್ಮ ನೀತಿ ಸಂಬಂಧವಾದ ಮತ್ತು ಸಾಮಾಜಿಕ, ರಾಜಕೀಯ ಮುಂತಾದ ಅನೇಕಾನೇಕ ಮುಖಗಳಿಂದ, ನೂತನ ನೂತನಗಳಾದ ಹಲವು ವಿಷಯಗಳನ್ನು ಜನಾಂಗದ- ಲೋಕದ ದೃಷ್ಟಿಪಥಕ್ಕೆ ತಂದಿಟ್ಟಿದ್ದಾನೆ. ಸಾಹಿತ್ಯಸೇವೆಯ ಕ್ಷೇತ್ರದಲ್ಲಾದರೂ ಸ್ವಲ್ಪವಲ್ಲ ಆತನ ಪರಿಶ್ರಮವು ಎಷ್ಟೋ ಸಣ್ಣ ಪುಟ್ಟ ಕಥೆಗಳು, ನಾಟಕಗಳು, ಕಾದಂಬರಿಗಳು ಇವಲ್ಲದೆ, ಆತನ ಮಾರ್ಗವನ್ನು ತಪ್ಪೆಂದು ಹಳಿದು ಪ್ರತಿಭಟಿಸುವವರ ಸಮಾಧಾನಕ್ಕಾಗಿ ಪತ್ರಿಕೆಗಳಿಗೆ ಬರೆದ ಲೇಖನಗಳು, ಹೀಗೆ ಆತನ ಲೇಖನ ವ್ಯವಸಾಯವು ಅಪಾರವಾಗಿದೆ. ತನ್ನ ಈ ಬಹು ಮುಖ ಸೇವೆಯಿಂದ ಲಿಯೋ ಟಾಲ್ಸ್ಟಾಯಿಯು ಮರುಭೂಮಿಯಂತೆ ಬೆಂಗಾಡಾಗಿದ್ದ ತನ್ನಾ ಮಾತೃಭೂಮಿಯನ್ನು ನಂದನವನವೆನ್ನಿಸಿದನು. ಇಂದು ಅಲ್ಲಿಯ ಜನಗಳು ಅನುಭವಿಸುತ್ತಿರುವ ಸುಖಸಂತೋಷಗಳಿಗೂ, ಆ ದೇಶೀಯರನ್ನನುಸರಿಸಿ ಪರದೇಶಗಳವರು ಅನುಸರಿಸತೊಡಗುವ ದಿವ್ಯಾದರ್ಶಕ್ಕೂ ಆತನೇ ಮೂಲಕಾರಣನೆಂದರೆ ಅದರಲ್ಲಿ ಅತಿಶಯೋಕ್ತಿಯಿಲ್ಲ — ಹೀಗೆ ಸತ್ಯಾನ್ವೇಷಣೆಗಾಗಿಯೇ ತನ್ನ ಜೀವಿತವನ್ನು ಧಾರೆಯೆರೆದು ತ್ರಿಕರಣಶುದ್ಧಿಯಿಂದ ಪರೋಪಕಾರನಿರತನಾಗಿದ್ದ ಈ ಮಹಾನುಭಾವನ ದಿವ್ಯಾದರ್ಶವು ಸಕಲ ಸುಜನರಿಗೂ ಮಾರ್ಗದರ್ಶಕವಾಗಿ ಜಗತ್ತನ್ನು ಸತ್ಪಥದಲ್ಲಿ ನಡೆಯಿಸಿ ಜನ್ಮಸಾರ್ಥಕ್ಯವನ್ನುಂಟುಮಾಡಲು ಸಹಾಯಕವಾಗಿರಲಿ.

ತಥಾಸ್ತು.